# ಮುಂ ಕ ಣ್



## ಪರಿವಿಡಿ





# ಮುಂಕಣ್

ಶ್ರೀ ಕುಮಾರಸ್ವಾಮಿಗಳು ನವಕಲ್ಯಾಣಮಠ,
ಧಾರವಾಡ

ಬೆಲೆ: ೨ ರೂ. ೫೦ ನಯೆ ಪೈಸೆ

# ಶ್ರೀ ಕುಮಾರಸ್ವಾಮಿಗಳು ನವಕಲ್ಯಾಣಮಠ,
# ಧಾ ರ ವಾ ಡ



| | | |
|---|---|---|
| ಜನನ | ಪದವಿಧರ | ಆಶ್ರಮಸ್ವೀಕಾರ |
| ೧೯೦೯ | ೧೯೩೨ | ೧೯೩೩ |

# ಪ್ರಸ್ತಾವನೆ

ಧಾರವಾಡ ನವಕಲ್ಯಾಣಮಠದ ಶ್ರೀ ಕುಮಾರಸ್ವಾಮಿಗಳು ಸುಪ್ರಸಿದ್ಧ ತತ್ವಜ್ಞಾನಿಗಳೂ ಸುವಿಚಾರದ ಸಮಾಜವಾದಿಗಳೂ ನುರಿತ ಲೇಖಕರೂ ಒಳ್ಳೆಯ ತರಗತಿಯ ವಾಗ್ಮಿಗಳೂ ಆಗಿದ್ದಾರೆ; ಅಲ್ಲದೆ ಅವರು ಉನ್ನತ ನಿಲವಿನ ಯೋಗಿಗಳೂ ಆಗಿದ್ದಾರೆ. ಅವರ ಲೇಖನ ಭಾಷಣಗಳಲ್ಲಿ, ಅವರ ದಿನದಿನದ ನಡೆನುಡಿಗಳಲ್ಲಿ ಇದು ಸ್ಫುಟವಾಗಿ ವ್ಯಕ್ತಗೊಳ್ಳುತ್ತದೆ. ಅವರು ಅಧ್ಯಾತ್ಮ ಜೀವನದ ಪ್ರವಾದಿಗಳಾಗಿದ್ದಂತೆ ಮಾನವಕುಲದ ಸ್ವಾತಂತ್ರ್ಯ-ಬಾಂಧವ್ಯಗಳ ಪ್ರಸ್ಥಾಪಕರೂ ಆಗಿದ್ದಾರೆ. ಜೀವನವು ಅಖಂಡವಾಗಿದೆ ಎಂಬ ಸಿದ್ಧಾಂತದ ಬಗೆಗಿನ ಅವರ ದೃಢವಾದ ವಿಶ್ವಾಸ, ಅವರಿಗಿದ್ದ ಅದರ ಪ್ರತಿಪಾದನಾಸಾಮರ್ಥ್ಯ, ಅವರ ಪರಿಶುದ್ಧವಾದ ಮನವನ್ನು ಆಕರ್ಷಿಸುವ ಸುಲಲಿತವಾದ ಶೈಲಿ, ಭಾಷೆಯ ಮೇಲಿನ ಅವರ ಪ್ರಭುತ್ವ— ಇವು ಜನತೆಯ ಲಕ್ಷ್ಯವನ್ನು ಸೆಳೆದಿರುತ್ತವೆ. ಶ್ರೀಗಳವರ ವ್ಯಕ್ತಿತ್ವವು ಜನತೆಯ ಮೇಲೆ ಗಹನವಾದ ಪ್ರಭಾವವನ್ನು ಬೀರಿರು-ತ್ತದೆ. ಅವರ ವ್ಯಕ್ತಿತ್ವದಲ್ಲಿ ಚೇತೋಹಾರಿಯಾದ ಪರಿಣಾಮಕಾರಿಯಾದ ಮಾಧುರ್ಯ ಮತ್ತು ಸಾತ್ವಿಕ ನೈತಿಕ ಬಲ ಇವೆರಡು ಮುಖ್ಯ ಗುಣಗಳಾಗಿರುತ್ತವೆ ಅವರಲ್ಲಿಯ ಮಹೋನ್ನತವಾದ ಮಾಧುರ್ಯವು ಅವರ ಮಾತು ಕೃತಿಗಳನ್ನೆಲ್ಲ ಬೆಳಗಿ ಭವ್ಯಗೊಳಿಸುತ್ತಿರುವುದು. ಅವರ ನೈತಿಕ ಬಲವು ಅವರು ಸಂಪಾದಿಸಿದ ಶಾಂತವಾದ ಸವಿಯಾದ ಸರಲವಾದ ಸಚ್ಛೀಲದ ಸದ್ಭಾವನೆಯನ್ನೇ ತೆರೆದಿಡುತ್ತಿರುವದು; ಅದು ವಿನಮ್ರವೂ ವಿವೇಕಪೂರ್ಣವೂ ಆಗಿರುವುದರಿಂದ ಅದು ತುಂಬಾ ಗೌರವ ಆದರಗಳಿಗೆ ಪಾತ್ರವಾಗಿರುವದು.

ಸಾರ್ವಜನಿಕವಾದ ವ್ಯಾಖ್ಯಾನಗಳಲ್ಲೆಲ್ಲ ಶ್ರೀ ಕುಮಾರಸ್ವಾಮಿಗಳವರು ಒಂದು ಪ್ರಶಾಂತವೂ ಗಂಭೀರವೂ ಆದ ವಾತಾವರಣವನ್ನೇ ನಿರ್ಮಿಸುತ್ತಿರುವರು. ಸದೃಢವಾದ ಸ್ಪಷ್ಟವಾದ ಅಂತೆಯೇ ಸವಿಯಾದ ಅವರ ಕಂಠವು ವಾಯು ತರಂಗಗಳಲ್ಲಿ ತುಂಬಿಕೊಂಡು ಎತ್ತರವಾಗಿ ಏರುತ್ತಿರುವದು. ಪ್ರಭಾವಿಯೂ ಪ್ರಸನ್ನವೂ ಆದ ಅವರ ಹಾವಭಾವಗಳು ಅವರ ಶಬ್ದ ಸಂಪತ್ತಿಯನ್ನು ವಿಶದಗೊಳಿಸುತ್ತಿವೆ. ತೇಜಃಪುಂಜವಾದ ಅವರ ಕಣ್ಣುಗಳು ಒಮ್ಮೆ ಕಿಡಿಗೆದರಿ, ಒಮ್ಮೆ ಕರುಣೆಯನ್ನು ಬೀರಿ ಶ್ರೋತೃಗಳ ಕಣ್ಮನಗಳಲ್ಲಿ ವಿದ್ಯುತ್ ಸಂಚಾರಗೆಯ್ಯು-ತ್ತಿರುತ್ತವೆ. ಕೃತಿಯ ಪರಮೋತ್ಸಾಹದಲ್ಲಾಗಲಿ, ಕಲೆಯ ಸೌಂದರ್ಯ

ಸೂಚನೆಯಲ್ಲಾಗಲಿ, ಇಲ್ಲವೆ ನಂಬುಗೆಯ ಬಗೆಗಿನ ಹಬ್ಬಿ ಹರಿವ ಹಂಬಲದಲ್ಲಾಗಲಿ ಅವರ ಆತ್ಮ ನಾಮಗಾನವೇ ನಿನದಿಸುತ್ತದೆ. ಇದಕ್ಕೂ ಮಿಗಿಲಾಗಿ ಉಗಿಯಂತ್ರದೊಳಗಣ ಶಕ್ತಿಯುತವಾದ ಉಗಿಯಂತೆ, ಉತ್ಸಾಹರಹಿತವಾದ ಉದಾಸೀನಭರಿತವಾದ ಮನಕ್ಕೆ ಸತ್ಯವನ್ನು ನೇರವಾಗಿ ನಿಲುಕಿಸುವ ನಿಬಿಡವಾದ ನಿಷ್ಠಾಬಲವೂ ಅವರಿಗುಂಟು. ಅಂತೆಯೇ ಅವರ ವ್ಯಾಖ್ಯಾನ ಪ್ರವಚನಗಳು ಅತಿಶಯವಾದ ಪ್ರಶಂಸೆಗೆ ಪಾತ್ರವಾಗುತ್ತಿರುತ್ತವೆ. ೧೯೫೩ ರಲ್ಲಿ ಋಷಿಕೇಶದಲ್ಲಿ 'ಆನಂದಕುಟೀರ'ದ ಸ್ವಾಮಿ ಶಿವಾನಂದ ಸರಸ್ವತೀ ಮಹಾರಾಜರ ಸಂಚಾಲಕತ್ವದಲ್ಲಿ ಜರುಗಿದ್ದ ಅಂತರ್‌ರಾಷ್ಟ್ರೀಯ ಧರ್ಮ ಸಮ್ಮೇಳನದ ಎರಡನೆಯ ದಿನದ ಕಾರ್ಯಕ್ರಮಗಳಿಗೆ ಅಧ್ಯಕ್ಷತೆಯನ್ನು ವಹಿಸಿ ಅಂದು ಶಿವಯೋಗದ ಬಗೆಗೆ ಶ್ರೀ ಕುಮಾರಸ್ವಾಮಿಗಳು ಹೇಳಿದ ಪ್ರಭಾವಿಯಾದ ಮಾತುಗಳು ಯೋಗದ ಮತ್ತು ಅವರ ಗೊತ್ತುಗುರಿಗಳ ವಿಷಯವಾಗಿ ವಿದ್ವಾಂಸರಲ್ಲಿ ಒಂದು ನವೀನವಾದ ವಿಚಾರಪ್ರಣಾಲಿಯನ್ನು ಹರಿಬಿಟ್ಟಿರುತ್ತವೆ.

ಯೋಗದ ಬಗೆಬಗೆಯ ಸ್ವರೂಪಗಳನ್ನು ಆಳವಾಗಿ ಅಭ್ಯಾಸ ಮಾಡಿ ಅವುಗಳ ಅನುಸಂಧಾನವನ್ನೂ ಕಂಡಿದ್ದಾರೆ ಶ್ರೀ ಕುಮಾರಸ್ವಾಮಿಗಳವರು. ಸಹಜವಾದ ಮಾತುಕತೆಗಳಲ್ಲಿ ಶ್ರೀಗಳವರು ಯೋಗದ ಪರಿಭಾಷೆಯನ್ನೇ ಬಳಸುತ್ತಿದ್ದಾರೆ. ಅದು ಅವರ ಅಂಗಕ್ಕೆ ಅಳವಟ್ಟಿದ್ದ ಯೋಗದ ನಿಲವನ್ನು ಎತ್ತಿ ತೋರಿಸಿಕೊಡುತ್ತದೆ. ಈ ಗ್ರಂಥದಲ್ಲಿ ಸಂಕಲಿತವಾದ ಅವರ ವಿಚಾರಗಳಲ್ಲಿ ಯೋಗ–ಶಿವಯೋಗಗಳಿಗೆ ಸಂಬಂಧಿಸಿದ ಅನೇಕ ಮಾತುಗಳು ಬಂದಿರುತ್ತವೆ. ಸಾಮಾನ್ಯರಿಗೆ ನಿಲುಕಲಾರದ ಜಟಿಲವಾದ ಯೋಗ ಸಿದ್ಧಾಂತಗಳನ್ನು ಬಹು ಸುಲಭವಾಗಿ ವಿವರಿಸಿರುವುದನ್ನು ಈ ಗ್ರಂಥದಲ್ಲಿ ಕಾಣಬಹುದು. ಇದನ್ನು ಅಭ್ಯಾಸಿಸುವುದರಿಂದ ಜನತೆಯಲ್ಲಿ ಯೋಗದ ಬಗೆಗಿದ್ದ ತಿಳಿವಳಿಕೆಯಲ್ಲಿ ಒಂದು ಹೊಸ ದೃಷ್ಟಿಕೋನವು ರೂಪುಗೊಳ್ಳಬಹುದೆಂಬುದನ್ನು ನೆನಿಸಲಾಗಿದೆ.

ಈ ಗ್ರಂಥವನ್ನು ಸಿದ್ಧಗೊಳಿಸುವಾಗ ನೆರವನ್ನು ಪಡೆದ ಕೃತಿಗಳ ಕರ್ತೃಗಳಿಗೆ ಮತ್ತು ಆ ಕೃತಿಗಳ ಪ್ರಕಾಶಕರಿಗೆ ಉಪಕೃತರಾಗಿದ್ದೇವೆ.

ನವಕಲ್ಯಾಣಮಠ, ಧಾರವಾಡ
೮–೩–೧೯೫೯

—ಪ್ರಕಾಶಕರು

# ಸಂಭೂತಿವಾದ

ಭಾರತೀಯ ತತ್ವಶಾಸ್ತ್ರದಲ್ಲಿ ಹಲವಾರು ವಾದಗಳು ಬೆಳೆದು ಬಿಟ್ಟಿರುತ್ತವೆ. ಸ್ವಭಾವವಾದ, ಆರಂಭವಾದ, ಪರಿಣಾಮವಾದ, ವಿವರ್ತವಾದ, ಅಜಾತವಾದ– ಹೀಗೆ ಅನೇಕ ವಾದಗಳ ಹೆಸರುಗಳನ್ನು ನಾವು ಕೇಳುತ್ತಿರುತ್ತೇವೆ. ಭಾರತೀಯ ಷಡ್ದರ್ಶನಗಳಲ್ಲಿ ನ್ಯಾಯ ಮತ್ತು ವೈಶೇಷಿಕ ಈ ಎರಡು ದರ್ಶನಗಳ ಸಿದ್ಧಾಂತದಲ್ಲಿ ಸ್ವಲ್ಪಮಟ್ಟಿಗೆ ಹೆಚ್ಚುಕಡಿಮೆ ಇದ್ದರೂ ಅವು ಸಾಮಾನ್ಯವಾಗಿ ಆರಂಭ-ವಾದವನ್ನು ಎತ್ತಿ ಹಿಡಿಯುತ್ತವೆ. ಹಾಗೆಯೇ ಸಾಂಖ್ಯ ಮತ್ತು ಪಾತಂಜಲ ಯೋಗದರ್ಶನದಲ್ಲಿ ಕೊಂಚಮಟ್ಟಿಗೆ ವ್ಯತ್ಯಾಸವಿದ್ದರೂ ಅವೆರಡೂ ಪರಿಣಾಮ ವಾದವನ್ನು ಇಲ್ಲವೆ ಸತ್ಕಾರ್ಯವಾದವನ್ನು ನಿರೂಪಿಸುತ್ತವೆ. ಪೂರ್ವ ಮೀಮಾಂಸ ಮತ್ತು ಉತ್ತರಮೀಮಾಂಸ ಅಥವಾ ವೇದಾಂತವು ವಿವರ್ತ ವಾದವನ್ನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಅಜಾತವಾದವನ್ನು ಪ್ರಸ್ಥಾಪಿಸುತ್ತವೆ. ಷಡ್ದರ್ಶನಗಳಿಂದೊಗೆದ ಈ ವಾದಗಳಿಂದ ಸಾಕಷ್ಟು ತತ್ವಮಥನವುಂಟಾಗಿರುತ್ತದೆ. ಆದರೆ 'ಸಂಭೂತಿವಾದ' ಎಂಬ ಇನ್ನೂ ಒಂದು ವಾದವು ಇರುತ್ತದೆ. ಭಾರತೀಯ ತತ್ವವಿದರು ಈ ವಾದದತ್ತ ಅಷ್ಟು ಲಕ್ಷ್ಯವನ್ನು ಕೊಟ್ಟಂತೆ ಕಾಣುವದಿಲ್ಲ. ಷಡ್ದರ್ಶನಗಳ ಪಂಕ್ತಿಗೆ, ನಮ್ಮ ತಿಳಿವಳಿಕೆಯಲ್ಲಿ ಬಂದ ಭಾರತೀಯ ವಾದಗಳ ಸಾಲಿಗೆ, ಸೇರಲು ಈ ವಾದವು ಅರ್ಹತೆಯನ್ನು ಪಡೆದಂತೆ ಕಾಣಲಿಲ್ಲ. ಆ ದರ್ಶನಗಳಿಗೆ ಆ ವಾದಗಳಿಗೆ ಒಂದು ಸುವ್ಯವಸ್ಥಿತ ಸ್ವರೂಪವನ್ನು ಕೊಟ್ಟು ಅವನ್ನೊಂದು ಸಿದ್ಧಾಂತರೂಪದಲ್ಲಿ ಮಂಡಿಸಲು ಪ್ರಯತ್ನ ಪಟ್ಟಂತೆ ಈ ಸಂಭೂತಿವಾದದ ಬಗೆಗೆ ಪ್ರಯತ್ನ ನಡೆದಿರುವದಿಲ್ಲ.

ಗ್ರೀಕ ತತ್ವಜ್ಞಾನಿಗಳಲ್ಲಿ ಎಲ್ಲಕ್ಕೂ ಮೊದಲು ಸಂಭೂತಿವಾದದ ಬಗೆಗೆ ಪ್ರಸ್ಥಾಪವನ್ನೆತ್ತಿ ಅದನ್ನು ಸರಿಯಾಗಿ ಸಿದ್ಧಾಂತರೂಪದಲ್ಲಿ ಮಂಡಿಸಲು ಪ್ರಯತ್ನ ಪಟ್ಟವನು ಪ್ಲೋಟೀನಸನು. ತತ್ವಗಳು ಲೋಕಗಳು ಬ್ರಹ್ಮನ ನೈಜ ವಾದ ಶಕ್ತಿಯಿಂದ ಹೊರಹೊಮ್ಮುವವಲ್ಲದೆ ಆತನ ಚೇಷ್ಟೆ ಅಥವಾ ಇಚ್ಛೆಯಿಂದ ಇಲ್ಲವೆ ಸಂಕಲ್ಪಶಕ್ತಿಯಿಂದ ಅಲ್ಲ— ಎಂಬುವದನ್ನು ಸಾರುವದೇ ಈ ವಾದದ ಮುಖ್ಯ ಉದ್ದೇಶವಾಗಿರುತ್ತದೆ. ಈ ವಾದದ ಸಿದ್ಧಾಂತಗಳು ಪರಂಪರೆಯಿಂದ ಇಳಿದು ಬಂದು ಕೆಲವು ದಿನಗಳ ತರುವಾಯ ಮನ್ನಣೆಯನ್ನು ಪಡೆದುವು. ಕಡೆಗೆ

ಥಿಯೊಸೋಫಿಸ್ಟ ಎನ್ನುವವರು ಈ ಸಂಭೂತಿವಾದವನ್ನು ಪ್ರಸ್ತಾಪಿಸಹತ್ತಿದ್ದಾರೆ. ಥಿಯೊಸೋಫಿ ಶಬ್ದದಲ್ಲಿ ಬರುವ 'ಥಿಯೊ' ಪದಕ್ಕೆ ದೇವರೆಂದೂ 'ಸೋಫಿಯಾ' ಪದಕ್ಕೆ ಜ್ಞಾನವೆಂದೂ ಅರ್ಥವಾಗುತ್ತದೆ. ಆದ್ದರಿಂದ ಥಿಯೊಸೋಫಿ ಎಂದರೆ ಬ್ರಹ್ಮಜ್ಞಾನ. ಥಿಯೊಸೋಫಿಸ್ಟರು ಬ್ರಹ್ಮಜ್ಞಾನವಾದಿಗಳು. ಉಪನಿಷತ್ತು ವೇದಾಂತಗಳಲ್ಲಿ ಪರಾವಿದ್ಯೆ ಅಪರಾವಿದ್ಯೆ ಎಂಬ ಎರಡು ವಿದ್ಯೆಗಳ ಉಲ್ಲೇಖ ಬರುತ್ತದೆ. ಬ್ರಹ್ಮಜ್ಞಾನವಾದಿಗಳ ಬ್ರಹ್ಮವಿದ್ಯೆಯು ಉಪನಿಷತ್ತಿನ ಪರಾ ವಿದ್ಯೆಗೆ ಸಮೀಪವಾಗಿರುತ್ತದೆ. ಇಂದು ಸಂಭೂತಿವಾದವನ್ನು ಪ್ರಚಾರಗೊಳಿ-ಸುತ್ತಿರುವವರು ಈ ಪರಾವಿದ್ಯೆಯನ್ನೇ ಎತ್ತಿ ಹಿಡಿಯುತ್ತಿದ್ದಾರೆ. ಥಿಯೊ-ಸೋಫಿಯ ಪ್ರವರ್ತಕರಲ್ಲಿ ಅಗ್ರಸ್ಥಾನವನ್ನು ಪಡೆದಿರುವ ಮ್ಯಾಡಮ್ ಬ್ಲಾವಟಸ್ಕಿ ಅವಳು ತನ್ನ 'ಬ್ರಹ್ಮಜ್ಞಾನದ ಬೀಗದ ಕೈ' (Key to Theosophy) ಎಂಬ ಗ್ರಂಥದಲ್ಲಿ ಪರಿಣಾಮವಾದ (Theory of Evolution) ಹಾಗು ಸಂಭೂತಿ ವಾದ (Theory of Emanation) ಇವುಗಳಲ್ಲಿರುವ ಸೂಕ್ಷ್ಮ ಭೇದವನ್ನು ಎತ್ತಿ ತೋರಿಸಿದ್ದಾಳೆ. ಆದರೂ ಅಲ್ಲಿ ಈ ಸಂಭೂತಿವಾದಕ್ಕೆ ಒಂದು ಸ್ಪಷ್ಟವಾದ ಸುವ್ಯವಸ್ಥಿತವಾದ ಸ್ವರೂಪವನ್ನು ಕೊಟ್ಟಂತೆ ತಿಳಿದುಬರುವದಿಲ್ಲ.

ಮೇಲೆ ಸೂಚಿಸಿದಂತೆ ಈ ಸಂಭೂತಿವಾದವು ಭಾರತೀಯರಿಗೇನೂ ಹೊಸದಲ್ಲ. ಆದರೆ ಸಿದ್ಧಾಂತರೂಪದಲ್ಲಿ ವ್ಯಕ್ತವಾಗಿಲ್ಲ ಅಷ್ಟೆ! ಉಪನಿಷತ್ತು ಗಳಲ್ಲಿ ಸೃಷ್ಟಿಯ ಕ್ರಮವನ್ನು ನಿರೂಪಿಸುತ್ತ "ಆತ್ಮನಃ ಆಕಾಶಃ, ಆಕಾಶಾತ್ ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಅದ್ಭ್ಯಃ ಪೃಥ್ವೀ" ಅಂದರೆ ಆತ್ಮನಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲ, ಜಲದಿಂದ ಪೃಥ್ವಿ ಸಂಭವಿಸಿತು— ಎಂದು ಹೇಳಲಾಗಿದೆ. ಆತ್ಮನಿಂದ ಆಕಾಶ, ಆಕಾಶದಿಂದ....ಪೃಥ್ವಿಯ ವರೆಗೆ ಒಂದರಿಂದ ಒಂದು ಸಂಭವಿಸುವವಾದುದರಿಂದ ಈ ಸಂಭವಕ್ರಮ ನಿರೂಪಣೆಯೇ ಸಂಭೂತಿವಾದವು. 'ಸಂಭವ ಸಂಭೂತಿ' ಪದಗಳು ಸಾಮಾನ್ಯವಾಗಿ 'ಹುಟ್ಟು' ಎಂಬ ಅರ್ಥವನ್ನು ತಿಳಿಸುತ್ತವೆ. ಇದರಿಂದ ಆತ್ಮನಿಂದ ಆಕಾಶ, ಆಕಾಶದಿಂದ....ಪೃಥ್ವಿಯ ವರೆಗಿನ ವಸ್ತುಗಳು, ಒಂದರಿಂದ ಒಂದು ಹುಟ್ಟಿದವು ಎಂದು ಅರ್ಥವನ್ನು ಹಚ್ಚಬಯಸಬಹುದು. ಆದರೆ ಇಲ್ಲಿ ಒಂದರಿಂದ ಇನ್ನೊಂದು ಹುಟ್ಟುವವೆಂಬ ಅರ್ಥವಲ್ಲ. ನಿಜವಾಗಿ ಒಂದರಿಂದ ಒಂದು ಹುಟ್ಟಲಿಲ್ಲ. ಒಂದು ಇನ್ನೊಂದರಿಂದ ಹೊರಹೊಮ್ಮಿತು. ಆತ್ಮನಿಂದ ಆಕಾಶವು ಹೊರಹೊಮ್ಮಿತು, ಆಕಾಶದಿಂದ ವಾಯು ಹೊರಹೊಮ್ಮಿತು,

ವಾಯುವಿನಿಂದ ಅಗ್ನಿಯು ಹೊರಹೊಮ್ಮಿತು, ಅಗ್ನಿಯಿಂದ ಜಲವು ಹೊರಹೊಮ್ಮಿತು, ಜಲದಿಂದ ಪೃಥ್ವಿಯು ಹೊರಹೊಮ್ಮಿತು. 'ಹುಟ್ಟಲಿಲ್ಲ ಹೊರಹೊಮ್ಮಿತು' ಎಂದು ಹೇಳುವಲ್ಲಿ, ಹುಟ್ಟುವದು ಹೊರಹೊಮ್ಮುವದು ಎಂಬೀ ಪದಗಳ ಅರ್ಥದಲ್ಲಿರುವ ಅಭ್ಯಂತರವನ್ನು ಕಾಣಬೇಕು. 'ಹುಟ್ಟುವದು' ಹೊರಗಿನ ಯಾವುದೋ ಒಂದು ಶಕ್ತಿಯ ಕೈವಾಡವನ್ನು ಸೂಚಿಸುವದು. (Force working at a distance); ಆದರೆ ಹೊರಹೊಮ್ಮುವದು ಎಂಬುದರಿಂದ ಆತ್ಮನ ಆಂತರಿಕ ಶಕ್ತಿಯಿಂದ ಕಲೆಯು ಕುಸುರುವ ಮಾತು ವ್ಯಕ್ತವಾಗುವದು ಇಂದಿನ ವೈಜ್ಞಾನಿಕ ಸಿದ್ಧಾಂತವೂ ಸಹ ಈ ಮಾತನ್ನು ಸಮರ್ಥಿಸುವದು. ಮೊಟ್ಟಮೊದಲು ನ್ಯೂಟನ್ನನ ಸಿದ್ಧಾಂತವನ್ನು ಅವಲಂಬಿಸಿ ಈ ಸೃಷ್ಟಿಯಲ್ಲಿ ಗುರುತ್ವಾಕರ್ಷಣ ಶಕ್ತಿಯಿದೆ ಎಂದೂ ಆ ಗುರುತ್ವಾಕರ್ಷಣ ಶಕ್ತಿಯ ಬಲದಿಂದಲೇ ಸೂರ್ಯ ಚಂದ್ರ ನಕ್ಷತ್ರಾದಿಗಳು ತಿರುಗುವವೆಂದೂ ನಾವು ನಂಬಿದ್ದೆವು. ಆದರೆ ಇನ್‌ಸ್ಟನ್ನನ ಸಂಬಂಧ ಸಿದ್ಧಾಂತ (Theory of Relativity) ದಿಂದ ಈ ಮಾತು ಅಲ್ಲಗಳೆಯಲ್ಪಟ್ಟಿರುತ್ತದೆ. ಅಂತಹ ಗುರುತ್ವಾಕರ್ಷಣ ಶಕ್ತಿಯು ಹೊರಗಿಲ್ಲ. ಆ ಶಕ್ತಿಯು ವಸ್ತುಗತವಾಗಿಯೇ ಇರುತ್ತದೆ. ಸೂರ್ಯ ಇತ್ಯಾದಿಗಳು ತಿರುಗುವವು ಎಂದರೆ ತಿರುಗುವ ಗತಿ ಯಾವುದೋ ಒಂದು ಆಕರ್ಷಣ ಅಥವಾ ಉತ್ಕರ್ಷಣಕ್ಕೆ ಒಳಪಟ್ಟು ತಿರುಗುವವು ಎಂದಲ್ಲ. ಹೊರಗಿನ ಶಕ್ತಿಯು ತನ್ನ ಕೈವಾಡವನ್ನು ತೋರಿಸುತ್ತಿಲ್ಲ. ತಿರುಗುವ ಆ ಶಕ್ತಿಯು ಅವಕ್ಕೆ ನೈಜವಾಗಿರುತ್ತದೆ. (There is no such a thing as force working at a distance.) ತಿರುಗುವದು ವಸ್ತುಗಳ ನೈಜ ಧರ್ಮವಾಗಿದೆ. ಇನಸ್ಟನ್ನನ ಅಭಿಮತದಲ್ಲಿ ಸೃಷ್ಟಿಯ ಗತಿಯು ಆ ಧರ್ಮವನ್ನು ಹೊಂದಿಕೊಂಡೇ ಇರುತ್ತದೆ. ಇದಕ್ಕೆ ಆತನು ಚತುರ್ಥಮಿತಿ (Fourth Dimension) ಎಂದು ಕರೆದಿದ್ದಾನೆ. ಅವನ ಈ ಸಿದ್ಧಾಂತದಿಂದ ಹುಟ್ಟುವ ಹೊರಹೊಮ್ಮುವ ಕಾರ್ಯಗಳಿಗಿರುವ ಪ್ರೇರಕ ಶಕ್ತಿಗಳ ಸ್ವರೂಪವು ವಿದಿತವಾಗುತ್ತದೆ. ತಮ್ಮನ್ನು ಬಿಟ್ಟು ಯಾವುದೋ ಒಂದು ವಸ್ತುವಿನ ಆಶ್ರಯದಿಂದ ಸಂಪರ್ಕದಿಂದ ಜನಿಸುವ ಭಾವನೆ 'ಹುಟ್ಟು' ಎಂಬ ಶಬ್ದದಲ್ಲಿದ್ದರೆ, 'ಹೊರಹೊಮ್ಮು' ಎಂಬ ಶಬ್ದದಲ್ಲಿ ಪರಬ್ರಹ್ಮನ ನೈಜವಾದ ಶಕ್ತಿಯಿಂದ 'ಚಿಮ್ಮು' ಎಂಬ ಅರ್ಥಸಂಪತ್ತಿ ಇರುತ್ತದೆ. ಹುಟ್ಟುವುದು ಯಾವುದೋ ಒಂದು ಶಕ್ತಿಯ ಕೈವಾಡವನ್ನು ತಿಳಿಸಿದರೆ, ಹೊರಹೊಮ್ಮುವದು ಆತ್ಮನ ಪರಬ್ರಹ್ಮನ ಸಹಜವಾದ ಶಕ್ತಿಯ ಕಾರ್ಯವನ್ನು

ವಿವರಿಸುತ್ತದೆ. ಒಂದು ಅನ್ಯ ಶಕ್ತಿಯ ಕೈಪಾಡವನ್ನು ಸೂಚಿಸಿದರೆ, ಇನ್ನೊಂದು ಸಂಭೂತಿವಾದವು ಪರಬ್ರಹ್ಮನ ಪಪಾಡವನ್ನು ವ್ಯಕ್ತಗೊಳಿಸುತ್ತದೆ.

ವಚನ ವಾಙ್ಮಯದಲ್ಲಿ ಹೊರಹೊಮ್ಮು ಎಂಬ ಶಬ್ದದ ಸರಿಯಾದ ಪ್ರಯೋಗವನ್ನು ತಿಳಿಸುವ ಹಲಕೆಲವು ವಚನಗಳು ಸಿಗುತ್ತವೆ. ವಚನಭಾಂಡಾರಿ ಶಾಂತರಸ ಎಂಬಾತನ ಒಂದು ವಚನವು ಹೊರಹೊಮ್ಮು ಶಬ್ದಕ್ಕೆ ಇರುವ ಅರ್ಥಗೌರವವನ್ನು ಬಹು ಸರಸವಾಗಿ ವಿವರಿಸುತ್ತದೆ :

ಸ್ಥಳಕುಳವನರಿಯಬೇಕೆಂಬರು
ಭಕ್ತನಾಗಿ ಮಹೇಶ್ವರನಾಗಬೇಕೆಂಬರು
ಮಹೇಶ್ವರನಾಗಿ ಪ್ರಸಾದಿಯಾಗಬೇಕೆಂಬರು,
ಪ್ರಸಾದಿಯಾಗಿ ಪ್ರಾಣಲಿಂಗಿಯಾಗಬೇಕೆಂಬರು
ಪ್ರಾಣಲಿಂಗಿಯಾಗಿ ಶರಣನಾಗಬೇಕೆಂಬರು
ಶರಣನಾಗಿ ಐಕ್ಯನಾಗಬೇಕೆಂಬರು;
ಏತರಿಂದ ಕೂಟವ ನಾನರಿಯೆ !
ಒಳಗಣ ಮಾತು **ಹೊರಹೊಮ್ಮಿ**ಯಲ್ಲದೆ ಎನಗರಿಯಬಾರದು.
ಎನಗೈಕ್ಯನಾಗಿ ಶರಣನಾಗಬೇಕು ;
ಶರಣನಾಗಿ ಪ್ರಾಣಲಿಂಗಿಯಾಗಬೇಕು ;
ಪ್ರಾಣಲಿಂಗಿಯಾಗಿ ಪ್ರಸಾದಿಯಾಗಬೇಕು ;
ಪ್ರಸಾದಿಯಾಗಿ ಮಹೇಶ್ವರನಾಗಬೇಕು ;
ಮಹೇಶ್ವರನಾಗಿ ಭಕ್ತನಾಗಬೇಕು ;
ಭಕ್ತನಾಗಿ ಸಕಲ ಯುಕ್ತನಾಗಬೇಕು.
ಯುಕ್ತಿ ನಿಶ್ಚಯವಾದಲ್ಲಿಯೆ ಐಕ್ಯಸ್ಥಲ !
ಒಳಹೊರಗಾಯಿತ್ತು ; ಅಲೇಖವಾಯಿತ್ತು ; ಎನಗೆ ಕಾಣಬಂದಿತ್ತು.
ಅಲೇಖನಾದ ಶೂನ್ಯಶಿಲೆಯ **ಹೊರಹೊಮ್ಮಿ** ಕಂಡೆ ನಿನ್ನನು.

ಇಲ್ಲಿ ಬಂದಿರುವ 'ಹೊರಹೊಮ್ಮು' ಒಂದೇ ಪದದಲ್ಲಿ ಸಂಭೂತಿವಾದದ ರಹಸ್ಯವೇ ಅಡಗಿರುತ್ತದೆ. 'ಒಳಹೊರಗಾಯಿತ್ತು....(ಆದ್ದರಿಂದ) ಎನಗೆ ಕಾಣಬಂದಿತ್ತು. ಅಲೇಖನಾದ ಶೂನ್ಯಶಿಲೆಯ ಹೊರಹೊಮ್ಮಿ (ಬರಲು) ಕಂಡೆ ನಿನ್ನನು.' ಈ ಹೊರಹೊಮ್ಮುವ ಕಾರ್ಯದಲ್ಲಿ ಸಂಭೂತಿವಾದವು ವ್ಯಕ್ತವಾಗುವದು.

ಆತ್ಮನು ಅಥವಾ ಪರಬ್ರಹ್ಮನು ಪರಿಪೂರ್ಣನಿರುವುದರಿಂದ ಅವನು ಪರಿಣಾಮ ಹೊಂದುವ ಅಗತ್ಯವೇನೂ ಇಲ್ಲ. ಪ್ರಪಂಚವು ಪರಬ್ರಹ್ಮನಿಂದ ಅಥವಾ ಆತ್ಮನಿಂದ ನೈಜವಾಗಿ ಹೊರಹೊರಟ ಒಂದು ಕಳಾವಿಶೇಷವು. ಅಪಾರವಾದ ಆತ್ಮತೇಜದಿಂದ ಅನಿವಾರ್ಯವಾಗಿ ಹೊರಸೂಸಿದ ಕಾಂತಿ ವಿಶೇಷವದು. ಉದಾಹರಣೆಯಿಂದ ಇದನ್ನು ಸ್ಪಷ್ಟಗೊಳಿಸುವದಾದರೆ ಆತ್ಮನು ಅನಂತವಾದ ಅಗಾಧವಾದ ಒಂದು ಬುಗ್ಗೆ ಇದ್ದಂತೆ. ಪ್ರಪಂಚವು ಸ್ವಾಭಾವಿಕ ವಾಗಿ ಆ ಬುಗ್ಗೆಯಿಂದ ಸದಾ ಹೊರಹೊಮ್ಮುತ್ತಿರುವ, ಆದರೂ ಆ ಬುಗ್ಗೆ-ಯನ್ನು ಎಂದೂ ಶೋಷಿಸದ ಒಂದು ಪ್ರವಾಹವಿದ್ದಂತೆ. ಹಾಗೆಯೇ ಪರಮಾತ್ಮನು ಒಂದು ಅಖಂಡವಾದ ತೇಜೋರಾಶಿಯಿಂದ ಕೂಡಿದ ಸೂರ್ಯ-ನಿದ್ದಂತೆ. (ಪರಮಾತ್ಮನು ಶತಕೋಟಿ ಸೂರ್ಯರ ತೇಜಸ್ಸಿನಿಂದ ಕಾಂತಿಯಿಂದ ಕೂಡಿಕೊಂಡಿರುತ್ತಾನೆ ಎಂದು ವರ್ಣನೆ ಬರುವದುಂಟು.) ಪ್ರಪಂಚವು ಶತಕೋಟಿ ಸೂರ್ಯ ತೇಜೋರಾಶಿಯಿಂದ ಹೊರಸೂಸುವ, ಆದರೂ ಆ ಜ್ಯೋತಿಪ್ರಕಾಶ-ವನ್ನು ಎಂದೆಂದೂ ಕಡಿಮೆ ಮಾಡದ ಒಂದು ಕಿರಣವಿದ್ದಂತೆ. ಆದರೆ ಇಲ್ಲಿ ಒಂದು ಮಾತನ್ನು ಮಾತ್ರ ಲಕ್ಷದಲ್ಲಿಡಬೇಕು. ಈ ಹೊರಹೊಮ್ಮುವ ಅಥವಾ ಹೊರಸೂಸುವ ಕ್ರಮದಲ್ಲಿ ಮೂಲದಲ್ಲಿ ಯಾವ ಕಳೆ ಅಥವಾ ಕಾಂತಿ ಇದೆಯೋ ಅದು ಹೊರಹೊಮ್ಮಿದ ಅಥವಾ ಹೊರಸೂಸಿದ ವಸ್ತುವಿನಲ್ಲಿ ಕಡಿಮೆಯಾಗುತ್ತ ಕಡಿಮೆಯಾಗುತ್ತ ಹೋಗುವದು. ಆತ್ಮನಿಂದ ಆಕಾಶವೇನೋ ಹೊರ-ಹೊಮ್ಮಿತು; ಆದರೆ ಆತ್ಮನಲ್ಲಿದ್ದ ಆ ಕಳಾವಿಶೇಷವು, ಆ ಚಿತ್ಕಳೆಯು ಆಕಾಶ-ದಲ್ಲಿ ಕೊಂಚಮಟ್ಟಿಗೆ ಕಡಿಮೆಯಾಯಿತು. ಆಕಾಶದಿಂದ ವಾಯು ಹೊರ-ಹೊಮ್ಮಿತು; ಆದರೆ ಆಕಾಶದಲ್ಲಿದ್ದ ಆ ಚಿತ್‌ಕಳೆಯು ವಾಯುವಿನಲ್ಲಿ ಕೊಂಚ ಮಟ್ಟಿಗೆ ಕಡಿಮೆಯಾಯಿತು. ವಾಯುವಿನಿಂದ ಅಗ್ನಿಯು ಹೊರಹೊಮ್ಮಿತು; ಆದರೆ ವಾಯುವಿನಲ್ಲಿದ್ದ ಆ ಚಿತ್ ಅಥವಾ ಶಾಂತಿಕಳೆಯು ಅಗ್ನಿಯಲ್ಲಿ ಕೊಂಚ-ಮಟ್ಟಿಗೆ ಕಡಿಮೆಯಾಯಿತು. ಅಗ್ನಿಯಿಂದ ಅಪ್ಪು ಹೊರಹೊಮ್ಮಿತು; ಆದರೆ ಆ ಅಗ್ನಿಯಲ್ಲಿದ್ದ ಚಿತ್‌ಕಳೆಯು, ಶಾಂತಿಕಳೆಯು ಅಪ್ಪುವಿನಲ್ಲಿ ಕೊಂಚಮಟ್ಟಿಗೆ ಕಡಿಮೆಯಾಯಿತು. ಅಪ್ಪುವಿನಿಂದ ಪೃಥ್ವಿಯು ಹೊರಹೊಮ್ಮಿತು; ಆದರೆ ಅಪ್ಪುವಿನಲ್ಲಿದ್ದ ಚಿತ್‌ಕಳೆಯು ಶಾಂತಿಕಳೆಯು ಪೃಥ್ವಿಯಲ್ಲಿ ಕೊಂಚಮಟ್ಟಿಗೆ ಕಡಿಮೆಯಾಯಿತು. ಹೀಗೆಯೇ ಕಡಿಮೆಯಾಗುತ್ತ ಆಗುತ್ತ ಪೃಥ್ವಿಯಲ್ಲಿ ಬಂದಾಗ ಆ ಚಿತ್‌ಕಳೆಯು ಆ ಕಾಂತಿವಿಶೇಷವು ಗುಪ್ತವಾಗಿ ಸುಪ್ತವಾಗಿ

ಅವ್ಯಕ್ತವಾಗಿ ಆವರಿಸುವದು ಆದ್ದರಿಂದ ಆತ್ಮತೇಜದಿಂದ ಹೊರಹೊಮ್ಮಿ ಬಂದ ಈ ಪಾರ್ಥಿವ ಪ್ರಪಂಚದಲ್ಲಿ ಆ ಚಿತ್‌ಕಳೆಯು ಅಗೋಚರವಾಗಿ ಅಡಗಿ-ಕೊಂಡು ಕಾರ್ಯಗೆಯ್ಯುತ್ತಲಿದೆ. ಅದಕ್ಕೆಂದೇ ಈ ಪ್ರಪಂಚವು ಅಂಧಕಾರ ತತ್ವಕ್ಕೆ ನಮೀವಗತವಾಗುವದು. ಅರ್ಥಾತ್ ಸೃಷ್ಟಿಯ ಕ್ರಮದಲ್ಲಿ ನಾವು ಕೆಳಗೆ ಹೋದಂತೆ ವೈವಿಧ್ಯವೂ ನಾನಾತ್ವವೂ ಅಪೂರ್ಣತೆಯೂ ಹೆಚ್ಚುವವು. ಈ ಅವರೋಹಣ ಕ್ರಮದಲ್ಲಿ ಏಕತ್ವವು ನಾನಾತ್ವವನ್ನು ಹೊಂದುವದು. ಈ ಇಳಿಕೆಯ ಕ್ರಮದಲ್ಲಿ ಪ್ರತಿಯೊಂದು ಸ್ಥಿತಿಯೂ ತನ್ನ ಹಿಂದಿನ ಸ್ಥಿತಿಯ ಅವಶ್ಯ-ಕಾದ ಫಲ; ಅದರ ಪ್ರತಿ, ಛಾಯೆ, ಉಪಲಕ್ಷಣ (type). ಹೀಗಿದ್ದರೂ ಪ್ರತಿ-ಯೊಂದು ಸ್ಥಿತಿಯು ಅಥವಾ ತತ್ವವು ಹಿಂದಿರುಗಿ ತನ್ನ ಪೂರ್ವ ಸ್ಥಿತಿಯನ್ನು ಅಥವಾ ತತ್ವವನ್ನು ಪಡೆಯಲು ಪ್ರಯತ್ನಿಸುವದು. ಪೃಥ್ವಿಯ ಪೂರ್ವ ಸ್ಥಿತಿಯು ಅಪ್ಪು ಅಂದರೆ ಪೃಥ್ವಿ ಅಪ್ಪುವಿನ ಪ್ರತಿ, ಛಾಯೆ. ಪೃಥ್ವಿಯು ತನ್ನ ಪೂರ್ವದ ಸ್ಥಿತಿಯನ್ನು ಹೊಂದಲು ತವಕಿಸುವದು ಈ ತವಕವೇ ಧರ್ಮ. (The urge to grow into the original form).

ತಾಯ ಗರ್ಭದೊಳು ನಾನಿರ್ದ ವೇಳೆಯೊಳಲ್ಲಿ
ಹೇಯವತಿ ಬಾಧೆಗೆ ಮನಂ ನೊಂದು ಹೇಸುತಿಹ
ಪೇಯವನು ಬಿಟ್ಟೀತಕಿಂತು ಪೊರಮಟ್ಟೆರುವೆನಾಯುಷ್ಯವಿರುವುದರೊಳಗೆ
ಕಾಯಜ ವಿರೋಧಿ ಗುರು ಶಂಭುಲಿಂಗನನೊಲಿಸಿ
ಮಾಯೆಯನು ಮೀರಿ ಭವವನು ಗೆಲುವೆನೆಂಬ ಸಮು-
ದಾಯದಧಿಕಾರವೆನ್ನದು ಮರೆದೆನದಕಿನ್ನುಪಾಯವೇ ಧರ್ಮವೆಂದು ||

ಕೂಸು ತಾಯಿಯ ಗರ್ಭದಲ್ಲಿರುವಾಗ ಎಂಟನೆಯ ತಿಂಗಳಲ್ಲಿ ಪೂರ್ವ-ಜನ್ಮದ ಸಂಸ್ಕಾರದಿಂದ ಅದಕ್ಕೆ ತನ್ನ ಹಿಂದಣ ಭವಾಂತರಗಳ ಸ್ಮರಣೆಯುಂಟಾ-ಗುತ್ತದಂತೆ. ಇಂದಿನ ಗರ್ಭಶಾಸ್ತ್ರಜ್ಞರೂ (Embriologists) ಈ ಮಾತನ್ನು ಒಪ್ಪಿಕೊಳ್ಳುತ್ತಾರೆ. ಆ ಕಾಲಕ್ಕೆ ತಾಯಿಯ ಗರ್ಭವಾಸದಲ್ಲಿ ಮಲಮೂತ್ರಗಳ ಅರಿವು ಅದಕ್ಕೆ ಬಂದು ತಾನು ಪುನಃ ಪರಮಾತ್ಮನನ್ನು ಕಂಡು ಅವನಲ್ಲಿ ಕೂಡಿಕೊಂಡಿರಬೇಕೆಂಬ ಅಭೀಪ್ಸೆಯನ್ನು ಅದು ತಾಳುತ್ತದಂತೆ. ಶ್ರೀ ನಿಜಗುಣ ಶಿವಯೋಗಿಗಳ ಮೇಲಿನ ವಚನದ ಮೇರೆಗೆ ಮಾನವನಾಗಿ ಹುಟ್ಟಿ ಬಂದ ಬಳಿಕ ಹೇಯವಾದ ಭವದ ಬಾಧೆಗೆ ಜಿಗುಪ್ಸೆ ಪಟ್ಟುಕೊಂಡು ಆಯುಷ್ಯವಿರುವುದ-

ರೊಳಗಾಗಿ ಸ್ವಸ್ವರೂಪ ಸಾಕ್ಷಾತ್ಕಾರವನ್ನು ಮಾಡಿಕೊಂಡು ಪರಮಾತ್ಮನಲ್ಲಿ ಸಮರಸವ ಪಡೆವುದು ನನ್ನ ಜನ್ಮಸಿದ್ಧವಾದ ಅಧಿಕಾರ ಎಂದು ಅವನು ನಿರ್ಣ-ಯಿಸಿಕೊಳ್ಳುವನು. ಈ ಅಧಿಕಾರವನ್ನು ಸಾಧಿಸುವುದಕ್ಕಾಗಿ ಯಾವುದೊಂದು ಉಪಾಯವಿದೆಯೋ ಅದಕ್ಕೆ ಮೊರೆಹೊಗಬೇಕು ಎಂದೂ ಅವನು ಆಲೋಚಿಸು-ವನು. ಈ ಉಪಾಯವೇ ಧರ್ಮ. ಈ ಉಪಾಯದ ಜೊತೆಗೆ ತನ್ನ ಪೂರ್ವಸ್ಥಿತಿ ಯನ್ನು ಕಂಡು ಅದನ್ನು ಸಾಧಿಸಿಕೊಳ್ಳಬೇಕೆಂಬ ಹಂಬಲವುಂಟಾಗುವದು. ಈ ಹಂಬಲವೇ ಧರ್ಮ ಜಾಗ್ರತಿಯ ಮೊದಲ ಮೆಟ್ಟಲು. ಹಂಬಲಕ್ಕೆ ಸರಿಯಾಗಿ ಪ್ರಯತ್ನವನ್ನು ಆತನು ಮಾಡುತ್ತಾನೆ; ಎಡಬಿಡದೆ ಪ್ರಯತ್ನ ಮಾಡುತ್ತಾನೆ. ಈ ಪ್ರಯತ್ನವೇ ಧರ್ಮದಾಚರಣೆ. ತನಗೆ ಸುಖ ಶಾಂತಿ ಆನಂದಗಳು ಬೇಕೆಂದು ಬಯಸಿ ತನ್ನನ್ನು ಬಳಸಿದ ವ್ಯಕ್ತಿಗಳಲ್ಲಿ, ಹೆಂಡಿರು ಮಕ್ಕಳು ಬಂಧು ಬಾಂಧವರು ಈ ಮೊದಲಾದವರಲ್ಲಿ ಹಾಗು ತನ್ನ ಸುತ್ತುಮುತ್ತಲಿನ ವಸ್ತು ಒಡವೆಗಳಲ್ಲಿ ಧನ ಕನಕ ಭೂಮಿ ಸೀಮೆ ಇತ್ಯಾದಿ ಬಾಹ್ಯ ವಸ್ತುಗಳಲ್ಲಿ ಆ ಸುಖ ಶಾಂತಿ ಆನಂದಗಳನ್ನು ಹೊಂದಬೇಕೆಂದು ಹಂಬಲಿಸುತ್ತಾನೆ. ಅಲ್ಲಿ ಎಲ್ಲಿಯೂ ಅದನ್ನು ಕಾಣದೆ ಕೊನೆಗೆ ಅನ್ಯರಲ್ಲಿ ಅವನ್ನು ಕಾಣುವದು ಶಕ್ಯವಿಲ್ಲ ಎಂಬ ನಿರ್ಣಯಕ್ಕೂ ಬಂದು ನಿಲುಕುತ್ತಾನೆ. ಆ ಬಳಿಕ ತನ್ನಲ್ಲಿಯೇ ಏನಾದರೂ ಅದು ಸಿಗಬಹುದೇ— ಎಂದೂ ಆಲೋಚಿಸಹತ್ತುವನು. ತನ್ನಲ್ಲಿ ಅದನ್ನು ಕಾಣುವದು ಕಷ್ಟಸಾಧ್ಯವೆಂಬ ಮಾತೂ ಅವನಿಗೆ ಹೊಳೆಯುವದು. ಅನ್ಯರಲ್ಲಿ ಅವು ದೊರೆಯುವದು ಅಸಾಧ್ಯ, ತನ್ನಲ್ಲಿ ಕಾಣುವದು ಕಷ್ಟಸಾಧ್ಯ ಎಂಬ ಅನುಭವಗಂಡಬಳಿಕ ಪ್ರಯತ್ನವನ್ನು ಬಿಟ್ಟುಕೊಡುವದೇ ? ಇಲ್ಲ, ಸರ್ವಥಾ ಇಲ್ಲ. ಕಷ್ಟಸಾಧ್ಯವಾದರೂ ಚಿಂತೆಯಿಲ್ಲ, ಪ್ರಯತ್ನಮಾಡಿ ಅದನ್ನು ಹೊಂದಲೇ ಬೇಕು ಎಂಬ ಜನ್ಮಸಿದ್ಧವಾದ ಅಧಿಕಾರವನ್ನು ನೆಮ್ಮಿ ಪ್ರಯತ್ನಶೀಲನಾಗುತ್ತಾನೆ ಮಾನವ. ಇಲ್ಲಿ ಆ ಅಭೀಪ್ಸೆ, ಆ ತವಕ, ಆ ಹಂಬಲು, ಆ ಉಪಾಯ, ಆ ಪ್ರಯತ್ನ ಇವು ಆ ಧರ್ಮದ ವಿವಿಧ ಸ್ವರೂಪಗಳು. ಹೀಗೆ ಮೂಲ ಸ್ವರೂಪ ವನ್ನು ಕಂಡುಕೊಳ್ಳಬೇಕೆನ್ನುವದು ಧರ್ಮದ ಲಕ್ಷಣದೊಳಗು. ಸಂಭೂತಿ ವಾದವು ಧರ್ಮದ ಈ ಸ್ವರೂಪವನ್ನು ತಿಳಿಸಿಕೊಡುವದು.

ಆತ್ಮನಿಂದ ಪೃಥ್ವೀತತ್ವದ ವರೆಗೆ ಇಳಿದು ಬಂದ ಈ ಅವರೋಹಣ ಕ್ರಮದಿಂದ ಸೃಷ್ಟಿಕ್ರಮದಲ್ಲಿ ಕಂಡ ವೈವಿಧ್ಯ ನಾನಾತ್ವ ಅಪೂರ್ಣತೆ ಇವು ಮೂಲ ಸ್ವರೂಪವನ್ನು ಬಯಸಿ, ಆರೋಹಣ ಕ್ರಮದಿಂದ ಮಾರ್ಪಾಟಾಗುವದೂ ಸಹಜ,

ಆ ತವಕದಿಂದಾಗಿ. ಪೃಥ್ವೀತತ್ವವು ತನ್ನ ಮೂಲ ಸ್ವರೂಪವಾದ ಅಪ್ಪು ತತ್ವದಲ್ಲಿ ಸಮರಸವಾಗಲು ತವಕಿಸುತ್ತಿರುವಂತೆ ಅಪ್ಪು ಅಗ್ನಿಯಲ್ಲಿ, ಅಗ್ನಿ ವಾಯುವಿನಲ್ಲಿ, ವಾಯು ಆಕಾಶದಲ್ಲಿ, ಆಕಾಶ ಆತ್ಮನಲ್ಲಿ ಬೆರೆಯಲು ಉತ್ಸುಕಗೊಳ್ಳುವದೂ ಸ್ವಾಭಾವಿಕ. ಹೀಗೆ ಒಂದರಲ್ಲಿ ಒಂದು ಬೆರೆಯಲು ತವಕಿಸುವದು ಆರೋಹಣ ಕ್ರಮ. ಈ ಏರಿಕೆಯ ಕ್ರಮದಿಂದ ನಾನಾತ್ವವು ಪುನಃ ಏಕತ್ವವನ್ನು ಹೊಂದಲು ಉಪಕ್ರಮಿಸುವದು. ಈ ಅವರೋಹಣ ಆರೋಹಣ ಕ್ರಮಗಳಲ್ಲಿ ಅಧಿಕ ಭಾವಾಪನ್ನವಾದ ಕಳೆಯು ಅಲ್ಪವಾಗುತ್ತ, ಅಲ್ಪ ಭಾವಾಪನ್ನವಾದ ಕಳೆಯು ಅಧಿಕವಾಗುತ್ತ ಹೋಗುವದು. ಇದೇ ಪ್ರಗತಿ. ಸಂಭೂತಿವಾದವು ಅಧಿಕ ಭಾವಾಪನ್ನವಾದುದು ಅಲ್ಪ, ಅಲ್ಪ ಭಾವಾಪನ್ನವಾದುದು ಅಧಿಕ ಭಾವಾಪನ್ನವಾಗುವ ಪ್ರಗತಿಪರ ದೃಷ್ಟಿಯನ್ನು ವ್ಯಕ್ತಗೊಳಿಸುತ್ತದೆ.

ಪ್ರಗತಿಪರ ದೃಷ್ಟಿಯನ್ನಿಟ್ಟುಕೊಂಡು ನೋಡಿದರೆ ಅದು ಈ ಪ್ರಪಂಚದ ಬಗೆಗೆ ಏನನ್ನು ಹೇಳುತ್ತದೆ? ಸ್ವಭಾವವಾದಿಗಳು ತಿಳಿಯುವಂತೆ ಈ ಪ್ರಪಂಚವು ಒಂದು ಜಡ ಯಂತ್ರವೆಂದು ಸಂಭೂತಿವಾದವು ತಿಳಿಯುವದಿಲ್ಲ. ಆರಂಭವಾದಿಗಳು ಹೇಳುವಂತೆ ಪ್ರಪಂಚವು ಪರಮಾಣುಗಳ ಪರಸ್ಪರ ಸಂಘರ್ಷಣೆಯ ಫಲವೆಂದೂ ಅದು ಹೇಳುವದಿಲ್ಲ. ವಿವರ್ತವಾದಿಗಳಂತೆ ಪ್ರಪಂಚವು ಪರಮಾತ್ಮನ ಮೇಲೆ ಆರೋಪಿಸಲ್ಪಟ್ಟ ಅಧ್ಯಾಸವೆಂದೂ ಅದು ಬಗೆಯುವದಿಲ್ಲ. ಇಲ್ಲವೆ ಪರಿಣಾಮವಾದಿಗಳಂತೆ ಈ ಪ್ರಪಂಚವು ಪ್ರಕೃತಿಯ ಪ್ರಸಾರವೆಂದೂ ಅದು ಪರಿಗಣಿಸುವದಿಲ್ಲ. ಪ್ರಪಂಚವೆಂಬುದು ಕ್ರಮ ಸಮೀಚೀನತೆಗಳಿಂದ ತುಂಬಿದ ಒಂದು ಕಲಾಕಾರ ವಿಶೇಷವಾಗಿದೆ; ಅಲ್ಲಿ ವಿವಿಧ ಅವಯವಗಳೆಲ್ಲವೂ ಏಕಮಾತ್ರ ಪ್ರಯೋಜನಕ್ಕಾಗಿ ಮಿಳಿತವಾಗಿ ಕೆಲಸ ಮಾಡುವುದರಿಂದ ಫಲಿತವಾಗುವ ಪೂರ್ಣ ಅವಯವಿಯಾಗಿ ಅದು ಸೌಂದರ್ಯದಿಂದಲೂ ಶೋಭಾತಿಶಯದಿಂದಲೂ ತುಂಬಿ ತುಳುಕುವ ತೇಜೋರಾಶಿಯಾಗಿವೆ; ಅಣುರೇಣು ತೃಣಕಾಷ್ಠಗಳಲ್ಲಿ ಮೂರ್ತೀಭವಿಸಿರುವ ಚಿತ್‌ಪ್ರಕಾಶದ ಪ್ರಭಾಪುಂಜದ ಅಪಾರ ವಾರಿಧಿಯಾಗಿದೆ ಅದು— ಎಂದು ಸಾರುವದು ಸಂಭೂತಿವಾದವು. ವಿಶ್ವದ ನಿಯಮಗಳಲ್ಲೆಲ್ಲ ದೈವಸಂಕಲ್ಪವು ಪ್ರಕಾಶಿಸುತ್ತಿರುವದು. ಮಾನವನೂ ಸಹ ವಿಶ್ವದ ಒಂದು ಅವಯವ; ಅವನ ಸತ್ಸಂಕಲ್ಪ ಪ್ರಯತ್ನಗಳು ಪ್ರಭಾವಪೂರ್ಣವಾಗಿ ಮಿನುಗಬೇಕು; ಮಾನವನು ಒಂದು ಉಪಕರಣ, ಒಂದು ಅವಯವವಾದ ಮೇಲೆ ಇತರ ಅವಯವಗಳೆಲ್ಲವೂ ಅವಯವಿಯ ಪೂರ್ಣತೆಗಾಗಿ ತಡೆಯಾಗದಂತೆ ತನ್ನ ಪ್ರಯೋಜನವನ್ನು ಜಗತ್ತಿನ

ಪ್ರಯೋಜನದೊಂದಿಗೆ ಏಕೀಕರಿಸಿ ಜಗತ್ತಿನ ಫಲಪೂರ್ತಿಯಲ್ಲಿಯೇ ತನ್ನ ಪರಮ ಶ್ರೇಯವನ್ನು ಕಂಡುಕೊಳ್ಳಬೇಕೆಂದು ಹೇಳುವದು ಸಂಭೂತಿವಾದವು.

ಹೀಗಾಗಬೇಕಾದರೆ ದೈವಸಂಕಲ್ಪಕ್ಕನುಗುಣವಾಗಿ ನಡೆಯಲು ಮಾನವನು ಸಿದ್ಧನಾಗಬೇಕು. ದೈವಸಂಕಲ್ಪಕ್ಕನುಗುಣವಾಗಿ ನಡೆಯಬೇಕು ಎಂದರೆ ಏನು? ಈ ವಿಶ್ವದಲ್ಲಿ ಅವ್ಯವಸ್ಥೆ ಅನಾಯಕತ್ವ ಇವು ಒಂದೂ ಇಲ್ಲ. ಈ ಸೃಷ್ಟಿಯಲ್ಲಿ ನಿಷ್ಕಾರಣವಾದ ನಿರುಪಯೋಗವಾದ ವಸ್ತುವು ಯಾವದೂ ಇಲ್ಲ. ಈ ಸೃಷ್ಟಿಯ ಸಕಲ ವ್ಯಾಪಾರಗಳು ದಿವ್ಯಜ್ಞಾನದ ಬಲದಿಂದಲೇ ಕ್ರಮಬದ್ಧವಾಗಿ ನಡೆಯುತ್ತಿರುವವು. ಪ್ರತಿಯೊಬ್ಬ ವ್ಯಕ್ತಿಯೂ ಪ್ರತಿಯೊಂದು ವಸ್ತುವೂ ದೈವೀ ಸಂಕಲ್ಪಕ್ಕೆ ಉಪಕರಣಗಳು. ಈ ವಿಶ್ವದ ಕಾರ್ಯಕಲಾಪಗಳೆಲ್ಲ, ಆಗುಹೋಗುಗಳೆಲ್ಲ ದೈವೀ ಸಂಕೇತದಲ್ಲಿ, ದೈವೀ ಯೋಜನೆಯಲ್ಲಿ ಪೂರ್ವ ನಿಯೋಜಿತವಾಗಿರುವುದರಿಂದ ಇಲ್ಲಿ ಅಕ್ರಮ ಅವ್ಯವಸ್ಥೆ ಅನಾಯಕತ್ವಗಳಿಗೆ ಆಸ್ಪದವೆಲ್ಲಿ ಉಂಟಾಗಬೇಕು? ನಿಷ್ಪ್ರಯೋಜನವಾದ ವಸ್ತುವಿಗೆ ಇಲ್ಲಿ ಅಸ್ತಿತ್ವವೆಲ್ಲಿರಬೇಕು? ಆ ದಿವ್ಯಜ್ಞಾನವು ಮಾನವನಲ್ಲಿ ವಿಜ್ಞಾನವಾಗಿ ಮೂರ್ತೀಕರಿಸುವದು. ಆದ್ದರಿಂದ ದೈವಸಂಕಲ್ಪಕ್ಕನುಗುಣವಾಗಿ ನಡೆಯುವದು ಎಂದರೆ ಉತ್ಕೃಷ್ಟವಾದ ಜ್ಞಾನಕ್ಕನುಸಾರವಾಗಿ ನಡೆಯುವದು ಎಂದರ್ಥ. ಈ ಜ್ಞಾನವೂ ಸಹ ಸತ್ಕಾರ್ಯದಲ್ಲಿ ಸಚ್ಚಾರಿತ್ರದಲ್ಲಿ ಸಮೀಚೀನವಾದ ಸುಮಧುರವಾದ ಮಂಗಲಮಯವಾದ ನಡತೆಯಲ್ಲಿ ಫಲಿಸಬೇಕು. ಸಚ್ಚಾರಿತ್ರವೇ ಜ್ಞೇಯ ಪದಾರ್ಥ. ಯಾವುದಕ್ಕೆ ನಾವು ಮಿದುಳು ಎನ್ನುವೆವೊ ಅದು ಕೇವಲ ಒಂದು ಭೌತಿಕ ಸ್ವರೂಪ ಮಾತ್ರ. ಯಾವುದಕ್ಕೆ ನಾವು ಬುದ್ಧಿಬಲವೆನ್ನುವೆವೊ ಅದೂ ಸಹ ಒಂದು ಭೌತಿಕ ಸ್ವರೂಪವೆ! ಆದ್ದರಿಂದ ಭೌತಿಕವೆನಿಸಿದ ವಿಚಾರ ಸಾಮರ್ಥ್ಯವುಳ್ಳ ಮಿದುಳು ಮತ್ತು ಬುದ್ಧಿಸಾಮರ್ಥ್ಯದಿಂದ ಕೂಡಿದ ಅಂತಃಕರಣ ಇವು ಪ್ರಾಮುಖ್ಯವಲ್ಲ. ಮಾನವರಲ್ಲಿ ಇರುವ ವಿಜ್ಞಾನವು, ವಿಶೇಷ ಜ್ಞಾನವು ಪ್ರಮುಖವಾಗಿರುವದು. ಮಾನವನ ಕಾಯಸೃಷ್ಟಿಯಲ್ಲಿ ಅಂದರೆ ಪಿಂಡದಲ್ಲಿ ಅಂತರ್ಗತವಾದ ಈ ವಿಜ್ಞಾನವು ವ್ಯಕ್ತವಾಗಿ ದಿವ್ಯಜ್ಞಾನದ ಅಸ್ತಿತ್ವವನ್ನೂ ಸಿದ್ಧಗೊಳಿಸುತ್ತಲಿದೆ. ವಿಜ್ಞಾನದಲ್ಲಿ ಪ್ರೇಮ ಸುಜ್ಞಾನಗಳ ತಿಕ್ಕಾಟವಿಲ್ಲ, ಹೋರಾಟವಿಲ್ಲ. ಅಲ್ಲಿ ದೃಕ್‌ಶಕ್ತಿಯೂ ಕ್ರಿಯಾಶಕ್ತಿಯೂ ಸಮ್ಮಿಳಿತವಾಗಿ ಕಾರ್ಯಗೆಯ್ಯುತ್ತಿವೆ. (Power of vision and power of execution are identical.) ಹೀಗೆ ಜ್ಞಾನಚೈತನ್ಯವೂ ಕರ್ಮಚೇತನವೂ ಒಂದೇ ಆಗಿರುವದರಿಂದ

ಜ್ಞಾನ ಪ್ರತ್ಯೇಕವಾಗಿರದೆ, ಸ್ಥೂಲ ದೇಹದ ಮುಖಾಂತರ ಮಾನವನು ಎಸಗುತ್ತಿರುವ ಕ್ರಿಯೆಗಳಲ್ಲಿ ಅದು ಪ್ರಕಾಶಿಸುತ್ತಿದೆ. ಸಚ್ಛೀಲವೆಂಬುದು ಬರಿಯ ಕರ್ಮಣಿ ರೂಪವಾದ ನೈಷ್ಕರ್ಮಸ್ಥಿತಿಯಾದರೆ ಅದರಿಂದೇನೂ ಪ್ರಯೋಜನವಿಲ್ಲ. ಆದ್ದರಿಂದ ಸಮ್ಯಗ್‌ಜ್ಞಾನವು ಸತ್ಕರ್ಮದೊಡನೆ ಸಮಾವೇಶವಾಗಬೇಕು. ನಡೆ ನುಡಿ ಒಂದಾದುದೇ ಅನುಭವ. ಜೀವನಕ್ಕೂ ಅನುಭವಕ್ಕೂ ನಿಕಟ ಸಂಬಂಧ ವಿರುವದರಿಂದ ಜ್ಞಾನವು ಕ್ರಿಯೆಯಲ್ಲಿ ಕಂಗೊಳಿಸಬೇಕು. ಇಂತಹ ಜ್ಞಾನವೇ ಸದ್ಗುಣ; ಇಂತಹ ಸದ್ಗುಣವೇ ನಮಗೆ ಶ್ರೇಯ. ಇಂತಹ ಸದ್ಗುಣವನ್ನು ಇಂತಹ ಧರ್ಮಜೀವನವನ್ನು ಸಂಪಾದಿಸಿಕೊಳ್ಳುವುದರಿಂದಲೆ ಆತ್ಮಸಂಸಿದ್ಧಿ ಲಭಿಸುವದೆಂದು ಸಂಭೂತಿವಾದವು ತಿಳಿಸುವದು.

ಸಂಭೂತಿವಾದದ ಸಿದ್ಧಾಂತಗಳು ಯಾವುದೊಂದು ಗ್ರಂಥದಲ್ಲಿ ಕ್ರಮಬದ್ಧ ವಾಗಿ ನಿರೂಪಿಸಲ್ಪಟ್ಟಿರುವದಿಲ್ಲ. ಅವು ಒಂದೆಡೆಗೆ ಕೊರೆದಿಟ್ಟ ಶಬ್ದಗಳಲ್ಲಿ ದೊರೆಯುವದಿಲ್ಲ, ಕಾಣಿಸುವದಿಲ್ಲ. ಅದನ್ನು ಹಲವಾರು ಗ್ರಂಥಗಳನ್ನು ಓದಿ ಸಂಗ್ರಹಿಸಬೇಕಾಗುವದು. ಕೆಲವು ಬಂದ ಸಂಗತಿಗಳು, ಕೆಲವು ತಂದ ಸಂಗತಿ ಗಳು, ಕೆಲವು ಕಂಡ ಸಂಗತಿಗಳು, ಕೆಲವು ಉಂಡ ಸಂಗತಿಗಳು, ಕೆಲವು ತಿಳಿದ ಸಂಗತಿಗಳು, ಕೆಲವು ಹೊಳೆದ ಸಂಗತಿಗಳು, ಕೆಲವು ಅನಿಸಿದ ಸಂಗತಿಗಳು, ಕೆಲವು ಎಣಿಸಿದ ಸಂಗತಿಗಳು— ಹೀಗೆ ಎಲ್ಲವುಗಳನ್ನು ಒತ್ತಟ್ಟಿಗೆ ಕಲೆಹಾಕಿ, ಹೂಗಳ ರಾಶಿಗಳೊಳಗಿಂದ ಸುಂದರವಾದ ಹಾರವನ್ನು ಹೆಣೆದು ಇಡುವಂತೆ, ಜೋಡಿಸಿ ಇಟ್ಟುಕೊಳ್ಳಬೇಕಾಗುತ್ತದೆ. ಅದೇ ದಾರ, ಅದೇ ಸೂಜಿ, ಅವೇ ಹೂಗಳು; ಆದರೂ ನಾವಿನ್ಯತೆಯು ಗ್ರಥನಕೌಶಲದಲ್ಲಿ ಹೇಗೋ ಹಾಗೆಯೇ ಸಂಭೂತಿವಾದದ ಬಗೆಗಿನ ಈ ವಿಚಾರಗಳನ್ನು ಇಲ್ಲಿ ಕಾಣಬೇಕು.

ಈ ಸಂಭೂತಿವಾದದಲ್ಲಿ ಕರ್ಮಭೂಮಿಯು ಕೇವಲ ಪ್ರಥಮಾವಸ್ಥೆಯ-ದಾಗಿ ಕಡಿಮೆ ತರಹದ್ದೆನಿಸಿದರೂ ಹೇಯವಲ್ಲ, ತ್ಯಾಜ್ಯವಲ್ಲ, ಗರ್ಹಣೀಯವೂ ಅಲ್ಲ. ಅದು ನಮ್ಮ ಪ್ರತ್ಯಕ್ಷ ಜೀವನದ ಭೌತಿಕ ತಳಹದಿಯಾಗಿದ್ದುದರಿಂದ ಸತ್ಯವಾಗಿದೆ. ಸೃಷ್ಟಿಯ ಕ್ರಮಬದ್ಧವಾದ ಚಲನೆಯಲ್ಲಿರುವ ಮೇಲಿನ ಮತ್ತು ಕೆಳಗಣ ತರಗತಿಗಳಿಗನುಗುಣವಾಗಿ ಅಧಿಕ ಮತ್ತು ಅಲ್ಪ ಸತ್ಯಗಳು ಇದ್ದೇ ಇರು ತ್ತವೆ. ಈ ಸೃಷ್ಟಿಯು ಅನಂತವಾದ ಪರವಸ್ತುವಿನ ಅಭಿವ್ಯಕ್ತಿಯಾಗಿದೆ. ಆ ಪರ ವಸ್ತುವು ಅಭೇದ್ಯವಾದರೂ ಅವರ ಚಿತ್ತಿನ ಸಹಜ ಶಕ್ತಿಯ ವೈಚಿತ್ರ್ಯದ ಮೂಲಕ ವಿಶ್ವವು ತನ್ನ ತಾರತಮ್ಯದೊಂದಿಗೆ ಹೊರಹೊಮ್ಮುವದು. ಹೀಗೆ ಪರವಸ್ತುವಿನ

ಒಡಲೊಳಗಿಂದ ತಾರತಮ್ಯದೊಂದಿಗೆ ಒಡಮೂಡಿದ ವಿಶ್ವವು ಆಕಸ್ಮಿಕ ತೋರಿಕೆಯಲ್ಲಿ ತಾನೇ ತಾನಾಗಿ ಹುಟ್ಟಿದುದಲ್ಲ. ಆದರೆ ಅದು ಅರ್ಥಪೂರ್ಣವಾದ ಸೃಷ್ಟಿ. ಒಂದು ಉದ್ದೇಶದಿಂದೊಡಗೂಡಿ ಸಂಕಲ್ಪಿತವಾದ ಚಲನೆ, ಸಾಂತದ ಅನಂತವು ತನ್ನನ್ನು ಕಂಡುಕೊಳ್ಳಲು ಪೂರ್ಣತೆಗಾಗಿ ಸಾಗಿದ ಒಂದು ವಿಧಾನ. ಪರಿಸ್ಥಿತಿಯಲ್ಲಿ ಒಮ್ಮೆ ಈ ಸೃಷ್ಟಿಯು ದೇವನ ಅಭಿವ್ಯಕ್ತಿಯೆಂದೂ ತನ್ನಷ್ಟಕ್ಕೆ ತಾನು ಕೆಡುವದೆಂದೂ ಅದಕ್ಕೆ ಒಂದು ಅರ್ಥವಿದೆಯೆಂದೂ, ಮಾನವನು, ತನ್ನ ತೋರಿಕೆಯ ಮತಿಗೆ ಕಂಡಂತೆ ಅಲ್ಲ, ಅದು ಇದ್ದಂತೆ ನೋಡುವ ಶಕ್ತಿಯನ್ನು ಸಂಪಾದಿಸಿಕೊಂಡಾಗ, ಆವನ ಪ್ರಜ್ಞೆಗೆ ಅದು ಯಥಾರ್ಥವಾಗಿ ಗೋಚರಿಸುತ್ತದೆ ಎಂದು ನಾವು ಒಪ್ಪಿಕೊಂಡಾಗ ಲೋಕದಲ್ಲಿ ಹೇಯವನ್ನು ಗೆದೆಯಲೂ, ಪ್ರೇಯವನ್ನು ಸ್ವೀಕರಿಸಿ ಶ್ರೇಯವನ್ನು ನೆಲೆಗೊಳಿಸಲೂ ಸಾಧ್ಯವಾಗುವದು. ಹೇಯವನ್ನು ತ್ಯಜಿಸಿ ಪ್ರೇಯವನ್ನು ಭಜಿಸುವ ಮಾರ್ಗ ಒಂದು ಮಾರ್ಗ; ಹೇಯವನ್ನು ಗೆದ್ದು ಪ್ರೇಯವನ್ನು ಸ್ವೀಕರಿಸಿ ಶ್ರೇಯವನ್ನು ಪ್ರಸ್ಥಾಪಿಸುವದು ಮತ್ತೊಂದು ಮಾರ್ಗ. ಈ ಎರಡು ಮಾರ್ಗಗಳು ಎರಡರ ಇಂಗಿತವನ್ನು ಸೂಚಿಸುತ್ತವೆ. ಸಂಭೂತಿವಾದದಲ್ಲಿ ಗಮನಿಸಬೇಕಾದುದು ಈ ಮೂಲಭೂತ ರಹಸ್ಯವನ್ನು.

ಶಾಸ್ತ್ರೀಯ ಪರಿಭಾಷೆಯನ್ನು ಬಿಟ್ಟು ಸಾಮಾನ್ಯವಾದ ಭಾಷೆಯಲ್ಲಿ ಹೇಳುವುದಾದರೆ ಸಂಭೂತಿವಾದವು ಮೂರು ಮಾತುಗಳನ್ನು ಎತ್ತಿ ಹೇಳುವದು :

(೧) ಈ ಪ್ರಪಂಚವು ವಿವಿಧ ವರ್ಗಗಳಿಂದ ಕೂಡಿದ ಒಂದು ಶಿಕ್ಷಣ ಶಾಲೆಯಿದ್ದಂತೆ. ಮೇಲಿನ ವರ್ಗದವರು ಕೆಳಗಿನ ವರ್ಗದವರನ್ನು ಕಡೆಗಣ್ಣಿನಿಂದ ಕಾಣಲಾಗದು. ಸಹಾನುಭೂತಿ, ಸಹಾಯ, ಸಹಕಾರಗಳಿಂದೊಡಗೂಡಿದ ಜೀವನ ಅವಶ್ಯವಾಗಿ ಸಾಗಬೇಕು. ಸೃಷ್ಟಿಯ ಈ ಶಾಲೆಗೆ ನಾಲ್ಕು ಗೋಡೆಗಳುಳ್ಳ ಕೋಣೆಗಳಿಲ್ಲ. ಪರಮಾತ್ಮನ ಲೀಲೆಗಾಗಿ ಅಣಿಗೊಳಿಸಲ್ಪಟ್ಟ ಈ ಶಾಲೆ ಕೆಲವೇ ಜನರಿಗಾಗಿ ಮಾತ್ರವಿರದೆ ವಿವಿಧ ವೃತ್ತಿ–ಪ್ರವೃತ್ತಿಗಳಿಂದ ಕೂಡಿದ, ವಿವಿಧ ರುಚಿ ಅಭಿರುಚಿಗಳುಳ್ಳ, ವಿವಿಧ ದೇಶ ವಿದೇಶಗಳಲ್ಲಿ ವಾಸವಾಗಿರುವ, ವಿವಿಧ ಬುದ್ಧಿಶಕ್ತಿ ಭಾವನಾಬಲ ಸಮೇತವಾದ ಹಿರಿಕಿರಿಯರಾದಿಯಾಗಿ ಎಲ್ಲ ಜನರಿಗೂ ಆ ದೇವನಿಂದ ದಾನವಾಗಿ ನೀಡಲ್ಪಟ್ಟಿರುತ್ತದೆ ಈ ಶಾಲೆ. ಮಾನವರೆಲ್ಲರೂ ಆ ದೇವದೇವನ ಸಂಕಲ್ಪಶಕ್ತಿಯಿಂದ ನಿರ್ಮಿತವಾಗಿ ಆತನ ಲೀಲೆಯು ಇಲ್ಲಿ ಸಾಧುವಾಗಿ ಸುಲಲಿತವಾಗಿ ಸಾಗಲು ತಕ್ಕ ಉಪಕರಣಗಳಾಗ

ಬೇಕಾಗಿದೆ; ತಕ್ಕ ಪಾತ್ರವನ್ನು ನಟಿಸಿ ಈ ನಾಟ್ಯಲೀಲೆಯನ್ನು ಸುಮಧುರಗೊಳಿಸಬೇಕಾಗಿದೆ; ಈ ನಾಟ್ಯರಂಗವನ್ನು ಆನಂದದಾಗರವೆನಿಸಬೇಕಾಗಿದೆ. ಚಿತ್ರುಭೆಯನ್ನು ವ್ಯಕ್ತಗೊಳಿಸಬೇಕಾಗಿದೆ.

ಆತನಾಡುವ ಲೀಲೆ, ಭಿತ್ತಿಯಿಲ್ಲದ ಶಾಲೆ ||
ಮಾತು ಮೌನದ ಜ್ವಾಲೆ, ಬೆಳಗಿನೋಲೆ.

(೨) ಮಾನವನಲ್ಲಿ ಕಂಡುಬರುವ ಶೀಲದ ಕೊರತೆಯಾಗಲಿ, ಸದ್ಗುಣದ ಅಭಾವವಾಗಲಿ, ಅದೊಂದು ಅನಿವಾರ್ಯವಾದ ದೋಷವೇನೂ ಅಲ್ಲ. ದೈಹಿಕ ರೋಗದಂತೆ ಅದೊಂದು ಮಾನಸಿಕ ರೋಗ. ದೈಹಿಕ ರೋಗವನ್ನು ಔಷಧೋಪಚಾರಗಳಿಂದ ಗುಣಪಡಿಸುವಂತೆ ಮಾನಸಿಕ ರೋಗವನ್ನು ಯೋಗ್ಯ ಶಿಕ್ಷಣದಿಂದ ಗುಣಪಡಿಸಲು ಶಕ್ಯವಿದೆ. ಮನಸ್ಸಿಗೆ ರೋಗವಾಗಿದೆ ಎಂದರೇನು? ಅದಕ್ಕೊಂದು Disease (ರೋಗ) ತಗಲಿರುವದಿಲ್ಲ, ಆದರೆ ಅದು is not at ease (ನೆಮ್ಮದಿ ಸ್ಥಿತಿಯಲ್ಲಿ) ಅಷ್ಟೇ! ಅದಕ್ಕೆ ನೆಮ್ಮದಿಯನ್ನು ಉಂಟು ಮಾಡಿದರೆ ರೋಗವೆಲ್ಲಿಯದು? ಆದ್ದರಿಂದ ಮನದ ನೆಮ್ಮದಿಗಾಗಿ ಯತ್ನಿಸಬೇಕು; ಅಂದರೆ ಶೀಲದ ಕೊರತೆ ಅಡಗುವದು, ಸದ್ಗುಣರಾಶಿಯು ಒಡಮೂಡುವದು.

(೩) ಪ್ರಪಂಚದ ಮಿಥ್ಯಾತ್ವವು ಸಂಭೂತಿವಾದಕ್ಕೆ ಸಂಗತವಿಲ್ಲ, ಸಮ್ಮತವಿಲ್ಲ. ಮಾನವನ ಪ್ರಗತಿಯು ಅಸತ್ಯದಿಂದ ಸತ್ಯಕ್ಕೆ ಮುಂದುವರಿಯುವದಿಲ್ಲ; ಅಲ್ಪ ಸತ್ಯದಿಂದ ಅಧಿಕ ಸತ್ಯದೆಡೆಗೆ ಅದು ಕುಡಿ ಚಾಚುವದು. ಕೆಲವರಿಗೆ ಕೆಲವು ಸಂಗತಿಗಳು ಸತ್ಯವೆನಿಸಿದರೆ ಇನ್ನು ಕೆಲವರಿಗೆ ಅವೇ ಸಂಗತಿಗಳು ಅಸತ್ಯವೆನಿಸುವವು. ಕೆಲವರಿಗೆ ಕೆಲವು ಸಿದ್ಧಾಂತಗಳು ಇಂದು ಸತ್ಯವೆನಿಸಿದರೆ ಮುನ್ನಿನ ಕೆಲವರಿಗೆ ಆ ಸಿದ್ಧಾಂತಗಳು ಅಸತ್ಯವೆನಿಸುವವು. ಇನ್ನು ಕೆಲವರಿಗೆ ಇಂದಿನ ಸತ್ಯ ನಾಳೆ ಅಸತ್ಯವಾಗುವದು. ಇದರಿಂದ ಸತ್ಯ ಅಸತ್ಯ ಎಂಬ ಎರಡು ಸಂಗತಿಗಳು ಪ್ರತಿಸ್ಪರ್ಧಿಗಳಾಗಿ ಪ್ರತಿಯೋಗಿಗಳಾಗಿ ಇರುತ್ತದೆಂದಲ್ಲ. ಆಯಾ ಕಾಲಕ್ಕೆ ಆಯಾ ಸನ್ನಿವೇಶ ಪರಿಸ್ಥಿತಿಗಳಿಗೆ ಅವು ಸತ್ಯವಾದವುಗಳೇ. ಪರಿಸ್ಥಿತಿ ಸನ್ನಿವೇಶ ಕಾಲಗಳು ಬದಲಾವಣೆಯಾದಂತೆ ಅವಕ್ಕೆ ಪೂರ್ವದ ಮಾತುಗಳು ಹೊಂದಿಕೆಯಾಗಲಿಕ್ಕಿಲ್ಲ, ವಿಸಂಗತವೆನಿಸಬಹುದು. ಆದರೆ ಆಯಾ ಸಮಯದಲ್ಲಿ ಅವು ಸತ್ಯವಾದವುಗಳೆಂದೇ ಸ್ವೀಕರಿಸಲ್ಪಡುವವು. ಇದರಿಂದ ಸತ್ಯ ಅಸತ್ಯ ಎಂಬ ದ್ವಂದ್ವವಿಲ್ಲ. ಇರುವುದೊಂದೇ ಅದು ಸತ್ಯ.

ಪ್ರಪಂಚವು ಈ ವಿಚಾರ ಪರಿಧಿಗೆ ಹೊರಗಾದುದಲ್ಲ. ಇದು ಅಸತ್ಯ ಸುಳ್ಳು ಎಂದು ಬಗೆದರೆ ಪ್ರಗತಿಗೆ ಆಸ್ಪದವೆ ಉಳಿಯುವದಿಲ್ಲ.

ಸಂಭೂತಿವಾದದ ಪ್ರಕಾರ ಪ್ರಪಂಚವೆಲ್ಲವೂ ಪರವಸ್ತುವಿನ ಅಭಿವ್ಯಕ್ತಿ-ಯಾದರೆ ಅನಿಷ್ಟ, ಹೇಯ, ಕೆಡುಕು ಎಲ್ಲಿಂದ ಬಂತು? ಈ 'ಅನಿಷ್ಟ' ಸಮಸ್ಯೆಯು ಪೌರ್ವಾತ್ಯ–ಪಾಶ್ಚಿಮಾತ್ಯರೆಲ್ಲರನ್ನೂ ಕಾಡುವದು. ಇದಕ್ಕಾಗಿ ಹಲವರು ಹಲವು ಬಗೆಯ ಉತ್ತರಗಳನ್ನು ಹೇಳುವರು :

(೧) ಅನಿಷ್ಟವು ಒಂದು ಬಗೆಯ ಕತ್ತಲೆಯ ಅನುಭವವಿದ್ದಂತೆ; ಕತ್ತಲೆಯ ಅನುಭವವು ಇಲ್ಲದಿದ್ದರೆ ಬೆಳಕಿನ ಮಹತ್ವವು ತಿಳಿಯದು; ಅನಿಷ್ಟದ ಅನುಭವವಿಲ್ಲದಿದ್ದರೆ ಇಷ್ಟದ ಸಂಗತಿಯು ಗೋಚರಿಸದು— ಹೀಗೆ ಬಗೆಯುವ-ದಾದರೆ ಪಾಪದ ಪ್ರಾಯಶ್ಚಿತ್ತಕ್ಕೆ ಪಾಪ ಮಾಡಬೇಕು; ಶಾಂತಿ ನೆಲೆಸಬೇಕಾದರೆ ಮೊದಲು ಯುದ್ಧ ಮಾಡಬೇಕು ಎಂದ ಹಾಗೆ ಆಗುವದು. ಆದರೆ ಪ್ರಪಂಚ-ದಲ್ಲಿ ತಾತ್ವಿಕವಾಗಿ ತೋರುವ ಮಾತು ಕೃತಿಯಲ್ಲಿ ಹೊಂದಿಕೆಯಾಗುವದಿಲ್ಲ.

(೨) ಅನಿಷ್ಟವೆಂಬುದು ಯಥಾರ್ಥವಲ್ಲ. ಚಿತ್ರಗಳಲ್ಲಿರುವ ನೆರಳಿನಂತೆ ಅದು ಛಾಯಾಮಾತ್ರವಾಗಿರುವದು. ಇದನ್ನೇ ಇನ್ನೊಂದು ವಿಧವಾಗಿ ಹೀಗೆ ಹೇಳಬಹುದು : ಮನುಷ್ಯನಿಗೆ ನೋವನ್ನು ಉಂಟುಮಾಡುವಂಥವು ವಸ್ತುಗಳಲ್ಲ ವಸ್ತುಗಳಲ್ಲಿ ಅವನು ಹೊಂದಿರುವ ಭಾವನೆಗಳು. ಸಾವೆಂಬುದೇನೋ ಭಯಂಕರವಾದುದು. ಯಾರಿಗೂ ಅದು ಬೇಕಾಗಿರುವದಿಲ್ಲ. ಆದರೆ ಅದರ ಬಗೆಗೆ ತಳೆದ ಭಾವನೆಯಿಂದಲೇ ಅದು ಭೀಕರವಾಗಿ ಕಾಣುತ್ತದೆ.

ಎಲ್ಲರಂಜಿಪ ಸಾವು ಒಲ್ಲದವರಿಗೆ ಬೇವು ।
ಬಲ್ಲವರಿಗೇನುಂಟು ಸಾವು ಹೂವು ॥

ಸಾವಿನ ಬಗೆಗೆ ಸರಿಯಾದ ತಿಳಿವಳಿಕೆ ಮಾಡಿಕೊಂಡವರಿಗೆ ಸಾವಿನ ಅಂಜಿಕೆ-ಯಿಲ್ಲ. 'ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗೀಗಲೆ ಬರಲಿ'— ಎಂದು ನಿಶ್ಚಿಂತಪ್ರವೃತ್ತಿಯ ಎದೆಗಾರಿಕೆಯನ್ನು ಅವರು ತೋರಿಸು-ತ್ತಾರೆ. ಇಂತಹ ಅವರು ಶಿರಕೆ ಸಾವನ್ನು ಸುತ್ತಿಕೊಂಡು ಸುಳಿದಾಡುತ್ತಿದ್ದರೂ ಆ ಸಾವು ಅವರಿಗೆ ಹೂವಿನೋಪಾದಿಯಲ್ಲಿರುತ್ತದೆ. ಅವರು ಅದರಲ್ಲಿ ಸೌಂದರ್ಯವನ್ನೂ ಮಾಧುರ್ಯವನ್ನೂ ಕಾಣುತ್ತಾರೆ. "Cowards

die many times before their death The valiant never taste but once;" ಎಂಬಂತೆ ಅವರ ಜೀವನಸ್ವಾರಸ್ಯ. ಅಂಜುಬುರುಕರಿಗೆ ಮರಣಕ್ಕಿಂತಲೂ ಮರಣದ ಭೀತಿಯೇ ಹೆಚ್ಚು. ಇದರಂತೆ ಸುಖದುಃಖವಾದರೂ ಮಾನವನ ಭಾವನೆಗಳನ್ನೇ ಅವಲಂಬಿಸಿರುತ್ತವೆ ಎಂದು ಹೇಳಬಹುದು. ವಿಷವನ್ನು ಕುಡಿದರೆ ಅದೆಂಥ ಪ್ರಬಲ ಭಾವನೆಯನ್ನು ಮಾಡಿ ಕೊಂಡರೂ ಸಾವು ತಪ್ಪುವದಿಲ್ಲ. ವಿಷ ಕುಡಿಯಬಯಸುವ ವ್ಯಕ್ತಿಗೆ ಅದರ ಭೀಕರ ಪರಿಣಾಮವು ಗೊತ್ತು. ಅದರ ಅನಿಷ್ಟವೂ ಗೊತ್ತಿದ್ದ ಮಾತೇ! ಕಾರಣ ಅನಿಷ್ಟವು ಇಲ್ಲಿ ವ್ಯಕ್ತಿಗತವಾಗಿರದೆ ವಸ್ತುಗತವಾಗಿರುವುದನ್ನು ಅರಿಯಬೇಕು. ವ್ಯಕ್ತಿಯ ಭಾವನೆಗಳು ವಸ್ತುಗಳಿಗೆ ರಾವುಗನ್ನಡಿಯನ್ನು ಹಿಡಿದು ಅವನ್ನು ಅಯಥಾರ್ಥ ರೂಪದಲ್ಲಿ ತೋರಿಸುವವೆಂಬುದು ನಿಜ. ಆದರೆ ತಾರತಮ್ಯ-ಜ್ಞಾನವಿಲ್ಲದಿದ್ದರೆ ಅನಿಷ್ಟವನ್ನು ತಪ್ಪಿಸಿಕೊಳ್ಳಲಿಕ್ಕೆ ಹೇಗಾಗುತ್ತದೆ? ಆ ಅನಿಷ್ಟವು ಕಟ್ಟಿಟ್ಟ ಮಾತೇ ಸರಿ.

(೩) ಸಂಗೀತದಲ್ಲಿ ಅಪಲಯಧ್ವನಿ ಹೇಗೆ ಅವಶ್ಯಕವೋ ಹಾಗೆಯೆ ಪ್ರಪಂಚದ ಪರಿಪೂರ್ಣತೆಗೂ ಅದರ ಮಂಗಳ ಸಿದ್ಧಿಗೂ ಅನಿಷ್ಟವು ಅನಿವಾರ್ಯ. ಇದು ವಾಸ್ತವಿಕ ದೃಷ್ಟಿಯನ್ನು ಎತ್ತಿ ಹಿಡಿಯುತ್ತದೆ. ಇದರ ಬಗೆಗೆ ಸಂಭೂತಿ ವಾದವು ಹೀಗೆ ಹೇಳುವದು: (ಅ) ಮಾನವನ ಬಾಹ್ಯ ಸ್ವಭಾವದೊಂದಿಗೆ ಹಾಗು ಅಧಃಪ್ರವೃತ್ತಿಯೊಂದಿಗೆ ಅನಿಷ್ಟವು ಅನಿವಾರ್ಯವಾಗಿ ಅಂಟಿಕೊಂಡು ಬಂದಿವೆ. (ಆ) ಮಾನವನ ಆಂತರಿಕ ಸ್ವಭಾವದಲ್ಲಿ ಹಾಗು ಪರಾ ಪ್ರಕೃತಿಯಲ್ಲಿ ಅನಿಷ್ಟದ ಅಸ್ತಿತ್ವಕ್ಕೆ ಇಂಬಿಲ್ಲ. ಇದನ್ನೇ ಪರ್ಯಾಯವಾಗಿ ಹೇಳುವದಾದರೆ ಅಹಂಕಾರ ಜೀವನದಲ್ಲಿ ಅನಿಷ್ಟವು ಅನಿವಾರ್ಯವಾಗಿ ಸೇರಿಕೊಂಡಿದೆ. ಆದರೆ ಆತ್ಮಜೀವನದಲ್ಲಿ ಅನಿಷ್ಟಕ್ಕೆ ಅಸ್ತಿತ್ವವಿಲ್ಲ. ಅಹಂಕಾರ ಜೀವನದಿಂದ ಆತ್ಮ ಜೀವನದತ್ತ ಸಾಗುವಾಗ ಅನಿಷ್ಟವು ಇಷ್ಟದಲ್ಲಿ ಮಾರ್ಪಡುತ್ತ ಹೋಗುವದು. ಅನಿಷ್ಟವು ಕೆಲವೊಂದು ಮಟ್ಟದಲ್ಲಿ ಹಲವೊಂದು ಪರಿಸ್ಥಿತಿಯಲ್ಲಿ ಅನಿವಾರ್ಯ-ವೆಂದಬಳಿಕ ಅದು ಕಾಲ್ಪನಿಕವೆಂದು ಕಣ್ಣು ಮುಚ್ಚಿ ಕೂಡ್ರುವದಾಗಲಿ, ಅದು ಭೀಕರವೆಂದು ಬಗೆದು ಓಡಿಹೋಗುವದಾಗಲಿ ಸಲ್ಲದು. ಅದನ್ನು ಎದುರಿಸಲೇ ಬೇಕು. ಅನಿಷ್ಟವು ವಾಸ್ತವಿಕವೆಂದಬಳಿಕ ಅದನ್ನು ಪರಿಸ್ಥಿತಿಗೆ ತಕ್ಕಂತೆ ಎದುರಿಸಿ ಗೆಲ್ಲಬೇಕು; ಅದನ್ನು ಅಂಕಿತದಲ್ಲಿಟ್ಟುಕೊಳ್ಳಬೇಕು. ಅಲ್ಲಮ ಪ್ರಭುದೇವರು ಹೇಳುವಂತೆ—

ಕಳ್ಳಗಂಜಿ ಕಾಡ ಹೊಕ್ಕರೆ ಹುಲಿ ತಿಂಬುದು ಮಾಣ್ಬುದೇ?
ಹುಲಿಗಂಜಿ ಹುತ್ತ ಹೊಕ್ಕರೆ ಸರ್ಪ ಕಚ್ಚದೆ ಮಾಣ್ಬುದೆ?
ಕಾಲಗಂಜಿ ಭಕ್ತನಾದರೆ ಕರ್ಮ ತಿಂಬುದು ಮಾಣ್ಬುದೆ?

ಸಂಸಾರ, ಸನ್ಯಾಸ, ಯೋಗ, ಭಕ್ತಿ ಯಾವುದೇ ಮಾರ್ಗವನ್ನು ಅನುಸರಿಸುತ್ತಿರಲಿ ಅಲ್ಲಿ ಒಂದೊಂದು ತರಹದ ಹೇಯ, ಭಯ, ಅನಿಷ್ಟ ಇವು ಇದ್ದವುಗಳೇ. ಅವಕ್ಕೆ ಅಂಜದೆ ಅದನ್ನು ಎದುರಿಸಿ ಮಂಗಲವನ್ನು ಕಾಣಬೇಕು.

ಅನಿಷ್ಟವನ್ನು ಎದುರಿಸಿ ಅದನ್ನು ಗೆದ್ದು ಅಂಕಿತದಲ್ಲಿಟ್ಟುಕೊಳಬೇಕಾದರೆ ಬಲವಂತ ಶಕ್ತಿಯು ಬೇಕು. ಇಂತಹ ಶಕ್ತಿಯ ಬಗೆಗೆ ಜರ್ಮನ್ ತತ್ವವಿದನಾದ ನೀತ್ಸೆ ಎಂಬಾತನು ತನ್ನ 'ಅತಿಮಾನವ' (Superman) ಎಂಬ ಗ್ರಂಥದಲ್ಲಿ ಹೀಗೆ ಹೇಳುತ್ತಾನೆ:

"ಶ್ರೇಯವಾವುದು? ಮಾನವನೊಳಗೆ ಯಾವುದು ಶಕ್ತಿಯ ಪ್ರತೀತಿಯನ್ನು, ಶಕ್ತಿಯ ಅಭಿಲಾಷೆಯನ್ನು, ಒಟ್ಟಾರೆ ಶಕ್ತಿ ಎಂಬುದನ್ನು ವಿಸ್ತಾರಗೊಳಿಸುವದೋ ಅದುವೆ ಶ್ರೇಯ.

ಹೇಯವಾವುದು? ದುರ್ಬಲಜನ್ಯವೆಂದು ಏನಿದೆಯೋ, ಅಂಧಶ್ರದ್ಧೆ ಅವಿಶ್ವಾಸಗಳನ್ನು ಹುಟ್ಟಿಸುವಂತಹದೇನಿದೆಯೋ ಅದು ಹೇಯ.

ಸುಖವೆಂದರೇನು?' ಶಕ್ತಿಯು ವೃದ್ಧಿಂಗತವಾಗುತಲಿದೆ, ವಿಘ್ನಗಳು ಭಗ್ನಗೊಳಿಸಲ್ಪಡುತ್ತವೆ ಎಂಬ ಪ್ರತೀತಿ. ನಮಗೆ ಬೇಕಾದದ್ದು ಸಂತೋಷವಲ್ಲ, ಶಕ್ತಿ. ಇನ್ನೂ ಹೆಚ್ಚು ಶಕ್ತಿ!

ಎಲಾ ಮಾನವಾ, ಪುರಾತನವು ನಿನಗೆ ಪುಣ್ಯಶಾಲಿಯಾಗೆಂದು ಬೋಧಿಸುತ್ತದೆ; ಆದರೆ ನಾನು ನಿನಗೆ ಸಮರ್ಥನಾಗೆಂದು ಉಪದೇಶಿಸುತ್ತೇನೆ. ಪುರಾತನವು ನಿನಗೆ ಸತ್ಪುರುಷನಾಗೆಂದು ಹೇಳಿತು; ಆದರೆ ನಾನು ನಿನಗೆ ಮಹತ್ತರ ವ್ಯಕ್ತಿಯಾಗೆಂದು ಹೇಳುತ್ತೇನೆ. ಪುರಾತನವು ನಿನಗೆ ಮನುಷ್ಯನೇ, ನೀನು ಮಾನವಮಾತ್ರನಾದ್ದರಿಂದ ಸಾಮಾನ್ಯ ಮಾರ್ಗದಿಂದ ಸಾಮಾನ್ಯರೊಂದಿಗೆ ಕೂಡಿಕೊಂಡು ನಡೆ ಎಂದು ಉಪದೇಶಿಸಿತು; ಆದರೆ ನಾನು ನಿನಗೆ ಎಲೋ ಮಾನವಾ, ನೀನು ಮಾನವಮಾತ್ರನಲ್ಲ, ಸಾಮಾನ್ಯನಲ್ಲ; ಸಾಧಾರಣವನ್ನು ಮೆಟ್ಟಿ ಅಸಾಧಾರಣನಾಗು, ಅತಿಮಾನವನಾಗು ಎಂದು ಬೋಧಿಸುತ್ತೇನೆ."

ನೀಟ್ಸೆನ ಈ ಮಾತುಗಳು ೧೯ನೆಯ ಶತಮಾನದ ಕೊನೆಯಲ್ಲಿ ಪಡುವಣ ದೇಶಗಳ ಜನರಿಗೊಂದು ಹೊಸ ಅಂಜನವನ್ನು ಹಚ್ಚಿ ಹೊಸ ನೋಟವನ್ನುಂಟು ಮಾಡಿದವು. ಆದರೆ ತುಸು ಹೆಚ್ಚುಕಡಿಮೆ ಅದೇ ಸುಮಾರಿಗೆ ಸ್ವಾಮಿ ವಿವೇಕಾನಂದ ಹಾಗೂ ಸ್ವಾಮಿ ರಾಮತೀರ್ಥರು ಆತ್ಮಶಕ್ತಿಯ ಬಗೆಗಿನ ನೂತನ ವಿಚಾರಗಳನ್ನು ಪಡುವಣ ದೇಶಗಳಲ್ಲಿ ಪ್ರಸಾರಗೊಳಿಸಿ ಅವರಲ್ಲಿ ಅಭೂತಪೂರ್ವ ಚೈತನ್ಯವನ್ನು ತುಂಬಿದರು. ಈ ವೇದಾಂತಕೇಸರಿಗಳ ಗರ್ಜನೆ ಹೀಗೆ ಇದೆ: "ಆತ್ಮನು ಸರ್ವ ಸಮರ್ಥನು, ಸರ್ವಾಂತರ್ಯಾಮಿ, ಸರ್ವವಿಜಯಿಯು. ಆತನನ್ನು ಎದುರಿಸುವ ಸಾಮರ್ಥ್ಯ ಇನ್ನಾವುದಕ್ಕುಂಟು? ಎಲೊ ಬಂಧುವೆ, ನಿನ್ನ ವಿಚಾರ ಹಾಗು ಅನುಭೂತಿಗಳ ಹಿಂದೆ ಒಬ್ಬ ಶಕ್ತಿಮಂತ ಪುರುಷನಿದ್ದಾನೆ, ಒಬ್ಬ ಅಜ್ಞಾತ ಜ್ಞಾನಿ ಇದ್ದಾನೆ. ಆತನ ಹೆಸರು ಆತ್ಮ. ನಿನ್ನ ದೇಹವೇ ಆತನ ದೇವಾಲಯ. ನಾನು ಏನು ಇರುವೆನೋ ಅದೇ ಆಗಲಿಕ್ಕೆ ಬೇಕು. ನಿನ್ನ ಅರಿತ ಅಂತರಾತ್ಮನು ನಿನಗೆ ಏನು ಹೇಳುತ್ತಿರುವನೆಂಬುದನ್ನು ಬಲ್ಲೆಯಾ? ಆತನು ಉಸುರುತ್ತಿದ್ದಾನೆ— ನೀನು ಏನು ಇರುವೆಯೋ ಅದೇ ಆಗೆಂದು. ಹಾಗಾದರೆ ನೀನು ಏನು ಇರುವಿ? ನೀನು ಶುದ್ಧನೂ ಮುಕ್ತನೂ ಅಪಾಪ-ಬದ್ಧನೂ ಆಗಿರುವಿ. ನೀನು ಆತ್ಮಸ್ವರೂಪನೂ, ಸಚ್ಚಿದಾನಂದಮಯನೂ ಆಗಿರುವಿ." ಹೀಗೆ ಆ ಸ್ವಾಮಿ ವಿವೇಕಾನಂದ ಹಾಗು ಸ್ವಾಮಿ ರಾಮತೀರ್ಥರು ನೆಲಹಿಡಿದ ನಿಷ್ಕ್ರಿಯೆಯ ವೇದಾಂತದಲ್ಲಿ ಉತ್ಸಾಹ ಶಕ್ತಿಯನ್ನು ಸಾಮರ್ಥ್ಯವನ್ನು ತುಂಬಿದರು.

ನಮಗೆ ಬೇಕಾದುದು ಸಂತೋಷವಲ್ಲ, ಶಕ್ತಿ; ಆದರೆ ನೀಟ್ಸೆನು ಘೋಷಿಸಿದ ಶಕ್ತಿಮಂತ್ರವಲ್ಲ, ವೇದಾಂತವು ನಮಗೆ ಬೋಧಿಸಿದ ಶಕ್ತಿಮಂತ್ರ. ನೀಟ್ಸೆನಿಗೆ ಬೇಕಾದುದು ಆಸುರೀ ಶಕ್ತಿ; ವೇದಾಂತಕ್ಕೆ ಬೇಕಾದುದು ಆತ್ಮಶಕ್ತಿ, ದೈವೀಶಕ್ತಿ. ನೀಟ್ಸೆನು ಅನ್ನುತ್ತಾನೆ. "ನನಗೆ ಬೇಕಾದುದು ಜಗತ್ತು! ಅದು ಹೇಗಿದೆಯೋ ಕೇವಲ ಹಾಗೆಯೇ ನನಗೆ ಬೇಕು. ಅದು ನನಗೆ ಅಧಿಕಾಧಿಕವಾಗಿ ಬೇಕು, ಅನಂತಕಾಲಿಕವಾಗಿ ಬೇಕು. ಅದಕ್ಕೆಂತಲೇ ನಾನು ಅತೃಪ್ತಿಪೂರ್ವಕವಾಗಿ ಕೂಗಿಕೊಳ್ಳುತ್ತಿದ್ದೇನೆ, ಇನ್ನಿಷ್ಟು, ಇನ್ನಿಷ್ಟು, ಇನ್ನಿಷ್ಟು, ಇನ್ನಿಷ್ಟು—" ಎಂದು ಜಗತ್ತಿನ ಮೇಲೆ ಪ್ರಭುತ್ವವನ್ನು ಪಡೆದರೂ ಅತೃಪ್ತಿಯಳಿಯದಿದ್ದರೆ ಅಂತಹ ಪ್ರಭುತ್ವದಿಂದ ಆಗುವ ಪ್ರಯೋಜನವೇನು, ಲಾಭವೇನು? ಆಸುರೀ ಶಕ್ತಿ-ಯಲ್ಲಿ ಅತೃಪ್ತಿಯು ತಾಂಡವವಾಡುತಿದೆ. ಆದರೆ ದೈವೀಶಕ್ತಿಯ ಮಾತು

ಹಾಗಲ್ಲ. ಅದು ಇದ್ದ ಕ್ಕಿದ್ದಂತೆ ಜಗತ್ತನ್ನು ಬಯಸುವದಿಲ್ಲ. ಏಕೆಂದರೆ ಅದು ಹೇಯವದೆ. ಹೇಯವನ್ನು ಶ್ರೇಯವಲ್ಲಿ ಮಾರ್ಪಡಿಸಿದ ಹೊರತು ಅದು ಸ್ವೀಕರಿಸಲು ಯೋಗ್ಯವಾಗಲಾರದು. ಹುಲ್ಲು ಮಾರ್ಪಾಟವನ್ನು ಹೊಂದಿದ ಬಳಿಕ ಸಿದ್ಧವಾದ ಆಕಳ ಹಾಲು ಆಹಾರವಾಗಿ ಪ್ರೇಯವಾಗಿದೆ. ಕಬ್ಬಿಣವು ಅವಲೋಹ, ಅದಕ್ಕೆ ತುಕ್ಕುಹಿಡಿಯುವದು; ಪರುಷ ಮುಟ್ಟಿ ಅದು ಬಂಗಾರದಲ್ಲಿ ಪರಿವರ್ತಿಸಿದರೆ ಆಗ ಅದು ಉತ್ತಮ ಲೋಹವಾಗುವದು; ತುಕ್ಕಿನ ಭಯವಿಲ್ಲದೆ ತೇಜೋಮಯವಾಗಿ ಬಾಳುವದು. ಹಾಗೆಯೇ ಚಿತ್‌ಶಕ್ತಿಯ ಸೋಂಕಿನಿಂದ ಪ್ರಕೃತಿಯ ಜಾಡ್ಯವನ್ನು ತೊಲಗಿಸಬೇಕು. ಅಪರಾಪ್ರಕೃತಿಯು ಪರಾಪ್ರಕೃತಿಯಲ್ಲಿ ಮಾರ್ಪಡಬೇಕು. ಆಗ ತಾನೆ ಅದು ಸ್ವೀಕರಿಸಲು ಯೋಗ್ಯ ವಾಗುವದು. ಈ ಮಾರ್ಪಾಟ, ಈ ಪರಿವರ್ತನೆ ಧರ್ಮಜೀವನದಿಂದ ಸತ್-ಶೀಲದಿಂದ ಮಾತ್ರ ಸಾಧ್ಯ. ಧರ್ಮಜೀವನ ಸುಖಜೀವನವನ್ನು ಪಡೆಯಲು ಸಹಾಯಕಾರಿ ಮಾತ್ರವಲ್ಲದೆ, ಧರ್ಮಜೀವನವೇ, ಸಚ್ಛೀಲವೇ ನಮ್ಮ ಪುರು-ಷಾರ್ಥವಲ್ಲವೆಂದು ಒಂದು ಪಕ್ಷ ವಾದಿಸುವದು. ಧರ್ಮಜೀವನವೇ ನಮ್ಮ ಧ್ಯೇಯ, ಅದುವೆ ನಮ್ಮ ಪುರುಷಾರ್ಥ, ಸುಖವು ಗೌಣವೆಂದು ಇನ್ನೊಂದು ಪಕ್ಷವು ಸಾಧಿಸುವದು. ಆದರೆ ಪರ್ಯಾಲೋಚನೆಯಿಂದ ಧರ್ಮಜೀವ-ನವೇ, ಸದ್ಗುಣಸಂಪತ್ತಿಯೇ ನಮ್ಮ ಪರಮಶ್ರೇಯ. ಸೌಖ್ಯವೆಂಬುದು ನಮ್ಮ ಶ್ರೇಯವಾಗಲಾರದು. ಅದುವೆ ನಮ್ಮ ಜೀವನ ಧ್ಯೇಯವಾಗಲಾರದು. ಸೌಖ್ಯದ ಸಮಸ್ತ ಅಂಶಗಳನ್ನು ಸಚ್ಛೀಲವೇ ಒಳಗೊಂಡಿರುತ್ತದೆ. ಸಚ್ಛೀಲವೆ ನಮ್ಮ ನಿಜ ವಾದ ಸೌಖ್ಯ; ಅದಕ್ಕೆ ಅದುವೆ ತನ್ನ ಫಲ. ಇದೇನೋ ಸ್ವಲ್ಪ ಕಠಿಣವಾಗಿಯೂ ಕಷ್ಟಸಾಧ್ಯವಾಗಿಯೂ ತೋರಿದರೂ ಅಶಕ್ಯವಲ್ಲ. ಮಾನವನು ಸದ್ಯದ ಸ್ಥಿತಿ-ಯಲ್ಲಿ, ಮಾನವನಾಗಿದ್ದ ಮಾತ್ರಕ್ಕೆ ತನ್ನಲ್ಲಿದ್ದ ದೇವಾಂಶದ ಪ್ರಕಾಶವನ್ನು ಪ್ರಜ್ವಲಗೊಳಿಸಲು ಪ್ರಯತ್ನವನ್ನೇ ಮಾಡಕೂಡದೆ ? ನಮ್ಮ ಅಪೂರ್ಣತೆ-ಯಲ್ಲಿಯೇ, ನಮ್ಮ ಕುಂದು ಕೊರತೆಗಳಲ್ಲಿಯೇ, ನಮ್ಮ ನಿರ್ಬಲ ನಿತ್ರಾಣ-ಗಳಲ್ಲಿಯೇ, ನಮ್ಮ ಆಶಾಪಾಶಗಳಲ್ಲಿಯೇ ಸಿಲುಕಿ ಒದ್ದಾಡುತ್ತ ಸರಿದು ಹಿಗ್ಗುತ್ತ– ಇದೇ ನಮ್ಮ ಧ್ಯೇಯ, ಇದೇ ನಮ್ಮ ಪ್ರೇಯ, ಇದೇ ನಮ್ಮ ಶ್ರೇಯ, ಇದೇ ನಮ್ಮ ಮಾನವ ಸ್ವಭಾವ ಎಂದು ಬಗೆದು ವಿರೋಧ ವಿಪರ್ಯಾಸಗಳಿಂದಲೂ, ದೋಷ ನ್ಯೂನ್ಯತೆಗಳಿಂದಲೂ ತುಂಬಿ ತುಳುಕುವ ಈ ಮಾನವ ಸ್ವಭಾವವನ್ನೇ ಅಪ್ಪಿಕೊಂಡು ಆನಂದಿಸುವ ಈ ಕಾಲದ ಮಾನವತಾವಾದಕ್ಕೆ ಏನೆಂದು

ಕರೆಯಬೇಕು ? ಇಂತಹ ಇರುಕು–ಬಿರುಕುಗಳುಳ್ಳ ಕುಬ್ಜ ಜೀವನದಲ್ಲಿ, ಲಿಲಿಪುಟರ ಮಾನವತ್ವದಲ್ಲಿ ಬೇಸರ ಹೊಂದುವವರಿಗೆಲ್ಲ ಮನುಜನು ಈಶ್ವರ ಸ್ವರೂಪವೆಂದೂ ದೈವ ಸಂಕಲ್ಪಾನುಸಾರವಾಗಿ ನಡೆಯುವದೇ ಸಚ್ಛೀಲದ ಹೆಗ್ಗುರುತೆಂದು ಸಾರುವದು ಸಂಭೂತಿವಾದವು. ದ್ವಂದ್ವಾತೀತನಾಗಿ, ಚಿತ್ತವೃತ್ತಿಗಳನ್ನೆಲ್ಲ ನಿರೋಧ ಮಾಡಿ, ನಿಯತ ಕರ್ಮಗಳನ್ನು ಬಿಡದೆ, ಕರ್ತವ್ಯ ಪರಾಙ್ಮುಖನಾಗದೆ, ಆವಶ್ಯಕವೆಂದು ತೋರಿದಾಗ ಭೋಗದಿಂದಲೂ ಹಿಮ್ಮೆಟ್ಟದೆ, ಸ್ಥಿತ-ಪ್ರಜ್ಞನಾಗಿ ಸ್ವದೇಶ–ಸ್ವರಾಜ್ಯ ಕಾರ್ಯಗಳಲ್ಲಿ ಭಾಗಿಯಾಗಿ ಲೋಕ ಸಂಗ್ರಹವನ್ನು ಜಗದ್ರಾಜ್ಯದ ಕಲ್ಯಾಣವನ್ನು ಅಭಿವೃದ್ಧಿಗೊಳಿಸಲು ಪ್ರಯತ್ನಿಸಬೇಕೆಂದೂ ಸಾರುವದು ಸಂಭೂತಿವಾದವು. ಶ್ರೇಯ ಮತ್ತು ಪ್ರೇಯವನ್ನು ಸೂಚಿಸುವ ಈ ಸಂಭೂತಿವಾದವು ನಮ್ಮ ಧ್ಯೇಯವಾಗಿರಲಿ.

---

# ಮೂರರ ಮುಪ್ಪುರಿ

ಭಾರತೀಯ ತತ್ವಶಾಸ್ತ್ರದಲ್ಲಿ ಷಡ್ದರ್ಶನಗಳಿಗೆ ಒಂದು ಉನ್ನತವಾದ ಮಹತ್ವದ ಸ್ಥಾನವುಂಟು. ಅವುಗಳಲ್ಲಿ ಸಾಂಖ್ಯ ದರ್ಶನವು ಒಂದು ವೇದಾಂತ ಶಾಸ್ತ್ರದ ಪೂರ್ವ ಪೀಠಿಕೆಯೆಂದು ಹೇಳುತ್ತಾರೆ; ಅದೇಕೆ ಸಾಂಖ್ಯವೆಂದರೆ ವೇದಾಂತ, ವೇದಾಂತವೆಂದರೆ ಸಾಂಖ್ಯ ಎಂದು ಹೇಳುವರು. ಸಾಮಾನ್ಯವಾಗಿ ತತ್ವಗಳನ್ನು ಸಂಖ್ಯೆ ಮಾಡುವ ಎಂದರೆ ಎಣಿಸಿ ಹೇಳುವ ಶಾಸ್ತ್ರಕ್ಕೆ ಸಾಂಖ್ಯ ಶಾಸ್ತ್ರವೆಂದು ಹೆಸರು.

ಸಂಖ್ಯಾಂ ಪ್ರಕುರ್ವತೆ ಚೈವ ಪ್ರಕೃತಿಂ ಚ ಪ್ರಚಕ್ಷತೆ |
ತತ್ವಾನಿ ಚ ಚತುರ್ವಿಂಶತ್ ತೇನ ಸಂಖ್ಯಾಃ ಪ್ರಕೀರ್ತಿತಾಃ ||

ಈ ಸಾಂಖ್ಯಶಾಸ್ತ್ರವು ಸಂಖ್ಯೆಯನ್ನು ವ್ಯಕ್ತಗೊಳಿಸುತ್ತದೆ. ಮತ್ತು ಪ್ರಕೃತಿ-ಯನ್ನು ವಿವರಿಸುತ್ತದೆ; ತತ್ವಗಳು ೨೪; ಇದರಿಂದ ಸಂಖ್ಯೆಯ ಸಂಬಂಧವು ಹೇಳಲ್ಪಡುತ್ತದೆ. 'ಸಂಖ್ಯಾ' ಎಂಬ ಶಬ್ದಕ್ಕೆ 'ಜ್ಞಾನ' ಎಂಬ ಅರ್ಥವೂ ಇದೆ. ಈ ದೃಷ್ಟಿಯಿಂದ ನೋಡಿದಾಗ ಎಣಿಸಲ್ಪಟ್ಟ ತತ್ವಗಳು ಆತ್ಮವಲ್ಲ, ಅವು ನಿಜ ವಸ್ತುವಲ್ಲ ಎಂದು ನೀತಿಗಳೆಯಲಾಗುತ್ತದೆ, ನಿರಾಕರಿಸಲಾಗುತ್ತದೆ. ಇಪ್ಪತ್ತು-ನಾಲ್ಕು ತತ್ವಾತ್ಮಕವಾದ ಪ್ರಕೃತಿಗೆ—ಎಂದರೆ ಪ್ರಧಾನ, ಮಹತ್ತು, ಅಹಂಕಾರ, ಮನಗಳು, ಜ್ಞಾನೇಂದ್ರಿಯಗಳೈದು, ಕರ್ಮೇಂದ್ರಿಯಗಳೈದು, ತನ್ಮಾತ್ರೆಗಳೈದು ಮತ್ತು ಐದು ಮಹಾಭೂತಗಳು ಇವುಗಳಿಗೆ— ಆಧಾರ ಭೂತವಾದ ಆತ್ಮನು ಸತ್ಯವಸ್ತು ಎಂಬ ಜ್ಞಾನವೇ ಸಾಂಖ್ಯ. ಪ್ರಕೃತಿ ಮತ್ತು ಆತ್ಮ ಇಲ್ಲವೆ ಪುರುಷ ಇವುಗಳ ಸಮ್ಯಕ್ ಜ್ಞಾನವೇ ವೇದಾಂತದಲ್ಲಿ ಆತ್ಮಾನಾತ್ಮ ವಿವೇಕವಾಗಿ ಪರಿಣಮಿಸಿತು. ಹೀಗೆ ಆತ್ಮಾನಾತ್ಮ ವಿವೇಕದಿಂದ ಆತ್ಮ ಸಾಕ್ಷಾತ್ಕಾರವನ್ನು ಪಡೆಯುವದು ಸಾಂಖ್ಯದ ಗುರಿಯಾಗಿರುತ್ತದೆ.

ಪುರುಷನು ಸತ್ ಆಗಿದ್ದಾನೆ, ಎಂದರೆ ಅವನ ಅಸ್ತಿತ್ವವು ಎಲ್ಲೆಡೆ-ಯಲ್ಲಿಯೂ ಉಂಟು. ಹಾಗೆಯೇ ಸರ್ವ ವಸ್ತುಗಳೂ ಸತ್, ಅಂದರೆ ಅವು ಅಸ್ತಿ ಎಂಬ ವ್ಯವಹಾರಕ್ಕೆ ಗೋಚರವಾಗಿ 'ಸತ್ತಾ' ಅಥವಾ ಇರುವಿಕೆಯುಳ್ಳವು ಗಳಾಗಿವೆ. 'ಸತ್ತ್ವ' ಎಂಬ ಭಾವವು ಸರ್ವ ವಸ್ತುಗಳೂ ಉಂಟು. 'ಅಸತ್ತ್ವ' ಎಂಬ ಭಾವವುಳ್ಳ ವಸ್ತುವೇ ಇಲ್ಲ. ಇದರಿಂದ ಪ್ರಪಂಚವು ಯಾವ ಅರ್ಥ

ದಲ್ಲಿಯೂ ಅಯಥಾರ್ಥವಾದುದಲ್ಲ; ಅದು ಯಥಾರ್ಥವಾದುದು ಎಂಬದು ನಿಷ್ಪನ್ನವಾಗುತ್ತದೆ. 'ನಾ ಸತೋ ವಿದ್ಯತೆ ಭಾವಃ ನಾ ಭಾವೊ ವಿದ್ಯತೆ ಸತಃ' ಭೂತಗಳು ತನ್ಮಾತ್ರ ಸೃಷ್ಟಿಯಲ್ಲಿ ಅಡಗುವವು ಆದರೆ ಅಡಗಿದ ಅವು ಮತ್ತೆ ಒಡಮೂಡುವವು. ಆದ್ದರಿಂದ ಅಸತ್ ಎಂಬುದು ಇಲ್ಲವೇ ಇಲ್ಲ. ಬೌದ್ಧರು ಇದಕ್ಕೆ ಪ್ರತಿಯಾಗಿ ಸರ್ವವೂ ಅಸತ್ ಎಂದು ಹೇಳುವರು. 'ಸರ್ವಂ ಶೂನ್ಯಂ ಶೂನ್ಯಂ' 'ಸರ್ವಂ ಕ್ಷಣಿಕಂ ಕ್ಷಣಿಕಂ' ಎಂಬುದು ಅವರ ಅಭಿಪ್ರಾಯ. ಆದ್ದರಿಂದ ಅವರು ಶೂನ್ಯವಾದಿಗಳೆನಿಸಿದರು. ಸಾಂಖ್ಯರಾದರೊ ಸತ್ಯವಾದಿಗಳು. ಆದ್ದರಿಂದ ಅವರಿಗೆ ಸರ್ವ ಜ್ಞಾನವು ಸತ್ಯ, ಸರ್ವ ವಸ್ತುಗಳು ಸತ್ಯ, ಅವು ಯಥಾರ್ಥವಾಗಿರುತ್ತವೆ. ಇದಕ್ಕಾಗಿ ಅವರಿಗೆ ಸತ್ತಾವಾದಿಗಳೆಂದು ಕರೆಯುವರು.

ಸರ್ವ ಜ್ಞಾನವೂ ಸರ್ವ ವಸ್ತುಗಳೂ ಸತ್ಯವಾದರೆ ಸಾಂಖ್ಯರಿಗೆ ಭ್ರಾಂತಿ ಅಥವಾ ಭ್ರಮೆ ಎಂಬುದು ಇಲ್ಲವೇ ?— ಎಂದು ಪ್ರಶ್ನಿಸಬಹುದು. ಅವರಲ್ಲಿ ಭ್ರಮೆ ಎಂಬ ವ್ಯವಹಾರವು ಉಂಟು. ಒಂದು ವಸ್ತುವನ್ನು ಮತ್ತೊಂದು ವಸ್ತುವಾಗಿ ತಿಳಿಯುವದೇ ಭ್ರಮೆ—ಹಗ್ಗವೇ ಹಾವು ಎನ್ನುವಂತೆ—ಎಂದು ಕೆಲ ವರು ಹೇಳುವರು. ಆದರೆ ಸಾಂಖ್ಯರ ಪ್ರಕ್ರಿಯೆಯ ಮೇರೆಗೆ ಆ ಎರಡೂ ವಸ್ತುಗಳಿಗೆ—ಇಲ್ಲಿ ಹಗ್ಗ ಮತ್ತು ಹಾವು ಇವುಗಳಿಗೆ—ಇರುವ ವ್ಯತ್ಯಾಸವನ್ನು ತಿಳಿಯದೆ ಇರುವುದೇ ಭ್ರಾಂತಿ, ಭ್ರಮೆ. ವಸ್ತುಗಳಿಗೆ ಇರುವ ಪರಸ್ಪರ ವ್ಯತ್ಯಾಸ ವನ್ನು ತಿಳಿಯದೆ ಇರುವುದಕ್ಕೆ 'ಅಖ್ಯಾತವಾದ' ಎಂದು ಹೆಸರು. ಹಗ್ಗವನ್ನು ಹಾವನ್ನಾಗಿ ಭಾವಿಸುವದು ಅಧ್ಯಾಸ, ಅಥವಾ ಅನ್ಯಥಾಖ್ಯಾತಿ ಎಂದು ವೇದಾಂತದಲ್ಲಿ ಕರೆಯಲ್ಪಡುತ್ತದೆ. ಆದರೆ ಹಗ್ಗಕ್ಕೂ ಹಾವಿಗೂ ಇರುವ ವ್ಯತ್ಯಾಸವನ್ನು ತಿಳಿಯದೆ ಇರುವುದೇ ಅಖ್ಯಾತಿ ಎಂದು ಸಾಂಖ್ಯ ಶಾಸ್ತ್ರವು ಭಾವಿಸುತ್ತದೆ. ಸಾಂಖ್ಯದರ್ಶನದ ಮೇರೆಗೆ ಭ್ರಾಂತಿ ಎಂದರೆ ಎದುರಿಗಿರುವ ಒಂದು ವಸ್ತುವಿನಲ್ಲಿ ಮುಖ್ಯವಾಗಿರುವ ಅಂಶವನ್ನು ಗ್ರಹಿಸದೆ ಸಾಧಾರಣವಾದ ಅಂಶವನ್ನು ಗ್ರಹಿಸುವ ಪ್ರತ್ಯಕ್ಷ; ಎದುರಿಗಿರುವ ವಸ್ತುವಿಗೆ ಸಮಾನವಾದ ಬೇರೊಂದು ವಸ್ತುವಿನ ಸ್ಮರಣೆ, ಬೇರೊಂದು ಭ್ರಾಂತಿ ಎಂದು ವ್ಯವಹಾರಗೊಳ್ಳು ವದು; ಎಂದರೆ ಅದು 'ಅಖ್ಯಾತಿ' ಎಂದು ಹೆಸರನ್ನು ಪಡೆಯುವದು.

ಅಖ್ಯಾತಿಗೆ ಅವಿವೇಕ ಅಥವಾ ಅಭಿಮಾನ ಎಂದು ಬೇರೆ ಹೆಸರುಂಟು. ಪ್ರಕೃತಿ—ಪುರುಷರ ಬಗೆಗೆ ಅವಿವೇಕವು ಎಂದರೆ ಯಥಾರ್ಥವಾದ ತಿಳಿವಳಿಕೆ

ಇಲ್ಲದೆ ಇರುವದು ಸಂಸ್ಕಾರಕ್ಕೆ ಕಾರಣವಾಗುವದು. ವಿವೇಕ, ಖ್ಯಾತಿ ಮಾತ್ರ ಸಾಕ್ಷಾತ್ಕಾರದ ದಿಶೆಯನ್ನು ಹೊಂದಿ ಅವಿವೇಕದಿಂದ ಬಂದಿರುವ ಸಂಸ್ಕಾರವನ್ನು ನಿವೃತ್ತಿಮಾಡುವದು. ಈ ಖ್ಯಾತಿ ಇದ್ದ ಹೊರತು ಮಾನವನಿಗೆ ವಿವೇಕವು ಅಂಕುರಿಸದು, ತ್ಯಾಗವು ಮೊಳಕೆಯೊಡೆದು, ಜ್ಞಾನವು ಉದಯಿಸದು. ಸತ್ತ್ವ ಎಂದರೆ ಪ್ರಕೃತಿ, ಪುರುಷ ಎಂದರೆ ಆತ್ಮಾ, ಅನ್ಯಥಾ ಖ್ಯಾತಿ ಎಂದರೆ ಪರಸ್ಪರ ವಿರುವ ವ್ಯತ್ಯಾಸ ನಿಶ್ಚಯ; ಇದುವೆ, ಸತ್ತ್ವಪುರುಷಾನ್ಯಥಾಖ್ಯಾತಿಯು. ವಿವೇಕ ಖ್ಯಾತಿಯು ಜ್ಞಾನೋದಯವನ್ನು ಸೂಚಿಸುವುದು. ಜ್ಞಾನವು ಯಾವಾಗಲೂ ಸ್ವಯಂ ಪ್ರಕಾಶವುಳ್ಳದ್ದು. (Knowledge is self-luminous; and self-conscious) ವ್ಯವಹಾರಕ್ಕೆ ಮೊದಲಿಗೆ ಜ್ಞಾನವು ಬೇಕು; ಪ್ರಕೃತಿಯ ಪ್ರಸಾರವನ್ನು, ಹಬ್ಬುಗೆ ವಿಸ್ತಾರಗಳನ್ನು ತಿಳಿದು ಕೊಳ್ಳಲಿಕ್ಕೆ ಜ್ಞಾನವು ಬೇಕು. ಜ್ಞಾನವೆಂಬ ಪ್ರಕಾಶವು ಸ್ವ-ಪರ ನಿರ್ವಾಹಕ ರೀತಿಯಲ್ಲಿ ತನ್ನನ್ನು ತಾನು ತಿಳಿಯುತ್ತ ಅನ್ಯವಸ್ತುಗಳನ್ನು ತಿಳಿಸಿಕೊಡುವುದು. ದೀಪವು ಅಂಧಕಾರದಲ್ಲಿ ತನ್ನನ್ನು ತಾನು ತಿಳಿಯುತ್ತದೆ; ಮಾತ್ರವಲ್ಲ, ವಸ್ತು ಗಳನ್ನೂ ತಿಳಿಸಿಕೊಡುತ್ತದೆ. ದೀಪ ಪ್ರಕಾಶದ ತಿಳವಳಿಕೆಗೆ ಮತ್ತೊಂದು ದೀಪದ ಅವಶ್ಯಕತೆಯಿಲ್ಲ. ಇದುವೆ ಸ್ವ-ಪರ ನಿರ್ವಾಹಕ ಜ್ಞಾನ. ಸರ್ವಜ್ಞನ ಜ್ಞಾನವಾದರೂ ತನ್ನನ್ನು ತಾನು ತಿಳಿಯದೆ ಹೋದರೆ ಅವನು ಸರ್ವಜ್ಞ, ಸರ್ವ ಜ್ಞಾನಭರಿತ ಎಂದು ಹೇಳಲಿಕ್ಕೆ ಬರುವುದಿಲ್ಲ. ಆದ್ದರಿಂದ ಜ್ಞಾನವು ಜ್ಞಾಪಕವೂ ಅಹುದು, ಕಾರಕವೂ ಅಹುದು. ಬೆಂಕಿ ಎಂಬ ವಸ್ತುವು ಬೆಂಕಿ ಎಂದು ಗೊತ್ತಾಗದಿದ್ದರೂ ಮುಟ್ಟಿದರೆ ಸುಡುವದು. ಹೀಗೆಯೇ ಸುಡುವ ಧರ್ಮವುಳ್ಳ ಇನ್ನಿತರ ವಸ್ತುಗಳ ಬಗೆಗೆ ಈ ಮಾತು ಸತ್ಯವಿರುತ್ತದೆ. ಮುಟ್ಟಿದರೆ ಸುಡು ವದು ಎಂಬೀ ಮಾತು ಕಾರಕ ಹೇತುವಿನಿಂದ ಕೂಡಿಕೊಂಡಿರುತ್ತದೆ. ಹೊಗೆ ಕಂಡರೆ ಮಾತ್ರ ಇಲ್ಲಿ ಬೆಂಕಿ ಇದೆ ಎಂಬ ತಿಳವಳಿಕೆಯುಂಟಾಗುವದು. ಇದು ಜ್ಞಾಪಕಹೇತು ಎಂದು ಕರೆಯಿಸಿಕೊಳ್ಳಲ್ಪಡುವದು. ಕಾರಕ ಹೇತು ಅಂತಃಕರಣ ಪ್ರವೃತ್ತಿಗೆ ನಿಲುಕುವದು, ಕುರುಹಿನ ಸೋಂಕುಯಿಲ್ಲದೆ ಅರುಹು ಆಗುವ ಸ್ಥಿತಿ ಅದು. ಜ್ಞಾಪಕಹೇತು ಯುಕ್ತಿಯಿಂದ ಅರಿಯಲ್ತಕ್ಕದ್ದು, ಕುರುಹಿನ ಸೋಂಕಿ ನಿಂದ ಅರುಹು ಆಗುವ ಸ್ಥಿತಿಯದು. ಯೋಗಿಗಳಲ್ಲಿ ಕುರುಹಿನ ಜ್ಞಾನದ ಅವಶ್ಯವಿಲ್ಲ. ಅವರದು ಸ್ಫುರಣ ಜ್ಞಾನವಾಗಿದೆ. ಇದರಿಂದ ಸ್ವರೂಪ ಜ್ಞಾನ ವನ್ನು (Self knowledge) ಮಾಡಿಕೊಳ್ಳಲು ಅವರಿಗೆ ಸುಲಭವಾದ

ಅವಕಾಶವಿರುತ್ತದೆ. ಆದರೆ ಅವರಿಗೆ ಸಂಬಂಧ ಜ್ಞಾನ (Relative knowledge) ಇಲ್ಲದ್ದರಿಂದ ಅಷ್ಟುಮಟ್ಟಿಗೆ ಜ್ಞಾನದಲ್ಲಿ ಕೊರತೆಯುಂಟಾಗಿ ಜಗತ್ತಿನ ಮೇಲೆ ಅವರ ಪ್ರಭಾವ ಬೀಳುವದಿಲ್ಲ. ಜ್ಞಾನೇಂದ್ರಿಯಗಳಿಂದ, ಗ್ರಂಥದ ಮುಖಾಂತರವಾಗಿ, ಗುರುವಿನ ಅನುಗ್ರಹದಿಂದ, ವಿಷಯಗಳ ಸನ್ನಿಕರ್ಷದಿಂದ ಅಥವಾ ಬಾಹ್ಯ ಸೃಷ್ಟಿಯ ಸಂಪರ್ಕದಿಂದ ಆಗುವ ಜ್ಞಾನಕ್ಕೆ ಕುರುಹಿನ ಜ್ಞಾನ ಇಲ್ಲವೆ ಸಂಬಂಧಜ್ಞಾನವೆಂದು ಕರೆಯುವರು. ಅಣುಗಳ ಸಮಿಶ್ರಣ ಪ್ರಮಾಣಗಳಿಂದ ಸಿಹಿಯೂ ಆಗುವದು, ಕಹಿಯೂ ಆಗುವದು. ವಿಜ್ಞಾನವು ಇದನ್ನು ಪ್ರಯೋಗ ಪೂರ್ವಕ ತಿಳಿಸಿಕೊಟ್ಟಿರುತ್ತದೆ. ಆದರೆ ಸ್ವರೂಪ ಜ್ಞಾನವಿಲ್ಲದಿದ್ದರೆ ಈ ಸಂಬಂಧ ಜ್ಞಾನದಿಂದ ಆಗುವ ಪ್ರಗತಿಯು ಅಷ್ಟಕ್ಕಷ್ಟು. ಸ್ವರೂಪ ಜ್ಞಾನಿಗಳಿಗೆ ಸಂಬಂಧ ಜ್ಞಾನದ ಅವಶ್ಯಕತೆಯಿರುವಂತೆ ಸಂಬಂಧ ಜ್ಞಾನಿಗಳಿಗೆ ಸ್ವರೂಪ ಜ್ಞಾನದ ಅವಶ್ಯಕತೆ ಬಹಳ; ಒಂದನ್ನುಳಿದರೆ ಇನ್ನೊಂದಕ್ಕೆ ಮನ್ನಣೆಯೇ ಇರುವಂತಿಲ್ಲ, ಮರ್ಯಾದೆಯಿಲ್ಲ. ಈ ಎರಡು ಬಗೆಯ ಜ್ಞಾನಗಳಲ್ಲಿ ಒಂದಕ್ಕೆ intuitive, ಇನ್ನೊಂದಕ್ಕೆ inductive ಜ್ಞಾನವೆಂದು ಹೆಸರು. ಈ ಎರಡು ಬಗೆಯ ಜ್ಞಾನಗಳ ಸಮನ್ವಯವು ನಿಜವಾದ ಜ್ಞಾನವು. ದೀಪದ ದೀಪ್ತಿಯಂತೆ ಈ ಜ್ಞಾನವು ತನ್ನನ್ನೂ ಇತರ ವಸ್ತು-ಗಳನ್ನೂ ಪ್ರಕಾಶಪಡಿಸುವದು.

'ಪ್ರಕಾಶ' ಎಂದರೆ ವ್ಯವಹಾರಕ್ಕೆ ಬೇಕಾಗುವ ಯೋಗ್ಯತೆ. ಇದನ್ನು ತಾರ್ಕಿಕರು 'ವಿಷಯತೆ' ಎಂದು ಕರೆದರೆ ಮೀಮಾಂಸಕರು 'ಪ್ರಾಕಟ್ಯ' ಎಂದು ಹೆಸರಿಸುವರು. ಜ್ಞಾನಕ್ಕೆ ವಿಚಿತ್ರ ಶಕ್ತಿಯೂ, ವಿಚಿತ್ರ ವೇಗವೂ ಇರುವವು. ಸಾಮಾನ್ಯವಾದ ಸೂರ್ಯ ಪ್ರಭೆ ಸೂರ್ಯೋದಯವಾದ ಕ್ಷಣದಲ್ಲಿಯೇ ಅನಂತ ಕೋಟಿ ಯೋಜನ ವಿಸ್ತೀರ್ಣವಾದ ಪ್ರದೇಶವನ್ನು ಆಕ್ರಮಿಸಿಬಿಡುವದು. ಆದರೆ ವಿಚಿತ್ರ ಶಕ್ತಿಯುಳ್ಳ ಜ್ಞಾನಪ್ರಭೆಯು ಅತ್ಯಂತ ಸೂಕ್ಷ್ಮವಾಗಿ ನಿರತಿಶಯವಾದ ವೇಗವುಳ್ಳದ್ದಾಗಿ ಕ್ಷಣಾರ್ಧದಲ್ಲಿಯೇ ಎಲ್ಲವನ್ನೂ ಅರಿಯುವದು, ಎಲ್ಲವನ್ನೂ ವ್ಯಾಪಿಸುವದು. ಅಂತರ್‌ಬಾಹ್ಯ ವಸ್ತುಗಳನ್ನು ವ್ಯಾಪಿಸಿ ಅವುಗಳಲ್ಲಿ ಸಂಬಂಧವನ್ನು ಬೆಳೆಸುವದು ಈ ಜ್ಞಾನಪ್ರಭೆಯೇ. ಆದರೆ ಈ ಅಂತರ್‌ಬಾಹ್ಯ ವಸ್ತುಗಳ ಸಂಬಂಧವೇ ಪ್ರಕಾಶವು. ಸ್ಥೂಲದಲ್ಲಿ ವಸ್ತು–ವಸ್ತುಗಳಲ್ಲಿ ಬರುವ ಸಂಬಂಧ ಜ್ಞಾನವೂ, ಸೂಕ್ಷ್ಮದಲ್ಲಿ ಘಟನೆ ಘಟನೆಗಳಲ್ಲಿ ಒದಗುವ ಸಂಬಂಧ ಜ್ಞಾನವೂ, ಕಾರಣದಲ್ಲಿ ಭಾವ-ಭಾವಗಳಲ್ಲಿ ಉಂಟಾಗುವ ಸಂಬಂಧ ಜ್ಞಾನವೂ,

ಕೊನೆಗೆ ತುರೀಯದಲ್ಲಿ ತನ್ನ–ಸ್ವರೂಪದಿಂದ ಘಟಿಸುವ ಸಂಬಂಧ ಜ್ಞಾನವೂ ನಮಗೆ ವೇದ್ಯವಾಗುತ್ತವೆ. ಸಂಬಂಧ ಜ್ಞಾನ ಮತ್ತು ಸ್ವರೂಪ ಜ್ಞಾನ ಇವೆರಡೂ ಪರಿಪೂರ್ಣ ಜ್ಞಾನಕ್ಕೆ ಪೀಠಿಕೆಯಾಗಿರುತ್ತವೆ. ಪೂರ್ಣಜ್ಞಾನವನ್ನು ಪಡೆಯು ವದೇ ಜ್ಞಾನಯೋಗಕ್ಕೆ ಗುರಿಯಾಗಿದೆ. ಆದ್ದರಿಂದ ಜ್ಞಾನೋಪಲಬ್ಧಿಯ ಮೆಟ್ಟಲುಗಳಲ್ಲಿ ಜೀವನಿಗೂ ಜ್ಞಾನಕ್ಕೂ ಭೇದ, ಅಭೇದ ಮತ್ತು ಭೇದಾ ಭೇದ— ಎಂಬ ಪಕ್ಷಗಳು ಸಮ್ಮತವಾಗಿರುತ್ತವೆ. ಪುರುಷನು ಸ್ವಭಾವತಃ ಜ್ಞಾನ ಅರಿಯುವವನು ಆಗಿದ್ದಾನೆ. ಹಾಗಿದ್ದರೂ ಆ ಜ್ಞಾನಪ್ರಭೆಗೆ ಆವರಣ ಗಳಿರುವವು; ಈ ಆವರಣಗಳ ಕ್ಷಯದಿಂದ ಸರ್ವಜ್ಞತ್ವವು ಸಿದ್ಧಿಸುವದು. ಪುರುಷ ನಲ್ಲಿ ಜ್ಞಾನವು ಮೊದಲು ಭೇದ ಸ್ಥಿತಿಯಲ್ಲಿ ಅಳವಡುವದು; ಆ ಬಳಿಕ ಅದು ಭೇದಾಭೇದ ಸ್ಥಿತಿಯಲ್ಲಿ ಅವಗತವಾಗುವದು; ಕೊನೆಗೆ ಅದು ಅಭೇದ ಸ್ಥಿತಿ ಯಲ್ಲಿ ಅಂಗವಿಸುವದು. ಇಂತಹ ಪರಿಪೂರ್ಣವಾದ ಜ್ಞಾನಸಿದ್ಧಿ ಅಥವಾ ಇಂತಹ ಜ್ಞಾನಸಂಪಾದನೆಯೇ ಪುರುಷಾರ್ಥವಾಗುವದು.

'ಪುರುಷಾರ್ಥ' ಎಂಬ ಪದವು ಮೊದಲು ಸಾಂಖ್ಯದರ್ಶನದಲ್ಲಿಯೇ ದೊರೆಯುತ್ತದೆ. ಅದು ಉಪನಿಷತ್ತುಗಳಲ್ಲಿ ಕಂಡುಬರುವದಿಲ್ಲ. ಸಾಂಖ್ಯ ದರ್ಶನದಿಂದಲೇ ಅದು ಪುರಾಣಗಳಿಗೆ ಸಾಗಿರಬೇಕು. ಪ್ರಕೃತಿಯೆಂಬ ಮೂಲ ತತ್ವವು ಸ್ವಾರ್ಥಕ್ಕಾಗಿ ಯಾವ ವ್ಯಾಪಾರವನ್ನೂ ಮಾಡುವದಿಲ್ಲ. ಅದು ಪುರುಷಾರ್ಥಕ್ಕಾಗಿ ಮಾತ್ರ ವ್ಯವಹಾರವನ್ನು ಮಾಡುವದು. ಆದ್ದರಿಂದ ಪುರುಷನೆಂಬ ಜೀವಾತ್ಮನೊಬ್ಬ ಇರಬೇಕು, ಸುಖ-ದುಃಖ-ಮೋಹ ಮಯವಾಗಿ-ರುವ ಪ್ರಪಂಚಕ್ಕೆ, ರಥಗಳಿಗೆ ಸಾರಥಿಯಾಗಿರುವಂತೆ, ಅಧಿಷ್ಠಾತೃ ಒಬ್ಬನು ಇರಬೇಕು. ಇಲ್ಲಿ ಪುರುಷನ ಸಾನ್ನಿಧ್ಯವೇ ಅಧಿಷ್ಠಾನವು. ಸುಖ–ದುಃಖ ಗಳನ್ನು ಅನುಕೂಲವಾಗಿಯೂ ಪ್ರತಿಕೂಲವಾಗಿಯೂ ತಿಳಿಯುವವನು ಒಬ್ಬ-ನಿರಬೇಕು. ಸರ್ವವೂ ದೃಶ್ಯವಾಗಿರುವುದರಿಂದ ದೃಷ್ಟಾ ಬೇಕು. ಇಂತಹ ಅಧಿಷ್ಠಾತೃ, ದೃಷ್ಟಾ ಪುರುಷನು. ಪುರುಷನು ಜ್ಞಾತಾ, ಭೋಕ್ತಾ ಆಗಿ ದ್ದಾನೆ. ಆದರೆ ಅವನು ಕರ್ತಾ ಅಲ್ಲ. ಕರ್ತೃತ್ವಶಕ್ತಿಯು ಪ್ರಕೃತಿಯಲ್ಲಿದೆ, ಪುರುಷನಲ್ಲಿ ಅಲ್ಲ; ಅದಕ್ಕೆ ಜ್ಞಾನಚೇತನವನ್ನು ಚಿಂತಿಸುವವನು ಮಾತ್ರ ಪುರುಷ. ಇಂತಹ ಪುರುಷ ಇಲ್ಲವೆ ಜೀವಾತ್ಮನ ಭೋಗಕ್ಕೂ ಮೋಕ್ಷಕ್ಕೂ ದೃಶ್ಯವಾಗಿ ಸಕಲ ವಸ್ತುಗಳೂ ಇರುವವು. ಆದ್ದರಿಂದ ಪ್ರಕೃತಿಯ ವ್ಯವಹಾರ ವೆಲ್ಲ ಪುರುಷನ ಭೋಗಕ್ಕಾಗಿ–ಮೋಕ್ಷಕ್ಕಾಗಿ!

ಈ ಬಗೆಯ ಯಥಾರ್ಥ ತಿಳಿವಳಿಕೆ ಇಲ್ಲದಿರುವುದೇ ಅವಿದ್ಯೆ. ಈ ಅವಿದ್ಯೆಯೇ ಬಂಧನಕ್ಕೆ ಕಾರಣ. ಅವಿದ್ಯೆಯ ಇಲ್ಲವೆ ಅವಿವೇಕದ ಮೂಲಕ ಪ್ರಕೃತಿಪುರುಷ ಸಂಯೋಗವೆಂಬ ಭೋಗವೇ ಬಂಧನವಾಗಿದೆ. ಭೋಗವೆಂದರೆ ಅದೊಂದು ಬಗೆಯ ಪರಿಣಾಮ. ವಿಕಾರ ಹೇತೂದ್ಭೂತವಾದ ಪರಿಣಾಮ ಮತ್ತು ನಿರ್ವಿಕಾರ ಹೇತೂದ್ಭೂತವಾದ ಪರಿಣಾಮ ಎಂದು ಅದು ಎರಡು ವಿಧವಾಗಿದೆ. ಹಾಲಿಗೆ ಹೆಪ್ಪು ಕೊಟ್ಟಾಗ ಮೊಸರಾಗುವದು; ಇಂದು ಒಂದು ಬಗೆಯ ಪರಿಣಾಮ, ವಿಕಾರಹೇತು ಭೂತವಾದ ಪರಿಣಾಮವಿದು. ಹಾಗೆಯೇ ಬಂಗಾರದಿಂದ ಬೇರೆ ಬೇರೆ ಆಭರಣಗಳು ಸಿದ್ಧವಾಗುವವು, ಇಲ್ಲಿಯೂ ಪರಿ-ಣಾಮವನ್ನೇ ಕಾಣಬಲ್ಲೆವು. ಆದರೆ ಇಲ್ಲಿ ಹಾಲಿನ ಮೂಲ ಸ್ವರೂಪಕ್ಕೆ ಬದಲಾವಣೆಯಾದಂತೆ ಬಂಗಾರದ ಮೂಲ ಸ್ವರೂಪದಲ್ಲಿ ಬದಲಾವಣೆಯಿಲ್ಲ; ಆದರೂ ಇಲ್ಲಿ ಒಂದು ಬಗೆಯ ಪರಿಣಾಮವಿರುತ್ತದೆ; ಇದಕ್ಕೆ ನಿರ್ವಿಕಾರ ಹೇತೂದ್ಭವವಾದ ಪರಿಣಾಮವೆಂದು ಹೆಸರು. ನಿರ್ವಿಕಾರತೆಗೆ ಬಾಧಕವಿಲ್ಲ. ಹೀಗೆ ನಿರ್ವಿಕಾರನಾಗಿ ಭೋಗವನ್ನು ಹೊಂದುವದು ಸಾಧ್ಯವಾದದ್ದರಿಂದ ಭೋಗದಿಂದ ಮೋಕ್ಷವನ್ನು ಪಡೆಯುವದೇ ಪುರುಷಾರ್ಥ. ಗತ್ಯಾತ್ಮಕವಾದ ಪ್ರಕೃತಿಯು ಯಂತ್ರವತ್ ಜಡವಾಗಿದೆ; ಅದಕ್ಕೆ ಪಾಪ–ಪುಣ್ಯಗಳ ಕಲ್ಪನೆಯೇ ಇಲ್ಲ. ಯಂತ್ರವು ಚಲಿಸುತ್ತಿರುವಾಗ ಸ್ವಯಂ ಪ್ರಜ್ಞೆಯುಳ್ಳ ಚಿಕ್ಕ ಪ್ರಾಣಿ ಇರಿವೆಯೂ ಬದಿಗೆ ಸರಿಯುತ್ತದೆ. ಪುರುಷನು ಈ ಇರಿವೆಯಂತೆ ಚೇತನನು, ಮತಿ ಪ್ರಕಾಶವುಳ್ಳವನು. ಹೀಗೆ ಚೈತನ್ಯಾತ್ಮಕನಾದ ಪುರುಷನು ಜಡ ಪ್ರಕೃತಿಯಿಂದ ಅಗಲುವುದಕ್ಕೆ, ಅದರ ಕೃತಿ ಪರಿಣಾಮವು ಆಗದಂತೆ ನೋಡಿಕೊಳ್ಳುವುದಕ್ಕೆ ಮೋಕ್ಷ. ಇದುವೆ ತಾನೇ ತಾನಾಗಿರುವ ಶಾಶ್ವತವಾದ ಆನಂದ. ಇದರಿಂದ ಸಾಂಖ್ಯರು ವೇದಾಂತಗಳಂತೆ ತ್ಯಾಗ ವೈರಾಗ್ಯವಂತರೆಂದೆನಿಸದೆ ಭೋಗ ವೈರಾಗ್ಯವಂತರೆಂದು ಖ್ಯಾತವಾಗುವರು.

ಈ ವರೆಗಿನ ವಿವೇಚನೆಯಿಂದ ಸಾಂಖ್ಯಯೋಗವೆಂದರೆ ಪ್ರಕೃತಿಪುರುಷರ ವಿಯೋಗವೆಂದೂ, ಪುರುಷ ಅಥವಾ ಜೀವನು ಜ್ಞಾನ ದರ್ಶನ ಸ್ವರೂಪಿಯಾದ ಚೈತನ್ಯವಸ್ತುವೆಂದೂ ವಿದಿತವಾಗುತ್ತದೆ. ಪುರುಷನು ನಿತ್ಯನು ಸತ್ಯನು. ಪ್ರಕೃತಿಯು ಪರಿವರ್ತನವಾದದ್ದು. ಪ್ರಕೃತಿಯಂತೆ ಅವನು ಜಡನಲ್ಲ; ಅವನು ಜ್ಞಾನಸ್ವರೂಪನು. ಜ್ಞಾನವು ಸ್ವಯಂ ಪ್ರಕಾಶದಿಂದ ಕೂಡಿಕೊಂಡಿರುತ್ತದೆ. ಈ ಪ್ರಕಾಶವು ಕಣ್ಣಿನಲ್ಲಿರುತ್ತದೆ. ಕಣ್ಣಿನ ಮುಖಾಂತರವಾಗಿ ವ್ಯಕ್ತವಾಗುತ್ತದೆ.

ಜಾಗ್ರತ ಅವಸ್ಥೆಯಲ್ಲಿ ಆತ್ಮನು ಕಣ್ಣಿನಲ್ಲಿರುತ್ತಾನೆ. ಕಣ್ಣಿನಲ್ಲಿ ಪುರುಷನ ವಾಸಸ್ಥಾನವಿರುತ್ತದೆ. ಅದಕ್ಕಾಗಿ ಪುರುಷನಿಗೆ 'ಅಕ್ಷಿಪುರುಷ' ಎಂದು ಕರೆಯುವರು. ನೇತ್ರದ್ವಾರಾ ಅಕ್ಷಿಪುರುಷನ ಪ್ರಕಾಶವು ಹೊರಸೂಸುವುದು ಎಂಬುದಕ್ಕೆ ಹಲವಾರು ನಿದರ್ಶನಗಳನ್ನು ಕೊಡಬಹುದು. ಕರಿಯು ಕನ್ನಡಿಯೊಳಡಗುವಂತೆ ಅಪಾರವಾದ ಸೃಷ್ಟಿಯು ಕಣ್ಣಿನಲ್ಲಿ ಅಡಗುತ್ತದೆ. ಸೃಷ್ಟಿಯನ್ನು ಬದಲು ಮಾಡಲು ಪ್ರಯತ್ನಿಸುವದು ಸಾಧ್ಯವೇ ? ಹಾಗೆ ಬದಲಿಸಬೇಕೆಂದು ಬಯಸಿದರೆ ಮಾನವನು ತನ್ನ ದೃಷ್ಟಿಯನ್ನೇ ಬದಲಿಸಿಕೊಳ್ಳಬೇಕು. ಕಣ್ಣಿಗೆ ರುದ್ರಾಕ್ಷಿಯೆಂದು ಹೋಲಿಕೆಯುಂಟು. ಇಲ್ಲಿ ಸಮ್ಯಕ್ ದೃಷ್ಟಿಯೇ (Right angle of vision) ರುದ್ರಾಕ್ಷಿ. ಇಂತಹ ಸಮ್ಯಕ್ ಜ್ಞಾನವನ್ನು, ಯಥಾರ್ಥ ಜ್ಞಾನವನ್ನು ಮಾಡಿಕೊಳ್ಳುವವರೇ ಯೋಗಿಗಳು. ಸಾಹಿತ್ಯದ ಪರಿಭಾಷೆಯಲ್ಲಿ ನುಡಿಯುವದಾದರೆ ಇಡಿಯ ಭಾವನಾಪ್ರಪಂಚವೇ ಕಣ್ಣಿನಲ್ಲಿದೆಯೆನ್ನಬೇಕು. ಬಿಟ್ಟ ಕಣ್ಣು-ಬಿಡುಗಣ್ಣುಗಳುಳ್ಳ ಮೂರ್ತಿಗಳು ಅನಿಮಿಷ ದೃಷ್ಟಿಯ ಕಲೆಯನ್ನು ವ್ಯಕ್ತಗೊಳಿಸುವ ಹಲವಾರು ಮೂರ್ತಿಗಳು, ಮೊಹೆಂಜೊದಾರೊ ಹರಪ್ಪ ಸಂಸ್ಕೃತಿಯಲ್ಲಿ ಇದ್ದವೆಂಬುದು ಗೊತ್ತಾಗಿರುತ್ತದೆ. ಇದೆಲ್ಲ ಸ್ಥೂಲ ಕಣ್ಣಿನ ವಿಷಯ.

ಈ ಚರ್ಮ ಚಕ್ಷುವಿನ ಸಾಮರ್ಥ್ಯಕ್ಕಿಂತ ಮಿಗಿಲಾಗಿ ಪ್ರಾತಿಭ ಚಕ್ಷುವು ಇರುತ್ತದೆ. ಮಿಲ್ಟನ ಕವಿಯು ತನ್ನವೆರಡೂ ಕಣ್ಣುಗಳನ್ನು ಕಳೆದುಕೊಂಡ ತರುವಾಯವೇ ತನ್ನ ಕುರುಡುತನದ ಬಗೆಗೆ ಕವಿತೆಯನ್ನು ಕಲ್ಪಿಸಿದನು. Paradisd Lost ಎಂಬ ಸುಪ್ರಸಿದ್ಧವಾದ ಮಹಾ ಕಾವ್ಯವನ್ನು ಬರೆದನು. Iliad ಎಂಬ ಮಹಾಕಾವ್ಯವನ್ನು ಬರೆದ ಗ್ರೀಕ ಹೋಮರ ಕವಿ ಹುಟ್ಟು-ಗುರುಡ. ಅನುಭಾವಿಯಾದ ಸೂರದಾಸ ಕವಿಯೂ ಹುಟ್ಟಿನಿಂದಲೇ ಕುರುಡನಾಗಿದ್ದನು. ಹುಟ್ಟು ಕುರುಡನಾದ ಧೃತರಾಷ್ಟ್ರನೂ ಭಾರತ ಯುದ್ಧವನ್ನು ಕಾಣುವ ದೃಷ್ಟಿಯನ್ನು ಪಡೆದವನಾಗಿದ್ದನು. ಇದರಿಂದ ಪ್ರಾತಿಭಚಕ್ಷುವು ಇಲ್ಲವೆ ಜ್ಞಾನ ಚಕ್ಷುವು ಅಪಾರ ಸಾಮರ್ಥ್ಯದಿಂದ ಕೂಡಿಕೊಂಡಿದ್ದಾಗಿದೆ ಎಂದು ವ್ಯಕ್ತವಾಗುತ್ತದೆ. ಕವಿ ಕಾಣದ್ದನ್ನು ರವಿ ಎಂದರೆ ಜ್ಞಾನಿ ಕಾಣುವನು ಎಂಬುದು ಸ್ಪಷ್ಟವಾಗುತ್ತದೆ. ಹೀಗೆ ಕಣ್ಣಿನಿಂದ ಕಾಣುವ ಸಾಮರ್ಥ್ಯಕ್ಕೆ 'ಪ್ರಕಾಶ' ಎಂದು ಹೆಸರು. ಈ ಪ್ರಕಾಶವು ಬೇರೆ ಬೇರೆ ವಸ್ತುಗಳಲ್ಲಿ ಅಡಗಿದೆ ಮತ್ತು ಅದು ವಿವಿಧವಾಗಿ ಆಯಾ ವಸ್ತುಗಳಲ್ಲಿ ಪರಿಸ್ಫುಟವಾಗುತ್ತ ಇದೆ ಎಂಬುದನ್ನು 'ಕಡಲೊಳಗೆ, ಕಲ್ಲೊಳಗೆ, ಮರದೊಳಗೆ, ಮಾನವರ ಒಡಲೊಳಗೆ,

ಕಾಮಿಗಳ ಮನದೊಳಗೆ, ಜ್ಞಾನಿಗಳ ನುಡಿಯೊಳಗೆ, ಯೋಗಿಗಳ ಕಣ್ಣೊಳಗೆ ರಾಜಿಪುದು ಜ್ಯೋತಿಲಿಂಗ' ಎಂಬ ಮಾತುಗಳಿಂದ ಅರಿಯಬಹುದು. ಅಗ್ನಿಯ ಪ್ರಕಟತೆಯನ್ನು ಕುರಿತು ಹೇಳಿದ ಮಾತು ಪ್ರಕಾಶದ ಆವಿಷ್ಕಾರದ ಬಗೆಗೂ ಅನ್ವಯಿಸುತ್ತವೆ.

ದೃಷ್ಟಿಯಲ್ಲಿಯೇ ಭಾವನಾ ಪ್ರಪಂಚ, ದೃಷ್ಟಿಯಿಂದಲೇ ಯೋಗಾಭ್ಯಾಸ. ಅಕ್ಷಿಪುರುಷನನ್ನು ಗೆಲ್ಲ ಬಯಸಿದರೆ ನೇತ್ರದಲ್ಲಿಯ ಜ್ಯೋತಿಯಿಂದ, ನೇತ್ರ ಪ್ರಕಾಶದ ಸೂತ್ರವಿಡಿದು ಸಾಧಿಸಿಕೊಳ್ಳಬೇಕು. ನೇತ್ರದ್ವಾರಾ ಪ್ರಕಾಶದ ಅನುಭವವನ್ನು ಪಡೆಯುವುದಕ್ಕೆ ಯೋಗಶಾಸ್ತ್ರದಲ್ಲಿ 'ತಾರಕ ಯೋಗ' ಎಂದು ಹೆಸರು. ತಾರಕ ಎಂದರೆ ನೇತ್ರ, ತಾರಕ ಎಂದರೆ ದಾಟಿಸುವದು ಎಂತಲೂ ಅರ್ಥವಾಗುವದು. ಅದ್ವಯತಾರಕೋಪನಿಷತ್ತಿನಲ್ಲಿ "ಗರ್ಭ ಜನ್ಮಜರಾ-ಮರಣ ಸಂಸಾರ ಮಹದ್ಭಯಾತ್ ಸಂತಾರಯತಿ ತಸ್ಮಾತ್ ತಾರಕಂ" ಎಂದು ತಾರಕದ ಲಕ್ಷಣವನ್ನು ತಿಳಿಸಲಾಗಿದೆ. ಹುಟ್ಟು ಸಾವಿನ ಬಹು ದೊಡ್ಡ ಅಂಜಿಕೆಯಿಂದ ಯಾವುದು ಪಾರುಗೊಳಿಸುವುದೋ ಅದು 'ತಾರಕ'. ಇದನ್ನು ಸಾಧಿಸಿ ಕೊಡಲು 'ತಾರಕ ಯೋಗ'ವು ಒಂದು ಸಾಧನೆ.

ತಾರಕ ಯೋಗದಲ್ಲಿ ಮೂರು ಲಕ್ಷ್ಯಗಳ ಅನುಸಂಧಾನಕ್ಕೆ ಮುಖ್ಯ ಗಮನವನ್ನು ಕೊಡಲಾಗುವದು. (ತ್ರಿಷು ಲಕ್ಷ್ಯೇಷು ಯೋ ಬ್ರಹ್ಮ ಸಾಕ್ಷಾತ್ಕರಂ ಗಮಿಷ್ಯತಿ). ಬಹಿರ್ಲಕ್ಷ್ಯ, ಮಧ್ಯಲಕ್ಷ್ಯ, ಮತ್ತು ಅಂತರ್ಲಕ್ಷ್ಯ ಎಂದು ಲಕ್ಷ್ಯವು ಮೂರು ವಿಧವಾಗಿರುತ್ತದೆ. ಆದರೆ ಬಹಿರ್‌ಲಕ್ಷ್ಯ (Outward) ಅಂತರ್‌ಲಕ್ಷ್ಯ (Inward) ಮತ್ತು ಊರ್ಧ್ವಲಕ್ಷ್ಯ, (Upward) ಎಂಬ ವರ್ಗೀಕರಣವು ಉಚಿತವಾಗಿರುತ್ತದೆ. ಈ ಮೂರೂ ಲಕ್ಷ್ಯಗಳಿಗೆ ಅನುಸಾರವಾಗಿ ಮೂರು ಮುದ್ರೆಗಳುಂಟು. ಬಹಿರ್ಲಕ್ಷ್ಯಾನುಸಂಧಾನಕ್ಕೆ ಎಂದರೆ ಅನಿಮಿಷ ದೃಷ್ಟಿಯ ಅನುಸಂಧಾನಕ್ಕೆ ಶಾಂಭವೀ ಮುದ್ರೆಯೆಂದು ಹೆಸರು. ನವದ್ವಾರ-ಗಳನ್ನು ಬಂಧಿಸಿದ ಷಣ್ಮುಖೀ ಮುದ್ರೆಯು ಅಂತರ್ಲಕ್ಷ್ಯಾನುಸಂಧಾನಕ್ಕೆ ಸಂಬಂಧಪಟ್ಟಿರುತ್ತದೆ. ಹಾಗೆಯೇ ಊರ್ಧ್ವಲಕ್ಷ್ಯಾನು ಸಂಧಾನಕ್ಕೆ ಖೇಚರೀ ಮುದ್ರೆಯು ಅವಶ್ಯವಾಗಿರುತ್ತದೆ. ಒಂದೊಂದು ಪ್ರಕಾರದ ಮುದ್ರೆಯಿಂದ ಒಂದೊಂದು ಚಕ್ರದೊಳಡಗಿದ ಶಕ್ತಿಯು ಜಾಗ್ರತವಾಗುವದು.

ಸಮದೃಷ್ಟಿರ್ ಬ್ರಹ್ಮಚಕ್ರಂ ಊರ್ಧ್ವದೃಷ್ಟಿಃ ಶಿಖಾಮಯಂ ।
ಪಶ್ಚಿಮಂ ನೇತ್ರಮೂಲಾಂತಂ ಚಕ್ರತ್ರಯಮಿದಂ ಶೃಣು ॥

ಕಣ್ಣೆದುರಿಗಿನ ವಸ್ತುಗಳನ್ನು ನೋಡುವುದಕ್ಕೆ ಸಮ ದೃಷ್ಟಿಯುನ್ನು ಇಟ್ಟುದಾದರೆ ಆ ನೋಟವು ಒಳಗೊಳಗೆ ಆಜ್ಞಾಚಕ್ರವನ್ನು (Anterior or frontal lobe in the brain) ವ್ಯಾಪಿಸುತ್ತದೆ. ಅನಿಮಿಷ ದೃಷ್ಟಿಯಿಂದ ಇಲ್ಲವೆ ಬಹಿರ್ಲಕ್ಷ್ಯಾನುಸಂಧಾನದಿಂದ ಭ್ರೂಮಧ್ಯದಲ್ಲಿಯ ಸ್ಪಟಿಕ ವರ್ಣದ ಜ್ಯೋತಿಯು ಪ್ರಕಟವಾಗುವದು. ವೀರಶೈವರಲ್ಲಿ ಇಷ್ಟಲಿಂಗಾನುಸಂಧಾನ ಕ್ರಮವನ್ನು ಇದು ವ್ಯಕ್ತಗೊಳಿಸುವದು. ಈ ವಿಷಯದಲ್ಲಿ ಪ್ರಭುದೇವರು ಹೇಳಿದ ಮಾತುಗಳಿವು :

ಶೃತಿಯ ನಂಬದಿರೊ ಶೃತಿಯ ನಂಬದಿರೊ, ಶೃತಿಯ ನಂಬದಿರೊ ।
ಶೃತಿಗಳು ಮುನ್ನವೆ ಶಿವನ ಕಾಣದೆ, ಶೃತಿ 'ಚಕಿತಮಭಿಧತ್ತೆ' ಎನ್ನುತ್ತ
ಮುನ್ನವೇ ಅರಸಿ ಬಳಲುತ್ತೈದಾವೆ ।
ಶೃತಿ ಹೇಳಿದಂತೆ ಹರಿಯದಿರು, ಬಳಲದಿರೊ ।
ಶೂನ್ಯಕ್ಕೆ ತಲೆವಾರ ನಿಕ್ಕದಿರೊ.
ವಸ್ತು ಹೃದಯದಲುಂಟೆಂದು ನೆನೆಯದಿರೊ,
ವಸ್ತು ಭ್ರೂಮಧ್ಯದಲ್ಲುಂಟೆಂದು ಭ್ರಮಿಸದಿರೊ,
ವಸ್ತು ಬ್ರಹ್ಮರಂಧ್ರದಲ್ಲುಂಟೆಂದು ಹೊಲಬುಗೆಡದಿರೊ.
ವಸ್ತು ನಿಶ್ಚಯವ ಕಾಂಬಡೆ,
ಎನ್ನ ಸದ್ಗುರು ಅನಿಮಿಷ ದೇವರಂತೆ
ನಿನ್ನ ಕರಸ್ಥಲದಲ್ಲಿ ನಿಶ್ಚಯಿಸಿ ಕಂಡು
ನಮ್ಮ ಗುಹೇಶ್ವರ ಲಿಂಗದಲ್ಲಿ ನಿಬ್ಬೆರಗಾಗೊ, ಮರುಳೇ ।

ಪರವಸ್ತುವನ್ನರಸುವ ಪ್ರಯತ್ನದಲ್ಲಿ ಸಾಧಕರು ಬಹಳ ತೊಳಲುತ್ತಾರೆ. ಒಮ್ಮೆ ವೇದೋಪನಿಷತ್ತುಗಳ ಅಭ್ಯಾಸದಿಂದ ಅವನ್ನು ಸಾಧಿಸಬಹುದೆ ? ಎಂದರೆ ಅದು ಸಾಧ್ಯವಿಲ್ಲ. ಬೌದ್ಧರಂತೆ ಶೂನ್ಯಕ್ಕೆ ಮಾರುಹೋಗುವದರಿಂದಾಗಲಿ ಅದು ಶಕ್ಯವಿಲ್ಲ. ಹಾಗೆಯೇ ಭಕ್ತಿ ಜ್ಞಾನ ವೈರಾಗ್ಯದಿಂದ ಹೃದಯದ ಅನಾಹತಚಕ್ರದಲ್ಲಾಗಲಿ ಭ್ರೂಮಧ್ಯದ ಆಜ್ಞಾಚಕ್ರದಲ್ಲಾಗಲಿ ಇಲ್ಲವೆ

ಬ್ರಹ್ಮರಂಧ್ರದ ಸಹಸ್ರಾರ ಚಕ್ರದಲ್ಲಾಗಲಿ ಅದನ್ನು ಕಾಣಬಯಸಿದರೆ ಸುಮ್ಮನೆ ಹಂಬಲು–ಹರಿದಾಟ, ಭ್ರಾಂತಿ–ಭ್ರಮೆ, ದುಗುಡ–ದುಮ್ಮಾನಗಳಿಗೆ ಎಡೆಯಾಗ ಬೇಕಾಗುವದು. ಆದ್ದರಿಂದ ಆ ಪರವಸ್ತುವನ್ನು ಅರಿತು ಅಂಗವಿಸಿಕೊಳ್ಳಲು ಕರದ ಇಷ್ಟ ಲಿಂಗದಲ್ಲಿಯೆ ನೆಟ್ಟನೆ ನೆಟ್ಟ ದೃಷ್ಟಿಯನ್ನು ಪಡೆಯುವದು ಬಹಳ ಸುಲಭ ಹಾದಿಯಾಗಿದೆ. ಅನಿಮಿಷಯ್ಯನವರ ಚಾರಿತ್ರ್ಯವೆ ಇದಕ್ಕೆ ಕುರುಹು ಎಂದು ಅಲ್ಲಮ ಪ್ರಭುದೇವರ ಅನುಭವದ ನಿಲವು.

ನವದ್ವಾರಗಳನ್ನು ಬಂಧಿಸಿ ನೋಟವು ಅಂತರ್‌ಮುಖಿಯಾದರೆ ಅದು ಪಶ್ಚಿಮ ಚಕ್ರವನ್ನು ವ್ಯಾಪಿಸುತ್ತದೆ. ಶಾಂಭವೀಮುದ್ರೆಯು ಮೆದುಳಿನ ಮುಂಭಾಗದಲ್ಲಿದ್ದ ಶಕ್ತಿಯನ್ನು ಜಾಗ್ರತಗೊಳಿಸಿದರೆ ಷಣ್ಮುಖೀ ಮುದ್ರೆಯು ತಲೆಯ ಹಿಂಭಾಗದಲ್ಲಿದ್ದ (Posterior lobe in the brain) ಶಕ್ತಿಯನ್ನು ಜಾಗ್ರತಗೊಳಿಸುವದು. ಷಣ್ಮುಖೀ ಮುದ್ರೆಯನ್ನು ವಿವರಿಸುವ ಹಡವದ ಅಪ್ಪಣ್ಣಗಳ ಪುಣ್ಯಾಂಗನೆ ಲಿಂಗಮ್ಮನ ಒಂದು ವಚನವು ಇಂತಿದೆ :

ಒಂದು ಹುತ್ತಕ್ಕೆ ಒಂಬತ್ತು ಬಾಗಿಲ,
ಒಂದು ಸರ್ಪ ಆ ಒಂಬತ್ತು ಬಾಗಿಲಲ್ಲಿ ನೋಡುತಿರ್ಪುದು.
ಒಂಬತ್ತು ಬಾಗಿಲಿಗೆ ಕದವನಿಕ್ಕಿ ಬಲಿಯಲು
ತಿರುಗುವದಕ್ಕೆ ತಾವ ಕಾಣದೆ, ಇರುವುದಕ್ಕೆ ಇಂಬುಗಾಣದೆ,
ನಿಲುವುದಕ್ಕೆ ಎಡೆಯ ಕಾಣದೆ, ಉರಿ ಊರ್ಧ್ವಕ್ಕೇರಲು ಶರಧಿ ಬತ್ತಿತ್ತು.
ಮುಂದೆ ದಿಟ್ಟಿಸಿ ನೋಡುವನ್ನಕ್ಕ ಇಟ್ಟೆಡೆಯ ಬಾಗಿಲು ಸಿಕ್ಕಿತ್ತು.
ಅದ ಹೊಕ್ಕು ಹೊಡಕರಿಸಿ ಪಶ್ಚಿಮ ಕದವ ತೆಗೆದು
ಬಟ್ಟಬಯಲಲ್ಲಿ ನಿಂದು ತಾನೆತ್ತ ಹೋದೆನೆಂದರಿಯೆ
ಅಪ್ಪಣ್ಣ ಪ್ರಿಯ ಚನ್ನಬಸವಣ್ಣ.

ನವದ್ವಾರ ಯುಕ್ತವಾದ ದೇಹವೆಂಬುದೊಂದು ಹುತ್ತ. ಕುಂಡಲಿನೀ ಶಕ್ತಿಯು ಅಧೋಮುಖಿಯಾಗಿ ಅಲ್ಲಿ ದ್ವಾರ–ದ್ವಾರಗಳಲ್ಲಿ ತಲೆಹಾಕಿ ನೋಡುತ್ತಿದೆ. ಆ ದ್ವಾರಗಳನ್ನೇ ಮುದ್ರಿಸಿದರೆ ಆ ಕುಂಡಲಿನೀ ಶಕ್ತಿಯು ಕಾಣಿಸಿಕೊಳ್ಳಬೇಕೆಲ್ಲಿ ? ಅದಕ್ಕೆ ಸ್ಥಾನವೇ ಸಿಗದಿದ್ದುದರಿಂದ ಮಾರ್ಪಾಟವನ್ನು ಹೊಂದಿ ಜ್ಞಾನಮಯ ವೆನಿಸಿ ಅದು ಶಿರೋಮಧ್ಯದಲ್ಲಿರುವ ಪಶ್ಚಿಮ ಸಿಂಹಾಸನವನ್ನು ಸೇರುವದು. ಇಂತಾಗಲು ವಿಷಯ ರಸ ತುಂಬಿದ ಸಂಸಾರಸಾಗರ ಬತ್ತಿ ಹೋಗುವದು.

ಎಂದರೆ ವಿಷಯ ವಾಸನೆಯೆಲ್ಲ ನಷ್ಟವಾಗುವದು. ಆ ಪಶ್ಚಿಮ ಚಕ್ರದ ದ್ವಾರವು ಸೂಕ್ಷ್ಮನಾಡಿಯ ಎರಡು ಮುಖಗಳಿಂದ ಸಾಧ್ಯವಾಗಲು ನಿರ್ವಯಲ ಸಮಾಧಿಯು ನಿಲುಕುವದು ಎಂಬುದು ಲಿಂಗಮ್ಮನ ಅನುಭಾವ. ಇಲ್ಲಿ ಕುಲಕುಂಡಲಿನಿಯ ಯೋಗವು ನಿರೂಪಿತವಾಗಿದೆ. ಈ ಯೋಗದಿಂದ ನಿಲುಕುವ ದ್ವಿವಿಧ ಶಕ್ತಿಗಳೇ ಸುಷುಮ್ನಾನಾಡಿಯ ಎರಡು ಮುಖಗಳು ಎಂಬ ಅಭಿಪ್ರಾಯ.

ಎರಡೂ ನೇತ್ರಗಳನ್ನು ಒಂದುಗೂಡಿಸಿ ಮೇಲಕ್ಕೆ ದೃಷ್ಟಿ ಇಟ್ಟದಾದರೆ ಎಂದರೆ ಊರ್ಧ್ವದೃಷ್ಟಿಯನ್ನು ಪಡೆದುದಾದರೆ ಬ್ರಹ್ಮರಂಧ್ರದಲ್ಲಿದ್ದ ಶಿಖಾ ಚಕ್ರವು ಜಾಗ್ರತವಾಗುವದು. ಅರ್ಥಾತ್ ನೆತ್ತಿಯಲ್ಲಿದ್ದ ಪೀನಿಯಲ್ ಗ್ರಂಥಿಯನ್ನು (Penial gland) ಅದು ಜಾಗ್ರತಗೊಳಿಸುವದು. ಹೀಗೆ ದೃಷ್ಟಿಯ ಮೇಲು ಮುಖವನ್ನು ಸಾಧಿಸುವುದಕ್ಕೆ ಖೇಚರೀ ಮುದ್ರಾ ಸಾಧನೆ ಎಂದು ಹೇಳುವರು. 'ಖ' ಎಂದರೆ ಆಕಾಶ; ಆದ್ದರಿಂದ 'ಖೇಚರ' ಎಂದರೆ ಆಕಾಶದಲ್ಲಿ ಸಂಚರಿಸುವ ಜೀವ ಹಂಸ, ಅಥವಾ ಮನವೆಂಬ ಗಿಳಿ. ಯೋಗಶಾಸ್ತ್ರದಲ್ಲಿ ಜೀವ ಹಂಸವೆಂದೂ, ಗಿಳಿಯೆಂದೂ ಮನವನ್ನು ಕರೆಯುವರು. ಶ್ರೀ ನಿಜಗುಣ ಶಿವಯೋಗಿಗಳು ಮನವನ್ನು ಒಂದು ಗಿಳಿಗೆ ಹೋಲಿಸಿ ಬಹಳ ಅನುಭವವನ್ನು ತುಂಬಿದ್ದಾರೆ ತಮ್ಮ ಒಂದು ಪದದಲ್ಲಿ :

ಮನವೆಂಬ ಗಿಳಿಯನೊಯ್ಯಾರದೊಳೋವಿ ಮೆ ।
ಲ್ಲನೆ ಮುದ್ದು ನುಡಿಗಲಿಸೆಲೆ ಮಾನಿನೀ ॥ ಪ ॥

ಆರು ಜಾಳಂದರವೆಸೆವಾಜ್ಞೇಯ ಮಿಂ ।
ಚೇರಿದ ರನ್ನ ಪಂಜರದೊಳಗೆ ॥
ಮೂರು ವರ್ಣದ ಕೋಲಿನ ಮೇಲಿರಿಸಿ ಕಾಲ್ಗೆ ।
ವಾರದಂತಸು ಸರಪಣಿಯ ಹೂಡಿ ॥ ೧ ॥

ನಯನವಟ್ಟಲೊಳು ಚಿನ್ಮಯದಿನಿಗೆನೆಯೂಡಿ ।
ಸ್ವಯ ಸುನಾದದ ತಣಿವಣ್ಣನಿತ್ತು ॥
ಭಯವೀವ ರಿಪುವೆಂಬ ಚೀಲಿಯನೆಬ್ಬಟ್ಟಿ ।
ಪ್ರಿಯದಿ ಪೈದಡವಿ ಭಾವದ ಕೈಯೊಳು ॥ ೨ ॥

ನಾಮವಿದೂರ ನಿಸ್ಸೀಮ ನಿತ್ಯಾನಂದ ।
ಧಾಮ ಬೋಧಾದ್ವಯಾನಂತರೂಪ ॥
ನೇಮರಹಿತ ಶಂಭುಲಿಂಗವೆನಿಸುವಾತ್ಮಾ ।
ರಾಮನೆ ಶಿವ ಶಿವ ಎಂದೋದಿಸಿ ॥ ೩ ॥

ಗಿಳಿಯ ಮಾತು ಉಣಿಸು ಪಂಜರ ಮುದ್ದುಮಾತು ಕಲಿಸುವ ರೀತಿ ಇವನ್ನೆಲ್ಲ ನೆನಿಸಿಕೊಂಡಾಗ ಮನವೆಂಬ ಗಿಳಿಯ ವರ್ತನೆಯ ಬಗೆಗೆ ಜ್ಞಾಪಕವಾಗುವದು. ಆಜ್ಞಾ ಚಕ್ರದ ಮನೆಯೇ, ಭ್ರುಕುಟಿ ಮಧ್ಯವೇ ಇದಕ್ಕೊಂದು ರತ್ನಪಂಜರ, ಮನೋಹರವಾದ ಪಂಜರ. ಅದು ಕೂಡ್ರುವದು ಬಿಳಿ ಕೆಂಪು ಕರಿ ಬಣ್ಣದಿಂದ ಕೂಡಿದ ಸತ್ವ–ರಜ–ತಮವೆಂಬ ತ್ರಿಗುಣ ಕುಂಬಿಯ ಮೇಲೆ. ಅದು ಹಾರಿ ಹೋಗ ಕೂಡದೆಂದು ಪ್ರಾಣವೆಂಬ ಸರವಣಿಯನ್ನದಕ್ಕೆ ತೊಡಕಿಸಿದೆ. ದೃಷ್ಟಿಯೆಂಬ ಬಟ್ಟಲಲ್ಲಿ ಜ್ಞಾನವೆಂಬ ಮಧುರ ರಸವನೆ ನೀಡಿ, ಚಿನ್ನಾದವೆಂಬ ಸಿಹಿ ಹಣ್ಣನಿತ್ತು, ಅಂಜಿಕೆಯನ್ನೊಡುವ ಅರಿಷಡ್ವರ್ಗವೆಂಬ ಬೆಕ್ಕುಗಳ ಧ್ವನಿಯನ್ನು ಓಡಿಸಿ ಭಾವವೆಂಬ ಹಸ್ತದಿಂದ ಅದನ್ನು ಮುಂಡಾಡಬೇಕು. ನಾಮರೂಪ ಕ್ರಿಯೆಗಳಿಗೆ ಮೀರಿದ ನಿಸ್ಸೀಮ ನಿತ್ಯ ಆನಂದಕ್ಕೆ ಆಶ್ರಯನಾದ 'ಪರಮಾತ್ಮನೇ ಶಿವನೇ ಶಿವನೇ' ಎಂದು ಅದಕ್ಕೆ ಮಾತ ಕಲಿಸಬೇಕು. ಶಿವಯೋಗಿಗಳ ಈ ರೂಪಕದಲ್ಲಿ ಮನಸ್ಸು ಮಾರ್ಪಾಟಾಗುವ ವಿಧಾನವನ್ನೂ ತಿಳಿಸಲಾಗಿದೆ. ಶಂಕರಾನಂದರೆಂಬ ಈಚೆಗಿನ ಅನುಭಾವಿಗಳೊಬ್ಬರು ಜೀವಹಂಸನ ಬಗೆಗೆ ಬಹಳ ಅರ್ಥಗರ್ಭಿತವಾದ ಮಾತುಗಳನ್ನು ಹೇಳಿರುವರು :

ಸ್ಥಿರಮುಕ್ತಿ ಸಂಪದಕೆ । ಶ್ರೀ ಗುರು ಕೊಟ್ಟ
ಎರಡಕ್ಷರಗಳೆ ಸಾಕು ॥
ನಿಶ್ಚಲನಾಗಿ ಕುಳಿತು । ಕಂಗಳು ಅರೆ
ಮುಚ್ಚಿದುನ್ನತ ಖೇಚರಿ ॥
ಮಿಂಚಿನೊಳ್ ಮನಸಿನ । ಚಂಚಲವಡಗಿಸಿ ।
ಸಂಚಿತ ಕಳೆದು ನಿಶ್ಚಿಂತನಾಗಿರುವಂಥ ॥ ೧ ॥

ಅಕ್ಷರವೆರಡರಿತು । ಆಡುವ ಹಂಸ
ಪಕ್ಷಿಯ ಕಾಲ್ಮುರಿದು ।

ಲಕ್ಷವು ಚದರದೆ । ಈಕ್ಷಿಸಲಾಕ್ಷಣ ।
ನಕ್ಷತ್ರ ಮಳೆ ತನ್ನ ಕುಕ್ಷಿಯೊಳ್ ಸುರಿವಂಥ || ೨ ||

ಮಂತ್ರಯೋಗದ ಅನುಸಂಧಾನದ ರಹಸ್ಯವೀ ಪದ್ಯದಲ್ಲಿ ಅಡಗಿರುತ್ತದೆ. ಖೇಚರೀ ಮುದ್ರೆ ಸಾಧಿಸುವದರಿಂದ ಒದಗುವ ಅನುಭವವೂ ಇಲ್ಲಿ ನಿರೂಪಿತ ವಾಗಿರುತ್ತದೆ. ' ಹಂಸಂ ' ಮಂತ್ರ, ಅದರ ಅವಯವಗಳ ಸ್ಥಾನ ಪಲ್ಲಟಗೊಳಿಸಿ ಕೊನೆಯ ಅವಯವ (ಕಾಲು) ಗಳೆರಡನ್ನು ತೆಗೆದೊಗೆಯುವದರಿಂದ ರೂಪಿಸುವ ' ಓಂ ' ಕಾರ ಮಂತ್ರದ ಅನುಸಂಧಾನವು ಮಿಗಿಲಾದುದು. ಇದರ ಅನುಸಂಧಾನದ ಕೊನೆಯಲ್ಲಿ ಹಂತದಲ್ಲಿ ಲಭಿಸುವ ಆತ್ಮನು ಪರಮ ಪ್ರಕಾಶರೂಪನು ಎಂಬ ಅನುಭವ ಪ್ರತೀತಿಯು ನಾದದಿಂದ ಬಿಂದು ಕಳೆಗಳೂ ಸಾಧ್ಯವೆಂಬ ಮಾತನ್ನೂ ವ್ಯಕ್ತಗೊಳಿಸುತ್ತದೆ. ಖೇಚರೀ ಮುದ್ರೆಯಿಂದ ಮನವನ್ನು ಉನ್ನತಗೊಳಿಸುವ ಒಂದು ಹದವೂ ಇಲ್ಲಿ ಗೊತ್ತಾಗುತ್ತದೆ.

ಅನೇಕ ಸಾರೆ ಈ ಮನವನ್ನು ಮರ್ಕಟನಿಗೂ ಹೋಲಿಸುವದುಂಟು. ಈ ಮರ್ಕಟದ, ಮಂಗದ ಹರಿದಾಟವನ್ನು ನಿಲ್ಲಿಸುವ ಇಲ್ಲವೆ ಅದನ್ನು ಶಾಂತ ಗೊಳಿಸುವ ವಿಧಾನವನ್ನು ಕುರಿತು ಅಲ್ಲಮ ಪ್ರಭುದೇವರ ಹಾಡಿದ ವಚನವಿದು :

ಅಂಗದ ಕೊನೆಯ ಮೇಲಣ ಕೋಡಗ ಕೊಂಬಿಗೆ ಹಾರಿತ್ತು.
ಅಯ್ಯಾ ಒಂದು ಸೋಜಿಗ !
ಕೈಯ್ಯ ನೀಡಲು ಮೈಯೆಲ್ಲವ ನುಂಗಿತ್ತು.
ಒಯ್ಯನೆ ಕರೆದಡೆ ಮುಂದೆ ನಿಂದಿತ್ತು.
ಮೈಯಾಂತಡೆ ಬಯಲಾಯಿತ್ತು, ಗುಹೇಶ್ವರಾ.

ಎಂದು ಮನಸ್ಸಿನ ಚಿತ್ರವನ್ನು ಅವರು ಕೊಟ್ಟಿರುವರು.

ದೇಹವೆಂಬ ವೃಕ್ಷದ ಮೇಲಿರುವ ಮನವೆಂಬ ಮರ್ಕಟವು ರೆಂಬೆಯಿಂದ ರೆಂಬೆಗೆ, ಕೊಂಬೆಯಿಂದ ಕೊಂಬೆಗೆ ಯಾವಾಗಲೂ ಹಾರುತ್ತ ಜಿಗಿಯುತ್ತ ಸಾಗಿರುತ್ತದೆ. ಮನಸ್ಸಿನ ಈ ಹಾರಾಟ ಜಿಗಿದಾಟವನ್ನು, ಈ ಮಂಗಚೇಷ್ಟೆಯನ್ನು ತಡೆಯುವದೆಂತು ? ಇಲ್ಲಿ ಮನಸ್ಸು ಒಂದು ಸ್ವತಂತ್ರವಾದ ವಸ್ತುವಲ್ಲ ಎಂಬುದನ್ನು ಪ್ರಾರಂಭದಲ್ಲಿ ನೆನಪಿನಲ್ಲಿಟ್ಟಿರಬೇಕು. ಅದೊಂದು ಮಿಶ್ರಣ. ಈ ಮನವೆಂಬ ಮಿಶ್ರಣವನ್ನು ವಿಶ್ಲೇಷಣಗೈದರೆ, ಅದು ಆತ್ಮ ಮತ್ತು ವಾಯು

ಇವೆರಡರಿಂದಾಗಿದೆ ಎಂಬುದು ವಿದಿತವಾಗುತ್ತದೆ. ಆತ್ಮವು ನಿಜವಾಗಿ ಅಚಲವಾಗಿದೆ. ತಾನು ಎಂಬ ಅರಿವೇ ಆತ್ಮ. 'ತನ್ನ' ಅರಿವು ಆಗದೆ ಉಳಿದ ಪದಾರ್ಥಗಳ ಅರಿವು ಆಗದು. ಆ ಅರಿವು ತ್ರಿಕಾಲಾಬಾಧಿತವಾಗಿರುವದು. ಆದರೆ ವಾಯುವಿನ ಗುಣ ಸಂಚಲನ, ಚಂಚಲವೃತ್ತಿ. ಈ ಚಂಚಲವೃತ್ತಿಯು ವಾಯುವಿನ ಗುಣವೇ ಹೊರತು ಆತ್ಮನ ಧರ್ಮವಲ್ಲ. ಮನಸ್ಸೆಂಬ ಪದಾರ್ಥದಲ್ಲಿ ಚಂಚಲವಾದ ವಾಯುವು ನಿಶ್ಚಲವಾದ ಆತ್ಮನೂ ಅಥವಾ ಅರಿವೂ ಬೆರೆತುಕೊಂಡಿವೆ. ಇವನ್ನು ಬೇರ್ಪಡಿಸಿ ಒಂದನ್ನು ಬಿಟ್ಟು ಇನ್ನೊಂದನ್ನು ಹಿಡಿಯುವದೇ ಸಾಧನ.

ಆರಂಭದಲ್ಲಿ ಸಾಧಕರಿಗೆ ಮನಸ್ಸಿನ ಚಂಚಲತ್ವವನ್ನು ನಿಲ್ಲಿಸುವದು ಸಾಧಿಸುವದಿಲ್ಲ. ಅವರು ಜಪ ತಪ ಧ್ಯಾನ ಪೂಜೆಗಳಿಗಾಗಿ ಕುಳಿತುಕೊಂಡೊಡನೆಯೇ ಆ ಮನಸ್ಸಿನಲ್ಲಿ ತರತರದ ತರಂಗಗಳು ಏಳುವವು. ಆ ತರಂಗಗಳೊಡನೆ ಹೋರಾಡಿ ಅವನ್ನು ಸ್ಥಿಮಿತಗೊಳಿಸಬೇಕೆಂಬ ಉದ್ದೇಶದಿಂದ ಸಾಧಕನು ತೊಳಲುವನು, ಬಳಲುವನು. ಹೀಗೆ ಶ್ರಮಿಸಿದರೆ ಮಂಗನಿಗೆ ಕೈನೀಡಿದಂತೆಯೇ ! ಕೈನೀಡಿದರೆ ಅದು ಮೈಯೆಲ್ಲವನ್ನೂ ನೆಳೆದು ನುಂಗಿ ನೀರು ಕುಡಿಯುವದು. ವಿಕಾರಗಳೊಡನೆ ಹೋರಾಡಿ ಅವನ್ನು ಜಯಿಸುವದು ಸಾಧ್ಯವಿಲ್ಲ. ಮನಸ್ಸಿನಲ್ಲಿ ಬುದ್ಬುದಾಕಾರವಾಗಿ ಏಳುವ ವಿಕಾರಗಳನ್ನು ಉದಾಸೀನ ವೃತ್ತಿಯಿಂದ ಕಡೆಗಣಿಸಿ ಧ್ಯಾನ ವಸ್ತುವಿನಲ್ಲಿಯೇ ಹೆಚ್ಚು ಲಕ್ಷ್ಯವನ್ನು ಇರಿಸಲು ಪ್ರಯತ್ನಿಸಬೇಕು. ಹೀಗೆ ಪ್ರಯತ್ನಿಸುವುದೆಂದರೆ ಆ ಮಂಗವನ್ನು ನಿಧಾನವಾಗಿ ಕರೆಯುವ ವಿಧಾನವು. ಆ ಬಳಿಕ ಅದರ ವಿಶ್ಲೇಷಣೆಗೈದರೆ, ಅದರ ಹಸುಗೆಯನ್ನು ಸಾಧಿಸಿದರೆ ಅದು ಬಯಲಾಗುವದು. ಮನಸ್ಸಿನ ಈ ಚಾಂಚಲ್ಯ ವೃತ್ತಿಯು ಗಾಢನಿದ್ರೆಯಲ್ಲಿಲ್ಲ, ಜಾಗರದಲ್ಲಿ ಉಂಟು. ಇದರ ಗೂಢವೇನು ? ಗಾಢನಿದ್ರೆಯಲ್ಲಿ ಮನಸ್ಸಿನ ವೃತ್ತಿಗಳು ಲಯವಾಗುವವು. ಅದೇ ಜಾಗರದಲ್ಲಿ ಅವಕ್ಕೆ ವಿಶೇಷವಾದ ಚೇಷ್ಟೆ. ಮನಸ್ಸಿನಲ್ಲಿ ವಾಯು ತತ್ವವು ಸೇರಿಕೊಂಡಿರುವದೇ ಈ ಚೇಷ್ಟೆಗೆ ಕಾರಣ. ವಿಶ್ಲೇಷಣದಲ್ಲಿ ವಾಯುತತ್ವವು ಅಳಿಯುವದು, ಅರಿವು ಉಳಿಯುವದು. ಇದುವೆ ಶೇಷ. ವಾಯುತತ್ವದ ಅಳಿವೇ ಶೂನ್ಯ-ಸಂಪಾದನೆ. ಮನವು ಶೂನ್ಯವಾದ ಹೊರತು ಜ್ಞಾನೋದಯವಿಲ್ಲ. ಇದಕ್ಕೆ ಮನೋಲಯಯೋಗ, ಅಮನಸ್ಕಯೋಗ ಎಂದು ಹೆಸರು.

ಮೇಲೆ ವಿವರಿಸಿದ ಶಾಂಭವೀ ಮುದ್ರೆ ಷಣ್ಮುಖೀ ಮುದ್ರೆ ಮತ್ತು ಖೇಚರೀ ಮುದ್ರೆ ಎಂಬ ಮೂರು ಮುದ್ರೆಗಳಿಂದ ಒದಗುವ ಪರಿಣಾಮದ ಹಸನಾದ ವಿವರಣೆಯನ್ನು ಶ್ರೀ ನಿಜಗುಣ ಶಿವಯೋಗಿಗಳು ಒಂದು ಪದ್ಯದಲ್ಲಿ ಸಂಕ್ಷಿಪ್ತವಾಗಿ ಸಮಾವೇಶಗೊಳಿಸಿದ್ದಾರೆ:

ತಾರಕತ್ರಯದ ವಿಚಾರವೆಲ್ಲರನು ಸಂ।
ಸಾರ ಸಾಗರವನ್ನುತ್ತರಿಸದಿಹುದೆ ॥ ಪ ॥

ಭೂತಪಂಚಕದ ಪಂಚೀಕರಣದಿಂ ಪುಟ್ಟಿ।
ದಾ ತತ್ವ ಪಂಚವಿಂಶತಿಯವನರಿದು ॥
ನೇತಿಗಳೆದು ನಿಜಪದವೆ ತಾನೆಂಬ ಪು।
ನೀತ ಭಾವನೆಯ ಸಾಂಖ್ಯವಿದು ಪೂರ್ವತಾರೆ ॥ ೧ ॥

ಧರಣಿಯ ತಾಣವೆರಡರೊಳು ಶಿಖಿಯ ಮಂ।
ದಿರಯುಗದೊಳು ನಭದೆಡೆಯುಗಳದೊಳು ॥
ಕರ ಶಾಖೆ ಋತುಗೂಡಿ ಬಲಿದು ನೋಡುತ ಕೇಳು।
ತಿರೆ ಮಧ್ಯತಾರೆ ತಾನಿದು ಬಾಹ್ಯಮುದ್ರೆ ॥ ೨ ॥

ಪೊರಗಣ ವಿಷಯ ವಿಭ್ರಮತೆಗಾಣಿಸದಿವೆ।
ದೆರೆದಕ್ಷಿ ತುಂಬಿ ಸೂಸದೆ ನಿಂದ ವಾಯು ॥
ಕರಿಗೊಂಡು ಶಂಭುಲಿಂಗದೊಳಿಹ ಮನವಿದ।
ನರಿಯಲಂತರ ಮುದ್ರೆಯದಮನಸ್ಕ ತಾರೆ ॥ ೩ ॥

ಇಲ್ಲಿ ನಿರೂಪಿತವಾಗಿರುವ ತಾರಕತ್ರಯಗಳಲ್ಲಿ ಮೊದಲಿನದು ಪಂಚವಿಂಶತಿ ತತ್ವಗಳ ಪಂಚೀಕರಣದಿಂದ ಆತ್ಮಾನಾತ್ಮ ವಿವೇಕದಿಂದ ನಾನು ನಿಜವಸ್ತುವೆಂಬ ಪವಿತ್ರ ಭಾವನೆ ಪಡೆದುಕೊಳ್ಳುವದೇ ಸಾಂಖ್ಯ ಇಲ್ಲವೆ ಜ್ಞಾನ ಮಾರ್ಗ. ಇದು ಜ್ಞಾನಪರವಾದ ಬಹಿರ್ಲಕ್ಷ್ಯದ ಲಕ್ಷಣವನ್ನು ಸೂಚಿಸುವದು. ಕಣ್ಣು (ಶಿಖಿಯ ಮಂದಿರಯುಗ), ಕಿವಿ (ನಭದೆಡೆಯುಗಳ), ಮೂಗು (ಧರಣಿಯ ತಾಣವೆರಡು) ಇವುಗಳನ್ನು ಬಲಿದು, ರೇಚಕ ಪೂರಕದಿಂದ (ಕರ ಶಾಖೆ) ಆರು ಚಕ್ರ (ಋತು)ಗಳಲ್ಲಿ ಕೂಡಿ ಪ್ರಾಣಪ್ರಸನ್ನವಾಗೆ ಷಣ್ಮುಖೀ ಮುದ್ರೆಯಿಂದ

ಪ್ರಕಾಶವು ಕಾಣತೊಡಗುವದು; ಇದು ಮಧ್ಯಲಕ್ಷ್ಯವು. ಬಾಹ್ಯ ವಿಷಯಗಳತ್ತ ಹರಿಯುವ ಮನವನ್ನು ಸೆಳೆದು ಚಲಿಸುವ ಪ್ರಾಣವನ್ನು ನಿಲಿಸಿ ಅನಿಮಿಷ ದೃಷ್ಟಿಯಿಂದ ಪರವಸ್ತುವಿನಲ್ಲಿ ಬೆರೆಯಲು ಅದು ಅಂತರ್ಮುದ್ರೆ ಎನಿಸುವದು; ಮನವು ಉನ್ಮನವಾಗಲು ಅಮನಸ್ಕತಾರೆ ಎಂದು ಅದು ಪ್ರಸಿದ್ಧವಾಗಿದೆ.

ವೀರಶೈವದ ಪರಿವಿಡಿಯಲ್ಲಿ ಶಾಂಭವೀ ಮುದ್ರೆಯ ಸಾಧನೆಯು ಇಷ್ಟ-ಲಿಂಗಾನುಸಂಧಾನವಾಗಿಯೂ, ಷಣ್ಮುಖೀ ಮುದ್ರೆಯ ಸಾಧನೆಯು ಪ್ರಾಣ ಲಿಂಗಾನುಸಂಧಾನವಾಗಿಯೂ ಮತ್ತು ಖೇಚರೀ ಮುದ್ರೆಯ ಸಾಧನೆಯು ಭಾವಲಿಂಗಾನುಸಂಧಾನದಲ್ಲಿಯೂ ಪರಿವರ್ತಿಸುವದು. ಷಣ್ಮುಖೀ ಮುದ್ರೆ-ಯಿಂದ ಸಾಧಿಸುವ ಪ್ರಾಣಲಿಂಗದ ಕಳೆಯನ್ನು ಷಣ್ಮುಖಸ್ವಾಮಿಯು ತಮ್ಮ ದೊಂದು ವಚನದಲ್ಲಿ ಹೃದ್ಯವಾಗಿ ಚಿತ್ರಿಸಿದ್ದಾರೆ:

ಪ್ರಾಣಲಿಂಗದ ಕಳೆಯೆಂದರೆ—

ಆಧಾರದಲ್ಲಿ ಎಳೆಯ ಸೂರ್ಯನಂತೆ ಬೆಳಗುತ್ತಿಪ್ಪುದು;
ಸ್ವಾಧಿಷ್ಠಾನದಲ್ಲಿ ಪೌರ್ಣಿಮೆಯ ಚಂದ್ರನಂತೆ ಬೆಳಗುತ್ತಿಪ್ಪುದು;
ಮಣಿಪೂರಕದಲ್ಲಿ ಮಿಂಚಿನ ಲತೆಯಂತೆ ಬೆಳಗುತ್ತಿಪ್ಪುದು;
ಅನಾಹತದಲ್ಲಿ ಸ್ಫಟಿಕದ ಸಲಾಕೆಯಂತೆ ಬೆಳಗುತ್ತಿಪ್ಪುದು;
ವಿಶುದ್ಧಿಯಲ್ಲಿ ಮೌಕ್ತಿಕದ ಗೊಂಚಲಂತೆ ಬೆಳಗುತ್ತಿಪ್ಪುದು;
ಆಜ್ಞೆಯಲ್ಲಿ ರತ್ನದ ದೀಪ್ತಿಯಂತೆ ಬೆಳಗುತ್ತಿಪ್ಪುದು;
ಬ್ರಹ್ಮರಂಧ್ರದಲ್ಲಿ ಸ್ವಯಂ ಜ್ಯೋತಿಯಂತೆ ಬೆಳಗುತ್ತಿಪ್ಪುದು;
ಶಿಖೆಯಲ್ಲಿ ಶುದ್ಧ ತಾರೆಯಂತೆ ಬೆಳಗುತ್ತಿಪ್ಪುದು;
ಪಶ್ಚಿಮದಲ್ಲಿ ಉಳಕ ನಕ್ಷತ್ರದಂತೆ ಬೆಳಗುತ್ತಿಪ್ಪುದು
ನೋಡಾ, ಅಖಂಡೇಶ್ವರಾ.

ಇಲ್ಲಿ ಆಧಾರದಿಂದ ಪಶ್ಚಿಮ ಚಕ್ರದ ವರೆಗಿನ ನವ ಚಕ್ರಗಳ ವಿವರವನ್ನು ತಿಳುಹಿಸಿ ಪ್ರತಿಯೊಂದು ಚಕ್ರದಲ್ಲಿ ಪ್ರಾಣಲಿಂಗದ ಕಳೆಯು ಹೇಗೆ ವಿಕಾಸವನ್ನು ಪಡೆದು ಸರ್ವಾಂಗವನ್ನು ವ್ಯಾಪಿಸುವುದೆಂಬುದರ ವರ್ಣನೆ ವ್ಯಕ್ತವಾಗಿದೆ. 'ನವಚಕ್ರಗತ ತೇಜೋಮಯ'ವಾದ ಪರವಸ್ತುವೇ ಆಯಾ ಸ್ಥಾನದಲ್ಲಿ ಆಯಾ ಪ್ರಭೆಯಿಂದ ಕಾಣಿಸಿಕೊಳ್ಳುವದೆಂಬ ಭಾವವಿಲ್ಲಿರುತ್ತದೆ.

ಅಲ್ಲಮಪ್ರಭುದೇವರು ಖೇಚರೀಮುದ್ರೆಯಿಂದ ಭಾವಲಿಂಗಾನುಸಂಧಾನದ ಅನುಭವವನ್ನೂ ಪಡೆದಿದ್ದರು :

ಖೇಚರತ್ವದ ನೆಲೆಯ ಭೂಚರರು ಬಲ್ಲರೆ ?
ವಾಚಾಳಕರ ಮಾತಿಗಿದು ಸಲ್ಲದು ।
ಆಚಾರದನುಭಾವ ಭಕ್ತಿನೆಲೆಗೊಂಡಂಗೆ
ಸೂಚಿಸುವುದಾ ಮಹಾ ಪರಮಪದವು ॥

ಜಡ ಪ್ರಪಂಚಿನಲ್ಲಿ ತೊಳಲುವವರಿಗೆ, ಪ್ರಕೃತಿಯ ಉರುಳಿನಲ್ಲಿ ಒದ್ದಾಡುತ್ತಿರುವ ಜಡವಾದ ಆತ್ಮರುಗಳಿಗೆ ಖೇಚರೀ ಮುದ್ರೆ ಸಾಧಿಸುವದೆಂತು? ಮಾತಿನ ಮಾಲೆಯಲ್ಲಿ ಸಿಲುಕಿದವರ ಅನುಭವಕ್ಕೆ ಅದು ನಿಲುಕಲರಿಯದು. ಆಚಾರದ ಆಧಾರದಿಂದ ಮಹತ್ತಿನ ಮಹಾನುಭಾವದ ವರೆಗಿನ ಪ್ರಗತಿಪರವಾದ ಅನುಭವ ಕ್ರಮದಲ್ಲಿ ಭಕ್ತಿಯ ಹಿನ್ನೆಲೆಯಾಗಿ ಆ ಪರಮಪದಪ್ರದವಾದ ಮಹಾ ವಸ್ತುವು ವಿಕಾಸಗೊಳ್ಳುವುದೆಂಬ ಈ ಸೂಚನೆ ಮೇಲಿನ ಮಂತ್ರಗೌಪ್ಯದ ಪದ್ಯದಲ್ಲಿ ಹುದುಗಿದೆ.

ಅಂತರ್ಲಕ್ಷ್ಯ ಮಧ್ಯಲಕ್ಷ್ಯ ಊರ್ಧ್ವಲಕ್ಷ್ಯಗಳಿಂದ ಶಾಂಭವೀ ಷಣ್ಮುಖೀ ಖೇಚರೀ ಮುದ್ರೆಗಳನ್ನು ಸಾಧಿಸಿ ಅದರಿಂದ ಹೊಂದಲು ಶಕ್ಯವಿರುವ ಮೂರು ಬಗೆಯ ಕಳೆ ಅಥವಾ ಶಕ್ತಿಯ ವರ್ಣನೆಯು ಯೋಗಕ್ಕೆ ಸಂಬಂಧ ಪಟ್ಟ ವಿವಿಧ ಗ್ರಂಥಗಳಲ್ಲಿ ಬರುತ್ತಿದೆ. ಒಂದೊಂದು ಯೋಗ ಸಂಪ್ರದಾಯದವರು ಒಂದೊಂದು ಲಕ್ಷ್ಯವನ್ನು ಎತ್ತಿ ಹೇಳುವರು. ಎಂದರೆ ಯೋಗಿಗಳು ಒಂದೊಂದು ಮುದ್ರೆಯನ್ನು ತಮಗೆ ಉಚಿತವಾದ ರೀತಿಯಲ್ಲಿ ಮುಖ್ಯವೆಂದು ಬಗೆದು ಉಳಿದ ಮುದ್ರೆಗಳನ್ನು ಮೂದಲಿಡುವರು. ಆದರೆ ಈ ಮೂರು ಲಕ್ಷ್ಯಗಳ, ಈ ಮೂರೂ ಮುದ್ರೆಗಳ ಸುಂದರವಾದ ಸಮನ್ವಯವೇ ಮೂರರ ಮುಪ್ಪುರಿ.

ಸಾಂಖ್ಯ ತಾರಕ ಯೋಗದ ವಿವರಣೆಯ ತರುವಾಯ ಯೋಗಶಾಸ್ತ್ರದಲ್ಲಿ ಅಮನಸ್ಕಯೋಗದ ನಿಲವಿನ ವರ್ಣನೆ ಬರುತ್ತಿರುವುದುಂಟು. ಅಮನಸ್ಕ ಯೋಗದ ಅನುಭವದಿಂದ ಯೋಗದಿಂದ ಪಡೆಯುವ ಅನುಭವವು ಪೂರ್ಣತೆಯನ್ನು ಹೊಂದುವದು. ಯೋಗಾನುಸಂಧಾನಕ್ಕೆ ಇಂಥ ಅನುಭವದ ಪೂರ್ಣತೆಯನ್ನು ಪಡೆಯುವದೇ ಪ್ರಾಮುಖ್ಯವಾದ ಗುರಿಯಾಗಿದೆ. ಈ ಕೊನೆಯ ಹಂತದಲ್ಲಿ ಎಂದರೆ ಅಮನಸ್ಕಯೋಗದ ಆಚರಣೆಯಲ್ಲಿ ಬಾಹ್ಯವಿಷಯ ಭ್ರಮೆ

ತೋರದೆ ದೃಷ್ಟಿನಿಂತು ಕರಿಗೊಂಡು ಮನವು ಅಡಗುವದು, ಮನೋಲ್ಲಯವು ಸಾಧಿಸುವದು. ನಿವಾತ ದೀಪವಂತೆ, ನಿಸ್ತರಂಗಾಂಬುನಿಧಿಯಂತೆ, ಏಕಪ್ರಕಾರ ವಾಗಿ ಚಲನೆಯಿಲ್ಲದೆ ಇರುವ ಚಿತ್ರಪಟದಂತೆ ತಾನೇ ತಾನಾಗಿ ನಿಲ್ಲುವ ಅವಸ್ಥೆ ಯದು. ಚಿತ್ರ ದೀಪದಂತೆ ತೋರುತ್ತ, ಕಂಬವ ಮುರಿದು ಈಡಾಗಿ ಮದ-ಗಜವು ಹೋದ ತೆರನಂತೆ, ಮಾಯಾಪಾಶವ ಹರಿದು ದೇಹಭಾವವ ಮರೆದು ನಿಲ್ಲುವ ಅವಸ್ಥೆಯದು. ಮಕುಟ ಕಟಕಾದಿಯೊಳಿದ್ದ ಸುವರ್ಣದಂತೆ, ಘಟದು-ಪಾಧಿಗಳಳಿದ ಮೃತ್ತಿಕೆಯಂತೆ, ಕಾಣಿಸುವ ತರಂಗಾದಿಗಳಳಿದ ಉದಕದಂತೆ, ದೇಶಕಾಲವ ಮೀರಿ ತೋರುವ ಗಗನದಂತೆ, ಪ್ರತಿಬಿಂಬವಿಲ್ಲದ ನಿರ್ಮಲವಾದ ರವಿ ಶಶಿಯಂತೆ, ಅಚ್ಚ ಬೆಳುದಿಂಗಳ ಪ್ರಭೆಯೊಳು ಸ್ವಚ್ಛವಾದ ಸ್ಫಟಿಕದ ಮಣಿ ಯಂತೆ, ಬಯಲೊಳಿತ್ತಿದ ಬಿಂಬದಂತೆ, ಘಟ ಮಠಾದಿಗಳಳಿದ ಆಕಾಶದಂತೆ ಒಂದೇಯಾಗಿ ಸರ್ವತ್ರ ಪರಿಪೂರ್ಣವಾಗಿ ತೋರುವುದು ಆ ಅವಸ್ಥೆಯು. ವಿಕಾರಕರ್ಮ, ಪ್ರತ್ಯಕ್‌ಕರ್ಮ, ಉತ್ಪತ್ತಿಕರ್ಮ, ಸಂಸ್ಕಾರಕರ್ಮ ಎಂಬ ಕರ್ಮ ಚತುಷ್ಟಯದ ಸಂಗವಿಲ್ಲದೆ, ಸ್ವಾನುಭೂತಿಯೆಂಬ ಅಖಂಡೈಕ್ಯ ರಸವೇ ಆವೇಶವಾಗಿ, ವೈಖರೀ ಮಧ್ಯಮಾ ಪಶ್ಯಂತಿ ಪರಾ— ಎಂಬ ಚತುರ್ವಿಧ ವಾಕುಗಳೆಲ್ಲವೂ ಮನೋನ್ಮನಿಯಲ್ಲಿ ಲಯವಾಗಿ, ಅಭಿಮಾನರೂಪವಾದ ಪ್ರಪಂಚ ವಾಗ್ಜಾಲವೆಲ್ಲವನೂ ಉಪೇಕ್ಷಿಸಿ, ಜಗದಾಕಾರ ಬೋಧರೂಪವಾಗಿ ವ್ಯಕ್ತವಾಗುವದು ಆ ಅವಸ್ಥೆಯು. ಕಾಣಬರುವ ಬಹು ದೃಶ್ಯಗಳೆಲ್ಲವೂ ದೃಕ್ ರೂಪವಾದ ಜಗತ್ಪರಿಪೂರ್ಣವಾದ ಮಹಾಪ್ರಕಾಶವಾದ ಚಿದ್ರೂಪವಾದ ಪರ-ಬ್ರಹ್ಮನಲ್ಲಿ ಐಕ್ಯವ ಮಾಡಿ, ಬಾಹ್ಯಂತರ ಸಗುಣ ನಿರ್ಗುಣ ಸವಿಕಲ್ಪ ನಿರ್ವಿಕಲ್ಪ ಎಂಬುದೇನೂ ಕಾಣಿಸಿಕೊಳ್ಳದೆ ಒಳಗೂ ಹೊರಗೂ ಪರಮ ಪ್ರಕಾಶವು ತುಂಬಿ ಚಿಜ್ಜ್ಯೋತಿ ಮಾತ್ರವೇ ತಾನಾಗಿ ತೋರುವದು ಆ ಅವಸ್ಥೆ. ಮಣಿಗಣದ ಸೂತ್ರದಂತೆ, ಸರ್ವಕ್ಕೂ ಸಮನಾಗಿದ್ದು ಗಗನ ವಾಣಿಯಂತೆ, ನಿರಭಿಮಾನಿಯಾಗಿ ನೀರು ತೆರೆಯಾದಂತೆ ತನ್ನೊಳಗೆ ತಾನೇ ವ್ಯವಹರಿಸುವದೇ ಆ ಅಮನಸ್ಕಯೋಗದ ಅವಸ್ಥೆಯು. ಇಂತು ಸಾಂಖ್ಯ ತಾರಕ ಅಮನಸ್ಕವೆಂಬ ಯೋಗತ್ರಯವ ಎಂದರೆ ಈ ಮೂರರ ಮುಪ್ಪುರಿಯನ್ನು ಅರಿತ ಮಹಾಂತನೇ ಆರೂಢನು, ಅವಧೂತನು, ಪರಮಹಂಸನು. ಇದನ್ನು ಬಲ್ಲ ಪುರುಷನು ಜೀವನ್ಮುಕ್ತನು, ಸ್ಥಿತಪ್ರಜ್ಞನು, ಪುರುಷೋತ್ತಮನು ಎನಿಸುವನು.

# ಅಧ್ಯಾತ್ಮ ಅನುಭವಶಾಸ್ತ್ರಗಳ ಸಂಗಮ

ಜನಸಾಮಾನ್ಯರಲ್ಲಿ ಅಧ್ಯಾತ್ಮದ ವಿಷಯವಾಗಿ ಬಹು ವಿಶೇಷವಾದ ತಪ್ಪು ತಿಳಿವಳಿಕೆಯಿರುತ್ತದೆ. ಪ್ರಪಂಚವು ಸುಳ್ಳು. ಸಂಸಾರ ಕೇವಲ ಮೂರು ದಿನದ ಸಂತೆ ಮಾತ್ರ. ಸಂಸಾರಿಗಳಿಗೆ ಅಧ್ಯಾತ್ಮ ಹೊಂದದು. ಸನ್ಯಾಸಿಗಳೇ ಅದನ್ನು ಆಚರಿಸಬೇಕು— ಎಂಬುದು ಅವರ ವಾದ. ಆದರೆ ಆತ್ಮನು ಎಲ್ಲ-ರಲ್ಲಿಯೂ ಇರುವದರಿಂದ ಹಾಗು ಪರಮಾತ್ಮ ಸಾಕ್ಷಾತ್ಕಾರವು ಎಲ್ಲರ ಜೀವನದ ಗುರಿಯಾಗಿರುವುದರಿಂದ ಆತ್ಮ ಪರಮಾತ್ಮರ ಗೂಢವನ್ನು ಅರಿತುಕೊಳ್ಳುವದು ಪ್ರತಿಯೊಬ್ಬರ ಜೀವನದ ಧ್ಯೇಯವಾಗಿರುತ್ತದೆ. ಯಾವುದು ಕಾರ್ಯ-ಕಾರಣ ತತ್ವವನ್ನು ಅವಲಂಬಿಸಿದೆಯೋ ಮತ್ತು ಯಾವುದು ಸಪ್ರಮಾಣ ಸಿದ್ಧಾಂತಗಳ ತಳಹದಿಯ ಮೇಲೆ ನಿಂತಿದೆಯೋ ಅದು ಶಾಸ್ತ್ರವೆನಿಸುವದು. ಅಧ್ಯಾತ್ಮಶಾಸ್ತ್ರವು ಸಹ ಇದಕ್ಕೆ ವ್ಯತಿರಿಕ್ತವಾಗಿಲ್ಲ. ಈ ಶಾವಾಸ್ಯೋಪನಿಷತ್ತಿನ ಶಾಂತಿ ಮಂತ್ರವು, 'ಅದು ಪೂರ್ಣವಿದೆ; ಇದು ಪೂರ್ಣವಿದೆ. ಪೂರ್ಣದಿಂದ ಪೂರ್ಣವು ಹೊರ ಹೊಮ್ಮಿದೆ; ಪೂರ್ಣದಿಂದ ಪೂರ್ಣವು ಹೊರಹೊಮ್ಮಿದರೂ ಪೂರ್ಣವು ಪೂರ್ಣ ವಾಗಿಯೇ ಉಳಿಯುತ್ತದೆ' ಎಂದು ಹೇಳುತ್ತದೆ. ಎಲ್ಲವೂ ಪೂರ್ಣವಾದುದಾದರೆ ಅಪೂರ್ಣವು ಎಲ್ಲಿಂದ ತೋರಿತು? ಅದು ನಮ್ಮ ತಿಳಿವಳಿಕೆಯಲ್ಲಿದೆ, ನಮ್ಮ ತಪ್ಪು ತಿಳಿವಳಿಕೆಯಲ್ಲಿದೆ.

ಮಾನವನು ಹೊಸದಾದುದಾವುದನ್ನೂ ನಿರ್ಮಿಸಲಾರನು. ಇಂದಿನ ವಿಜ್ಞಾನವು ಮಾನವ ನಿರ್ಮಿತ ಹೊಸ ಸೃಷ್ಟಿಯೆಂದು ಹೇಳುವದೂ ಅಷ್ಟು ಸರಿಯಾದುದಲ್ಲ. ಅವನು ಹೊಸದು ಮಾಡಿಲ್ಲ. ಇದ್ದದ್ದನ್ನು ಸರಿಯಾಗಿ ಹೊಂದಿಸಿಟ್ಟಿದ್ದಾನೆ ಅಷ್ಟೆ! ಇಂದಿನ ವಿಜ್ಞಾನವು ಮಾನವ ಬುದ್ಧಿಯ ಪ್ರಭಾವ ವನ್ನು ವ್ಯಕ್ತಗೊಳಿಸುತ್ತದೆ. ಅಣುಗಳ ರೂಪಾಂತರ ಮಾಡಿ ಒಂದು ಸಾರೆ ಸಕ್ಕರೆಯೆಂದು ಇನ್ನೊಂದು ಸಾರೆ ವಿಷವೆಂದು ಮನಗಾಣುವ ಬುದ್ಧಿಯು ವಿಜ್ಞಾನ ದೃಷ್ಟಿಯದು. ಅಣುಗಳು ಮಾತ್ರ ನಿಸರ್ಗದತ್ತವಾಗಿರುತ್ತವೆ. ಮಾನ ವನು ಈ ಅಣುಗಳನ್ನು ಗುರುತಿಸಿ ಇವುಗಳಲ್ಲಿಯ ಸಾಮರ್ಥ್ಯವನ್ನು ಮಾತ್ರ ಕಂಡಿದ್ದಾನೆ. ಅಣುಗಳಲ್ಲಿ ಸಹ ಪೂರ್ಣತ್ವವಿದ್ದರೂ ಅಪೂರ್ಣ ಬಂದುದು ನಾನು ಮಾಡಿದೆನೆಂಬ ಮಾನವನ ಅಹಂಕಾರಯುಕ್ತ ತಿಳಿವಳಿಕೆಯಿಂದ. ಮಾನ

ವನ ಅಜ್ಞಾನ ಅಹಂಕಾರ ಮಮಕಾರಗಳಿಂದ ಸೃಷ್ಟಿಯ ಸಹಜ ಕ್ರಮಕ್ಕೆ ವ್ಯತ್ಯಾಸವುಂಟಾಗುತ್ತಿದೆ. ಋಷಿ ವಾಣಿಯ ಮೇರೆಗೆ ಪೂರ್ಣವಾಗಿದ್ದ ಪರಾತ್ಪರ ವಸ್ತುವಿನಿಂದ (ಅದಃ) ಹೊರಹೊಮ್ಮಿದ ಸೃಷ್ಟಿಯು (ಇದಂ) ಪೂರ್ಣವಾಗಿಯೇ ಇದೆ. ಆದರೆ ವ್ಯತ್ಯಸ್ತವಾಗಿ ಅದನ್ನು ಕಾಣುವ ನಮ್ಮ ನೋಟದಲ್ಲಿ ದೋಷ-ವಿರುತ್ತದೆ. ಈ ದೃಷ್ಟಿ ದೋಷವನ್ನು ಪರಿಹರಿಸಿಕೊಳ್ಳುವುದರಲ್ಲಿ ಅಧ್ಯಾತ್ಮ ಶಾಸ್ತ್ರದ ಗಮನವಿರುತ್ತದೆ.

'ಕುರುಹು' (Symbol) ಎಂದು ಹೆಸರು ಪಡೆದ ವಿಶಾಲವಾದ ಈ ವಿಶ್ವವು ಇಷ್ಟು ದೊಡ್ಡದಿದ್ದರೂ ಪರಾತ್ಪರ ವಸ್ತುವಿನಲ್ಲಿ ಇದು ಕೇವಲ ಒಂದು ಅಣು. ಇಡಿಯಾಗಿ ಇಲ್ಲವೆ ಬಿಡಿಯಾಗಿ ನಮ್ಮ ದೃಗ್ಗೋಚರವಾಗುವ ಈ ವಿಶ್ವವು ಪರವಸ್ತುವಿನಲ್ಲಿ ಒಂದು ಕುರುಹು ಮಾತ್ರ. ನಮ್ಮ ಜೀವನದ ವೃತ್ತಿ ವ್ಯವಹಾರಗಳೂ ಕುರುಹನ್ನೇ ಸೂಚಿಸುತ್ತಿವೆ. ಈ ಕುರುಹಿಗೆ ಆಧಾರವಾಗಿ ಹಿನ್ನೆಲೆಯಾಗಿ ಇರುವ ಆ ಪರವಸ್ತುವಿಗೆ 'ಇರುಹು' ಎಂದು ಹೆಸರು. ಈ ಕುರುಹು ಆ ಇರುಹಿನಿಂದ ಹೊರಹೊಮ್ಮಿದೆ. ಇದಕ್ಕೆಲ್ಲ ಆ ಪರವಸ್ತುವಿನ ಸಂಕಲ್ಪಶಕ್ತಿಯೇ ಕಾರಣವಾಗಿದೆ. ಸಂಕಲ್ಪ ಮಾತ್ರದಿಂದ ಸೃಷ್ಟಿಯು ತೋರು ವದು, ತೋರಿ ಅಡಗುವದು. ಆಗಮವು ಹೇಳುವಂತೆ ಈ ಶಕ್ತಿಯು 'ಸ್ವಾಭಾವಿಕೀ ಜ್ಞಾನ ಬಲ-ಕ್ರಿಯಾ ಚ'. ಸರ್ವಜ್ಞತ್ವ, ಸರ್ವಕರ್ತೃತ್ವ, ಸರ್ವವ್ಯಾಪ ಕತ್ವ ಇವು ಜ್ಯೋತಿ ಸ್ವರೂಪವಾದ 'ಇರಹು' ಶಬ್ದದಿಂದ ನಿರೂಪಿತವಾದ ಆ ಪರವಸ್ತುವಿನಲ್ಲಿ ನೈಜವಾಗಿರುತ್ತವೆ. ಆ ಪರವಸ್ತುವಿನ ಈ ಅಲುಪ್ತಶಕ್ತಿಗೆ 'ಅರುಹು' ಎಂಬ ಹೆಸರು. ಅದಕ್ಕಾಗಿ ಇರುಹಿನ ಅರುಹಿನ ಮುಖಾಂತರವಾಗಿ ಹೊರಹೊಮ್ಮಿದ ಈ ಕುರುಹು, ಈ ಸೃಷ್ಟಿಯು ಕ್ಷಣಿಕವಲ್ಲ. ಪರವಸ್ತುವಿನಂತೆ ಇದೂ ಪೂರ್ಣವಾಗಿ ಸತ್ಯವಾಗಿ ಶೋಭಿಸುತ್ತಿದೆ. ಬಿಡಿ ಬಿಡಿಯಾದ ಮಣಿ-ಗಳನ್ನು ಕೂಡಿಸಲು, ಕೂಡಿಸಿ ಇಡಿಯಾಗಿ ಕಾಣುವಂತೆ ತೋರಿಸಲು ಸೂತ್ರವು ಅವಶ್ಯವಿದ್ದಂತೆ ಭಿನ್ನ ಭಿನ್ನವಾಗಿ ಕಂಗೊಳಿಸುವ ವ್ಯಕ್ತಿ ವಸ್ತುಗಳನ್ನು ಸಂಗಳಿಸಿ ಅವುಗಳಲ್ಲಿ ಒಂದು ಸುಸಂಬದ್ಧತೆಯನ್ನು ವ್ಯಕ್ತಗೊಳಿಸಲು ಸೂತ್ರವೊಂದು ಅವಶ್ಯವಾಗಿದೆ. ಆ ಪರಾತ್ಪರ ವಸ್ತುವೇ ಈ ಸೂತ್ರವು. 'ಮಣಿಗಳ ಸೂತ್ರದಂತೆ ನೀನಿಪ್ಪೆಯಯ್ಯಾ'. ವಿಶ್ವ ನಾಟ್ಯರಂಗದಲ್ಲಿ ನಮ್ಮ ಗಾತ್ರಕ್ಕೆ ಅನು ಸರಿಸಿ ಸೂತ್ರಧಾರಿಯಾದ ಆ ಪರವಸ್ತುವಿನ ತಾಳ ಲಯಕ್ಕನುಸಾರವಾಗಿ ನಮ್ಮ ಪಾತ್ರವನ್ನಾಡಿ ಹೋಗುವದು ನಮ್ಮ ಕೆಲಸ. ಮೇಲು–ಕೀಳು ಎಲ್ಲದರಲ್ಲಿಯೂ

ಆ ಪರವಸ್ತುವಿನ ಚಿತ್ರಭಾ ಸಾಮರ್ಥ್ಯವು ಹುದುಗಿದೆ ಎಂಬುದು ಒಮ್ಮೆ ತಿಳಿದರೆ ನಮ್ಮ ಪಾತ್ರವನ್ನಾಡಲು ಸುಗಮವಾಗುತ್ತದೆ. ಅದಕ್ಕಾಗಿ "Feel the presence of God in the arms that embrace and in the sword that strikes" ಎಂಬುದು ನಮ್ಮ ನಡೆಯಾಗಬೇಕು.

ಇಂಥ ಒಬ್ಬ ಸೂತ್ರಧಾರಿಯು ಸಚ್ಚಿದಾನಂದಸ್ವರೂಪನಾಗಿದ್ದಾನೆ. ಆತನ ಸದ್ರೂಪವನ್ನು ಚಿದ್ರೂಪವನ್ನು ಆನಂದರೂಪವನ್ನು ಅರಿಯಲು ಶಕ್ಯವೂ ಇದೆ. Is the final Reality knowable or unknowable ಎಂಬ ಪ್ರಶ್ನೆಗೆ Yes! ಎಂಬುದೇ ನಿರ್ಧಾರದ ಉತ್ತರವಾಗಿದೆ. ಆ ಪರವಸ್ತುವು ತರ್ಕಬುದ್ಧಿಗೆ ಮಾತ್ರ ಅಜ್ಞೇಯವಾಗಿದೆ. ನಿರ್ಮಲಮತಿಗೆ ಅದು ಜ್ಞೇಯವಾಗಿದೆ. ಕಾಂಟನೆಂಬ ಜರ್ಮನ್ ತತ್ವಜ್ಞಾನಿಯೂ ಸಹ ತರ್ಕಾತ್ಮಕವಾದ ವ್ಯಾವಹಾರಿಕ ಬುದ್ಧಿಗೆ (Practical Reason) ಅದನ್ನರಿಯುವದು ಶಕ್ಯವಿಲ್ಲ, ನಿರ್ಮಲ ಮತಿಗೆ (Pure Reason) ಮಾತ್ರ ಅದು ಶಕ್ಯವಿದೆ ಎಂದು ತಿಳಿಸುತ್ತಾನೆ. ನಿರ್ಮಲ ಮತಿಯಿಂದ ಕಾಣುವ ಆದರ ಹಂಬಲದಲ್ಲಿ ಪರವಸ್ತುವಿನ ಅಭಿವ್ಯಕ್ತಿಯಾಗುತ್ತದೆ. ಆ ನಿರ್ಮಲಮತಿಗಳು ಪಡೆದ ದರ್ಶನವೇ ಧರ್ಮ. ಈ ಭುವನದಲ್ಲಿ ಹಲವಾರು ಧರ್ಮಗಳುಂಟು. ಭಿನ್ನ ಭಿನ್ನ ಧರ್ಮಗಳು ಒಂದೊಂದು ಮಗ್ಗುಲಿನಿಂದ ಪರವಸ್ತುವಿನ ಒಂದೊಂದು ಸ್ವರೂಪವನ್ನು ಕಾಣಲು ಯತ್ನಿಸಿದವು. ಸಾಧು ಸಜ್ಜನರು, ಸಂತ ಸತ್ಪುರುಷರು, ದಾಸ ಶರಣರು, ಜ್ಞಾನಿ ಮೌನಿಗಳು ಆಯಾ ಪರಿಸ್ಥಿಗೆ ಅನುಸರಿಸಿ ಆ ಪರವಸ್ತುವಿನ ವಿವಿಧ ಸ್ವರೂಪವನ್ನು ವಿವಿಧವಾಗಿ ಕಂಡರು. ಇದರಿಂದ ಪರವಸ್ತುವಿನ ಸ್ವರೂಪದ ವೈವಿಧ್ಯವನ್ನರಿಯಬೇಕೇ ಹೊರತು ಅವರು ಕಂಡ ಪರವಸ್ತು ಮೇಲು ಇವರು ಕಂಡ ಪರವಸ್ತು ಮೇಲು ಎಂಬ ವಿತರ್ಕ ಸಲ್ಲದು. ಪರವಸ್ತುವು ಪೂರ್ಣವಾಗಿಯೇ ಇದೆ. ಒಬ್ಬರು ಕಂಡುದೇ ಶ್ರೇಷ್ಠ, ಇನ್ನೊಬ್ಬರದು ಹಾಗಲ್ಲ ಎಂದು ಭಾವಿಸುವದು ಅಜ್ಞಾನದ ಲಕ್ಷಣ.

ಈ ವಿಶ್ವದಲ್ಲಿಯ ಬಗೆಬಗೆಯ ದರ್ಶನಗಳ ಬಗೆಬಗೆಯ ಧರ್ಮಗಳ ಗೊತ್ತುಗುರಿಗಳನ್ನು ವೈಶಿಷ್ಟ್ಯ ವೈಲಕ್ಷಣಗಳನ್ನು ಮನದಂದರೆ ಅವೆಲ್ಲ ಪೂರ್ಣತ್ವದ ನಿರೂಪಣೆಗೆ ಅವಕಾಶವನ್ನೇ ಪಡೆದಿವೆ ಎನ್ನಬೇಕು. ಹಿಂದೂ ಧರ್ಮದ ಅನೇಕತ್ವದಲ್ಲಿ ಏಕತ್ವವನ್ನು ಕಾಣುವ ದೃಷ್ಟಿಯೂ ಪರಧರ್ಮಸಹಿಷ್ಣುತೆಯೂ

ವಿಚಾರ ಸ್ವಾತಂತ್ರ್ಯವಿರುವ ಅವಕಾಶವೂ, ಬೌದ್ಧ ಜೈನ ಧರ್ಮಗಳಲ್ಲಿಯ 'ಅಹಿಂಸಾ ಪರಮೋ ಧರ್ಮಃ' ಪರವಸ್ತುವಿನ ಸತ್ಸ್ವಾಸ್ವರೂಪವನ್ನು ಅಹಿಂಸೆಯಲ್ಲಿ ಕಂಡ ದೃಷ್ಟಿಯೂ, ಕ್ರೈಸ್ತಧರ್ಮದಲ್ಲಿ ಪರಮಾತ್ಮನು ವಿಶ್ವದ ತಂದೆ ಅವನು ಕರುಣಾಮಯನು ಎಂಬ ತತ್ವವೂ, ಇಸ್ಲಾಮುಧರ್ಮದಲ್ಲಿಯ ಭ್ರಾತೃಭಾವ ಪ್ರೇಮಗಳೂ ವೀರಶೈವಧರ್ಮದಲ್ಲಿಯ ಕಾಯಕವೇ ಕೈಲಾಸ ಮನದ ಮುಂದಣ ಆಸೆಯೇ ಮಾಯೆಎಂಬ ಸಿದ್ಧಾಂತಗಳೂ ನಮ್ಮ ಜೀವಲೋಕಕ್ಕೆ ನೀಡಿದ ಕಾಣಿಕೆಗಳಾಗಿವೆ. ಈ ಧರ್ಮಗಳ ಜನಕರು ಬಿತ್ತಿದ ಸಿದ್ಧಾಂತಗಳು, ಅವರು ಆ ಪರವಸ್ತುವನ್ನು ನೋಡಿದ ದೃಷ್ಟಿ ಕಂಡ ದರ್ಶನ, ಅವರು ಪ್ರಸ್ಥಾಪಿಸಿ ರೂಢಗೊಳಿಸಿದ ಸುಸ್ವರೂಪ, ಇವು ಅವರು ಗತಿಸಿದ ಕೆಲ ಶತಮಾನಗಳ ತರುವಾಯ ಅವರ ಅನುಯಾಯಿಗಳಲ್ಲಿ ಉಳಿಯಲಿಲ್ಲ. ಅಲ್ಲಿ ವ್ಯಾವರ್ತಕ ದೃಷ್ಟಿ ಬೆಳೆದದ್ದರಿಂದ, ಸ್ಥಿತಿಯನ್ನು ಇದ್ದಕ್ಕಿದ್ದಂತೆ ಕಾಣುವ ಕಣ್ಣು ಕುರುಡು ಬಿದ್ದುದರಿಂದ ಹೊರಗಿನ ಕುರುಹುಗಳಿಗಾಗಿ ಬಡಿದಾಟ ಹೋರಾಟಗಳು ಬೆಳೆದು ಬಂದವು. ಈ ಹೋರಾಟ ಹೊಡೆದಾಟಗಳಲ್ಲಿ ಜೀವಹೋಗುವಂತೆ ಪರಿಸ್ಥಿತಿ ಬಂದೊದಗಿದರೂ ಭಾವ ಬದಲಾಗಲಿಲ್ಲ. ಅನೇಕಾನೇಕ ಜ್ಞಾನಿಗಳು ಬಂದು ನಮಗೆ ಬಡಿದು ಬುದ್ಧಿಯ ಹೇಳುತ್ತಿದ್ದರೂ ಆ ನಮ್ಮ ನಮ್ಮ ಭಾವದಲ್ಲಿ ಬದಲಾವಣೆಯಾಗಲಿಲ್ಲ. ಜೀವ ಶುದ್ಧ ಟೊಣಪನಾಗಿಯೇ ಉಳಿಯಿತು. ಇಂದಿನ ಧರ್ಮದ ಸ್ಥಿತಿ ಕೇವಲ ಬಡಿದಾಟದಲ್ಲಿ, ಹೊರಗಿನ ನಿಯಮ ಪರಿಪಾಲನೆಯಲ್ಲಿ ಪರ್ಯವಸಾನ ಪಡೆದಿದೆ. ಬಾಹ್ಯ ಆಚಾರಕ್ಕಾಗಿ ಕೇವಲ ಕುರುಹಿಗಾಗಿ ಇಂದಿನ ದರ್ಶನಗಳ ಹಂಬಲ ಹರಿದಾಟವಿದೆ. " ಅರುಹುವಿಡಿದು ಕುರುಹ ಪೂಜಿಸಲೆಂದು ಕುರುಹ ಕೊಟ್ಟಡೆ ಅರುಹ ಬಿಟ್ಟು ಕುರುಹ ಪೂಜಿಸುವ ಈ ಹೆಡ್ಡರ ನೋಡಾ " ಎಂಬ ಶರಣ ವಾಣಿಯಲ್ಲಿ ಇಂದಿನ ಜೀವನದ ದೃಷ್ಟಿಯನ್ನರಿತುಕೊಳ್ಳಬೇಕು.

ಇಂದಿನ ಪರಿಸರದಲ್ಲಿ ನಮಗೆ ನಿಜವಾದ ಅಧ್ಯಾತ್ಮದೃಷ್ಟಿ ಅರಳಬೇಕಾಗಿದೆ. ನಮ್ಮಲ್ಲಿರುವ ವ್ಯಾವರ್ತಕದೃಷ್ಟಿ ರೂಪಾಂತರ ಹೊಂದಿ ಸುವ್ಯವಸ್ಥಿತ ದೃಷ್ಟಿಯಾಗಿ ಬೆಳೆದು ಬರಬೇಕು. ಸಮ್ಯಕ್ ದೃಷ್ಟಿಯನ್ನು ಪಡೆಯುವದೆ ನಮ್ಮ ಹಿರಿಯ ಹಂಬಲವಾಗಬೇಕು. ಜ್ಞಾನಾಭಾವ ಸ್ಥಿತಿಯು ಇಲ್ಲವೆ ಅನಧ್ಯವಸಾಯವು ಲೋಪವಾಗಿ ಅಯಥಾರ್ಥಜ್ಞಾನವೂ ಇಲ್ಲವೆ ಕೆಲಸಕ್ಕೆ ಬಾರದ ತರ್ಕ ವಿತರ್ಕ ದೃಷ್ಟಿಯು ನಷ್ಟವಾಗಿ ನಿಶ್ಚಿತಜ್ಞಾನವು ಬೆಳೆಯಬೇಕಾಗಿದೆ; ಸಂಶಯ ಸಾಶಂಕ ಬುದ್ಧಿಯು ಅಳಿಯಬೇಕಾಗಿದೆ. ಎರಡನೆಯದಾಗಿ ಜೀವನದ ಎಲ್ಲ ಅಂಗಗಳ

ಲ್ಲಿಯೂ ನಿರ್ಭಯವೃತ್ತಿಯು ಬೆಳೆಯಬೇಕಾಗಿದೆ. ಎಲ್ಲಿಡೆಯಲ್ಲಿಯೂ ಭಯವನ್ನು ಉಂಟುಮಾಡುವ ಸಂಗತಿಗಳಿಗಾಸ್ಪದವಿದ್ದರೆ ಹೆದರಿ ಹೇಡಿಯಾಗಿ ಓಡಿ ಹೋಗಬೇಕಾದುದೇಕೆ ? ಇಲ್ಲಿಯೇ ನಿಂತು ಅವನ್ನೆದುರಿಸುವದು ಮೇಲಲ್ಲವೆ ? ಮರಣಕ್ಕಿಂತ ಮರಣದ ಭೀತಿಯೇ ಹೆಚ್ಚು. ಈ ಭೀತಿಯಿಂದ ಸಾಯುವ ಜನಗಳೇ ಅಧಿಕವಾಗಿದ್ದಾರೆ. ನಾವನ್ನು ಹೂವನ್ನಾಗಿ ಮಾಡಿಕೊಂಡು ಹೋರಾಡಬೇಕು. ಯಾರಿಗೂ ಬೆದರ ಬೇಕಾಗಿಲ್ಲ. ಆತ್ಮವು ಅಮರವಾಗಿದೆ ಎಂಬ ಆತ್ಮವಿಶ್ವಾಸ ಬಲಿಯಬೇಕು. ಮೂರನೆಯದಾಗಿ ಅಹಂಕಾರವಳಿದು ನಿರಹಂಕಾರಿಗಳಾಗಬೇಕು. ಅಹಂಕಾರವೇ ಆತ್ಮವಲ್ಲ. 'ಚಿದಾನಂದಃ ಶಿವೋಹಂ ಶಿವೋಹಂ ಶಿವೋಹಂ' ಎಂದು ಹೇಳುವ ಜ್ಞಾನಿಯೂ, 'ನಾನು ನನ್ನದು' ಎಂದು ಅಹಂಕರಿಸುವ ವ್ಯಕ್ತಿಯೂ ಒಂದೇ ಅಲ್ಲ. ದೇಹ ಬುದ್ಧಿ ಮನ ಆತ್ಮ ಸಾಕ್ಷಿಯಾಗಿರುವ ಜ್ಞಾನಿ, ಮತ್ತು ದೇಹವೇ ನಾನೆಂದು ಭ್ರಮೆಗೊಳಗಾಗಿ ಕಷ್ಟ ಕೆಡೆಯಾಗಿರುವ ಅಜ್ಞಾನಿಜೀವಿ ಇವರಿಬ್ಬರೂ ಒಂದೇ ಅಲ್ಲ. ಯಾವುದು ಎಲ್ಲವನ್ನು ವ್ಯಾಪಿಸಿ, ಎಲ್ಲವಕ್ಕೂ ಆಧಾರವಾಗಿದೆಯೋ ಅದು ಆತ್ಮ (ಅತ್ ಧಾತು ವ್ಯಾಪನೆ). ಈ ಆತ್ಮವು ಪೂರ್ಣವಾಗಿದೆ. ವೀಣೆಯೊಂದು ತಂತಿ ಬಹಳ, ತಂತಿಯೊಳಗೆ ಮನೆಯು ಬಹಳ, ಒಮ್ಮೆ ಒಂದು ತಂತಿಯನ್ನು ಮೀಂಟಲು ಒಂದು ವಾಣಿ ಬರುವದು. ಬಿಡಿಬಿಡಿಯಾದ ತಂತಿ, ಅವುಗಳ ಸ್ವರ ಅನೈಕ್ಯತೆಯನ್ನು ವ್ಯಕ್ತಗೊಳಿಸುತ್ತಿದ್ದರೂ ಅಲ್ಲಿ ಒಂದು ಸ್ವರ ಸಮ್ಮೇಳವಿದೆ. ಅನೈಕ್ಯತೆಯಲ್ಲಿ ಐಕ್ಯತೆಯಿದೆ. ಅಲ್ಲಿ ತಂತಿ ನುಡಿಯಲಿಲ್ಲ, ವೀಣೆ ನುಡಿಯಿತು ಎಂದು ಹೇಳುವೆವು. ಇಲ್ಲಿದೆ ನಿರಹಂಕಾರಿಗಳಾಗಬೇಕು ಎಂಬ ಮಾತಿನ ರಹಸ್ಯ. ಹೀಗೆ ನಿರಹಂಕಾರ ನಿರ್ಭಯವೃತ್ತಿ ಸಮ್ಯಕ್‌ಜ್ಞಾನದೃಷ್ಟಿ ಈ ಮೂರನ್ನು ಸಂಪಾದಿಸಬೇಕು ಎಂದು ನಿಜವಾದ ಅಧ್ಯಾತ್ಮದೃಷ್ಟಿ ಹೇಳುವದು. ಈ ಮೂರರ ಸಂಪಾದನೆಯೇ ಅಧ್ಯಾತ್ಮಶಾಸ್ತ್ರದ ಇಂದಿನ ಗುರಿಯಾಗಬೇಕು.

ಅಧ್ಯಾತ್ಮ ಶಾಸ್ತ್ರಕ್ಕೂ ಅನುಭಾವ ಶಾಸ್ತ್ರಕ್ಕೂ ಒಂದು ಸೂಕ್ಷ್ಮವಾದ ಅಭ್ಯಂತರವುಂಟು. ಮಾನವನಲ್ಲಿ ಬುದ್ಧಿಬಲ ಹಾಗು ಭಾವನಾಬಲ ಹೀಗೆ ಎರಡು ಬಲಗಳಿರುತ್ತವೆ. ಅವನಿಗೆ ಜ್ಞಾನವುಂಟಾಗುವದು ಆತನ ಬುದ್ಧಿ ಬಲದಿಂದಲೇ. ಗಿಡದಿಂದ ಬಿದ್ದ ಹಣ್ಣಿನ ಕಾರ್ಯ-ಕಾರಣ ಶಕ್ತಿಯ ವಿವರಣೆಯನ್ನು ಮಾಡುವಾಗ ಗುರುತ್ವಾಕರ್ಷಣವೇ ಮುಖ್ಯವಾದುದೆಂದು ಕಾಣುವದು ಆ ಬುದ್ಧಿಯ ಬಲ. ಪ್ರಪಂಚದಲ್ಲಿ ಜರುಗುವ ಘಟನೆಗಳನ್ನು ಕಾರ್ಯಕಾರಣ

ಭಾವದಿಂದ ಕಂಡು ಅವನ್ನು ವಿವರಿಸುವಲ್ಲಿ ವಿಜ್ಞಾನ ದೃಷ್ಟಿಯನ್ನೇ ಬಳಸುತ್ತೇವೆ. ಸಾಹಿತ್ಯ ದೃಷ್ಟಿಯಿಂದ ಹೇಳುವ ಮಾತು ಇದಕ್ಕೆ ವ್ಯತಿರಿಕ್ತವಾಗಿರುತ್ತದೆ. ಗಿಡಕ್ಕೆ ಹೂ ಬಿಟ್ಟಿತು, ಕಾಯಿಯಾಯಿತು, ಹಣ್ಣಾಯಿತು; ಹಣ್ಣು ಮಾಗಿ ತೊಟ್ಟು ಬಿಟ್ಟು ಕಳಚಿ ಬಿದ್ದಿತು ಎಂದು ವಿವರಿಸಿ ಹೇಳುವುದಕ್ಕೂ ಮತ್ತು ಅದು ಕಳಚಿ ಕೆಳಗೇ ಏಕೆ ಬಿದ್ದಿತು, ಮೇಲಕ್ಕೆ ಏಕೆ ಜಿಗಿಯಲಿಲ್ಲ ಎಂಬುದನ್ನು ವಿಚಾರಿಸಿ ಕಾರ್ಯ-ಕಾರಣ ಸಂಬಂಧದಿಂದ ಹಣ್ಣಿನ ಬೀಳುವಿಕೆಯನ್ನು ಗುರುತ್ವಾಕರ್ಷಣ ಸಿದ್ಧಾಂತದಿಂದ ವಿವರಿಸಿ ಹೇಳುವುದಕ್ಕೂ ಅಂತರವುಂಟು. ಆದರೆ ಎಲ್ಲ ಜ್ಞಾನವು ಬುದ್ಧಿಯ ಬಲದಿಂದಲೇ ಆಗುವದಿಲ್ಲ, ಎಷ್ಟೋ ಸಂಗತಿಗಳ ತಿಳಿವಳಿಕೆಯು ಅಂತಃಸ್ಫುರಣೆಯಿಂದಲೂ ಆಗುತ್ತದೆ. ಆದರೆ ಬುದ್ಧಿಯ ಬಲದ ಚೌಕಟ್ಟಿನಲ್ಲಿ ಇದನ್ನು ಹೇಳಲಿಕ್ಕೆ ಪ್ರಯತ್ನಿಸುತ್ತೇವೆ ಅಷ್ಟೆ! ಈ ತರ್ಕಾತ್ಮಕ ಬುದ್ಧಿ ಎಲ್ಲ-ರಲ್ಲಿಯೂ ಬೆಳೆದಿರಲಿಕ್ಕಿಲ್ಲ. ಆದರೆ ಭಾವನಾಬಲವು ಮಾತ್ರ ಹೆಣ್ಣುಮಕ್ಕಳಲ್ಲಿ ಸಣ್ಣಮಕ್ಕಳಲ್ಲಿ ಎಲ್ಲರಲ್ಲಿ ಒಂದಿಲ್ಲ ಒಂದು ರೀತಿಯಿಂದ ವ್ಯಕ್ತವಾಗುವದು. ಸೂರ್ಯೋದಯವನ್ನು ನಾವು ಎಲ್ಲರೂ ನಿತ್ಯ ನೋಡುತ್ತಿರುತ್ತೇವೆ. ಅವನು ನಿತ್ಯ ಮೂಡುವದಕ್ಕೂ ನಾವು ನಿತ್ಯ ನೋಡುವದಕ್ಕೂ ಸಂಬಂಧವಿಲ್ಲ; ನಿನ್ನೆ ಮೂಡಿ, ಇಂದು ಮೂಡಿದ ಅವನು ನಾಳೆಯೂ ಮೂಡುತ್ತಾನೆ ಎಂಬ ಅನುಮಾನದಿಂದ ಅವನ ಮೂಡುವಿಕೆಯನ್ನು ವಿವರಿಸುವದುಂಟು. ಈ ವಿವ-ರಣೆಯ ಮೂಲದಲ್ಲಿ ಒಂದು ಶ್ರದ್ಧಾ ಬಲವಿದೆ; ನಂಬಿಗೆ, ನಿಷ್ಠೆ, ಭಕ್ತಿ ಇವು ಶ್ರದ್ಧೆಯ ವಿವಿಧ ಸ್ವರೂಪಗಳು!

ಭಾವನಾಬಲದ ದ್ಯೋತಕವಾದ ಭಕ್ತಿಯಲ್ಲಿ ನಾನಾ ಬಗೆಯಾದ ಪ್ರಭೇದ ಗಳಿರುತ್ತವೆ. ನವವಿಧ ಭಕ್ತಿಗಳಲ್ಲಿ ಅರ್ಪಣೆ ಇಲ್ಲವೆ ಸಮರ್ಪಣೆ ಕೊನೆಯ-ದಾಗಿದೆ. ಶಂಕರಾಚಾರ್ಯರು ಮೋಕ್ಷವನ್ನು ಪಡೆಯಲಿಕ್ಕೆ ಬೇಕಾಗುವ ಸಾಧನಗಳಲ್ಲಿ ಭಕ್ತಿಗೆ ಅಗ್ರಸ್ಥಾನವಿದೆಯೆಂದು ಹೇಳುತ್ತಾರೆ. ಅವರು ತಿಳಿಸುವ ಭಕ್ತಿಯ ಒಲವು ಒಂದಿಷ್ಟು ಅದ್ವೈತಪರವಾಗಿದೆ. 'ಭಕ್ತಿ' ಶಬ್ದದ ನಿರ್ವಚನೆ ಯಲ್ಲಿ ಅದಕ್ಕೆ ವಿಂಗಡಿಕೆ ಮತ್ತು ಭಜನೆ ಎಂದು ಇತ್ತೆರನಾದ ಅರ್ಥವುಂಟು. ಭಜ್ ಧಾತುವಿಗೆ ವಿಂಗಡಿಸು, ಬೇರ್ಪಡಿಸು, ಮತ್ತು ಆಶ್ರಯಿಸು, ಭಜಿಸು ಎಂದು ಅರ್ಥವಿದೆ. ಏನನ್ನು ವಿಂಗಡಿಸಬೇಕು ಯಾರನ್ನು ಆಶ್ರಯಿಸಬೇಕು ಎಂಬ ಸಂಗತಿಗಳು ಬಹಳ ಪ್ರಾಮುಖ್ಯವಾದವುಗಳು. ಮಾನವನ ಚಿತ್ತ ಮನ ಬುದ್ಧಿ ಅಹಂಕಾರಗಳು ಅನೇಕ ವಿಷಯಗಳಲ್ಲಿ ತೊಡಕು ತೊಡಕಾಗಿ ಸೇರಿ

ಕೊಂಡಿರುತ್ತವೆ. ಇವನ್ನು ಬಿಡಿಸಿಕೊಳ್ಳಬೇಕು. ನಾನು ನನ್ನದೆನ್ನುವ ಅಂತಃ ಕರಣದ ವ್ಯಾಪ್ತಿಯಿಂದ ಬಿಡುಗಡೆಯನ್ನು ಪಡೆದ ಹೊರತು, ಹಲವು ರೀತಿ-ಯಿಂದ ವಿಷಯಗಳನ್ನು ಚಿಂತಿಸುವ ಅಂತಃಕರಣವನ್ನು ಬಿಡಿಸಿಕೊಂಡ ಹೊರತು ಪ್ರಭುವಿನ ಕಾರುಣ್ಯವನ್ನು ಹೊಂದುವ ಶಕ್ಯತೆಯಿಲ್ಲ, ಚಿತ್ಪ್ರಭಾಚೈತನ್ಯ-ಯುತ ದೇವಾಧಿದೇವನೇ ಎಲ್ಲರಿಗೂ ಎಲ್ಲದಕ್ಕೂ ಆಶ್ರಯಸ್ಥಾನವು. ಆದ್ದರಿಂದ ಅವನನ್ನು ಭಜಿಸಬೇಕು; ಅವನನ್ನು ಸೇರಬೇಕು. ಒಂದರಿಂದ ಬಿಡುಗಡೆ-ಯನ್ನು ಪಡೆದ ಬಳಿಕ ಇನ್ನೊಂದನ್ನು ಸೇರಬೇಕಲ್ಲವೆ? ಅನಿತ್ಯವಾದವುಗಳಿಂದ ಬಿಡುಗಡೆಯನ್ನು ಹೊಂದಿ ನಿತ್ಯವಾದ ಪರವಸ್ತುವನ್ನು ಬೆರೆಯಬೇಕು ಎಂಬುದು 'ಭಕ್ತಿ' ಪದದಲ್ಲಿರುವ ಅರ್ಥಗಾಂಭೀರ್ಯವು.

ಯೋಗದೃಷ್ಟಿಯಿಂದ ತಿಳಿಸುವುದಾದರೆ ಮಾನವನ ದೇಹದಲ್ಲಿ ಸಪ್ತಚಕ್ರ ಗಳುಂಟು. ಇವುಗಳಲ್ಲಿ ಅನಾಹತ ಚಕ್ರವು ಹೃದಯ ಮಧ್ಯದಲ್ಲಿ ಉಂಟು. ಇದಕ್ಕೆ ಕೆಳಗೆ ಆಧಾರ, ಸ್ವಾಧಿಷ್ಠಾನ, ಮಣಿಪೂರಕ ಎಂಬ ಮೂರು ಚಕ್ರ-ಗಳೂ ಇದರ ಮೇಲೆ ವಿಶುದ್ಧಿ, ಆಜ್ಞಾ, ಸಹಸ್ರಾರ ಎಂಬ ಮೂರು ಚಕ್ರಗಳೂ ಇರುತ್ತವೆ. ಪುರುಷ ಪ್ರಯತ್ನದ ಪರಿಣಾಮವಾಗಿ ಭಕ್ತಿಯು ಆಧಾರದಿಂದ ಮೇಲೆ ಮೇಲೆ ಏರಿದಂತೆ ಪ್ರಭುಶಕ್ತಿಯು ಸಹಸ್ರಾರದಿಂದ ಕೆಳಗಿಳಿದು ಬರುತ್ತದೆ. ಅನಾಹತದಲ್ಲಿ ಅವೆರಡೂ ಕೂಡುತ್ತವೆ. ಪುರುಷ ಪ್ರಯತ್ನವು ಕೆಳಗನಿಂದ ಏರುವುದಕ್ಕೆ ಭಕ್ತಿಯೆಂದೂ ಪ್ರಭುಶಕ್ತಿಯು ಮೇಲಿನಿಂದ ಇಳಿಯುವುದಕ್ಕೆ ಶಕ್ತಿ-ಯೆಂದೂ ಭಕ್ತಿ–ಶಕ್ತಿಗಳು ಒಂದಾಗುವುದಕ್ಕೆ ಮುಕ್ತಿಯೆಂದೂ, ಅದೇ ಕೂಡಲ ಸಂಗಮನೆಂದೂ ವಿವರಿಸಲಾಗುತ್ತದೆ. ಈ ಅನುಭವವನ್ನು ಮಾನವನು ತಿಳಿ ದಾಗಲಿ ತಿಳಿಯದಾಗಲಿ ನಿತ್ಯ ಅನುಭವಿಸುತ್ತಲೇ ಇರುತ್ತಾನೆ. ಈ ಭಕ್ತಿ ಅದಾವ ರೀತಿಯಲ್ಲಿ ಏರುವದು? ಈ ಶಕ್ತಿ ಅದಾವ ರೀತಿಯಲ್ಲಿ ಇಳಿಯುವದು? ಬಾವಿಯಲ್ಲಿ ಒಂದು ಕೊಡವು ಡಬ್ಬುಬಿದ್ದಿದೆ ಎಂದುಕೊಳ್ಳಿರಿ. ಆಗ ಅದು ತುಸು ಓರೆಯಾಗಿ ಒಳಗಿನ ಹವೆ ತೆರವಾದ ಹೊರತು ಬಾವಿಯಲ್ಲಿಯ ನೀರು ತುಂಬದು. ಹಾಗೆಯೇ ದೇಹವು ಒಂದು ಕೊಡ, ಘಟ; ಸಂಸಾರಸಾಗರದಲ್ಲಿ ಬಿದ್ದ ಈ ಘಟ ದಲ್ಲಿ ಅನೇಕ ವಾಸನಾರೂಪವಾದ ಹವೆ ತುಂಬಿಕೊಂಡಿರುತ್ತದೆ. ಈ ವಾಸನೆ-ಗಳು ಅಳಿದ ಹೊರತು ಅಂದರೆ ಹೃದಯವು ನಿರ್ಮಲವಾದ ಹೊರತು ಪ್ರಭು ಶಕ್ತಿಯು ಇಳಿದು ಬಂದು ತೆರವಾದುದನ್ನು ತುಂಬಿಕೊಳ್ಳುವದಿಲ್ಲ.

ತೆರೆದಿಡುವ ಹಾಗು ತುಂಬಿಕೊಳ್ಳುವ ಈ ವಿಧಾನವಲ್ಲಿ ಜೀವ ದೇವರಲ್ಲಿ ಅನನ್ಯವಾದ ಭಾವದ ಹೊಂದಾಣಿಕೆಯನ್ನು ಕಂಡುಕೊಳ್ಳಬಹುದಾಗಿದೆ. (In essence the lives of God and man are one. They are different in appearance but identical in reality). ದೇವ ಜೀವನ ಮತ್ತು ಮಾನವ ಜೀವನ ಇವು ಮೂಲತಃ ಒಂದೇ ಆಗಿವೆ. ನಮ್ಮ ನಿಮ್ಮ ಜೀವನದಲ್ಲಿ ಈ ಹೊಂದಾಣಿಕೆಯನ್ನು ಅಂಗವಿಸಿಕೊಳ್ಳುವದು ಒಂದು ಬಹು ಮಹತ್ತರವಾದ ಸತ್ಯವಾಗಿದೆ, ಇದುವೆ ಅನುಭಾವ. ದಿವ್ಯ ಜೀವನದಿಂದ ಹೊರಹೊಮ್ಮುವ ಅನುಭಾವದಿಂದ ದೇವಜೀವನ-ಮಾನವ ಜೀವನ ಎಂಬ ವಿಂಗಡಿಕೆಯೇ ಉಳಿಯುವದಿಲ್ಲ. ಇಂತಹ ದಿವ್ಯ ಜೀವನವನ್ನು ಪಡೆದು ಅದರಿಂದ ಅನುಭವವನ್ನು ಅಳವಡಿಸಿಕೊಂಡ ಅನುಭಾವಿಗಳಿಗೆ ಯೋಗಿಗಳು, ಸಿದ್ಧರು. ಸಾಧುಪುರುಷರು, ಸಂತರು, ಶರಣರು, ಜಂಗಮರು, ಶಿವಯೋಗಿಗಳು, ಅಪರೋಕ್ಷಜ್ಞಾನಿಗಳು, Adepts, Supermen ಎಂದು ಹೆಸರು. ಅನುಭವ ಶಾಸ್ತ್ರವು ಕಲಿಸುವದು ಈ ಮಹಾಂತರು ಪಡೆದ ಅನುಭವವನ್ನು, ತೆರೆದಿಡುವ ಕಾರ್ಯ ನಮ್ಮದು, ತುಂಬುವ ಕಾರ್ಯ ಅವನದು ಎಂಬ ಗೂಢವನ್ನು !

ದಿವ್ಯಶಕ್ತಿಯೆಂಬುದಿದೆಯೆ ? ಈ ದಿವ್ಯಶಕ್ತಿಯಿಂದೊಡಗೂಡಿದ ಪ್ರಭುವೊಬ್ಬನು ಇದ್ದಾನೆಯೇ ಎಂಬ ಪ್ರಶ್ನೆಗಳಿಗೆ ಎರಡು ಉತ್ತರಗಳೇ ಇಲ್ಲ; ಇದೆ, ಇದ್ದಾನೆ ಎಂಬ ನಿರ್ಧಾರವೇ ಆ ಅನುಭಾವಿಗಳ ಉಸಿರು. ಅವನನ್ನು ಕಾಣಬೇಕಾದರೆ ಮಾನವನಿಗೆ ನಿರ್ಮಲ ಮತಿಯು ಮಾತ್ರ ಬೇಕು. ದೇವನಿಗೆ ಎರಡು ಸ್ವರೂಪಗಳೆಂದು ತಿಳಿಸುವರು ಸಗುಣ ನಿರ್ಗುಣ ಎಂದು. ನಿರ್ಗುಣ ಎಂದರೇನು ? ಪ್ರಕೃತಿಯಲ್ಲಿ ಕಂಡುಬರುವ ಹೇಯಗುಣಗಳು ದೇವನಲ್ಲಿಲ್ಲ. 'ನಿರ್' ಎಂದರೆ ಅಭಾವ. ಈ ಅರ್ಥದಲ್ಲಿ ಅವನು ನಿರ್ಗುಣನು. ಸಗುಣ ಎಂದರೆ ಮಲತ್ರಯಗಳಿಂದ ದೂರವಾಗಿದ್ದುಕೊಂಡು ಅನೇಕ ಸದ್ಗುಣಗಳಿಗೆ ಕಣಿಯಾಗಿರುವದು. ಸತ್ಯ, ಸೌಂದರ್ಯ, ಅಹಿಂಸೆ, ಕ್ಷಮೆ, ದಯೆ, ಶಾಂತಿ, ಜ್ಞಾನ ಈ ಎಲ್ಲ ಒಳ್ಳೆ ಗುಣಗಳು ದೇವನಲ್ಲಿ ಉಂಟು. ಏಕಕಾಲಕ್ಕೆ ಇವೆಲ್ಲವನ್ನು ಆಕಲನ ಮಾಡುವದು ಮಾನವ ಬುದ್ಧಿ ಭಾವನೆ ಅನುಭಾವಗಳಿಗೆ ಸಾಧ್ಯವಿಲ್ಲ. ಆದರೆ ಸಾಧನೆಯ ಕಾಲಕ್ಕೆ ಒಂದೊಂದೇ ಗುಣವನ್ನು ಅರಿತುಕೊಂಡು ಅಲ್ಲಿ

ದೇವನ ಅಪಾರವಾದ ನಿಲವನ್ನು ತಿಳಿದು ಅದರ ಅನುಭವವನ್ನು ಅಳವಡಿಸಿ-ಕೊಳ್ಳಬೇಕಾಗುವದು. ವಿಜ್ಞಾನಿಯು ಸತ್ಯವನ್ನು ಹುಡುಕುವುದರಲ್ಲಿ, ಕವಿ ಕಲಾವಿದ ಸಾಹಿತಿ ಇವರು ಸೌಂದರ್ಯೋಪಾಸನೆ ಮಾಡುವಲ್ಲಿ, ತಾಂತ್ರಿಕರು ಶಕ್ತಿಯ ಮುಖಾಂತರವಾಗಿ ಆಯಾ ಗುಣಗಳನ್ನು ಪಡೆವಲ್ಲಿ ಆ ದಿವ್ಯಗುಣ ಸಂಪಾದನೆಯ ಪ್ರಯತ್ನವನ್ನು ಕಾಣುತ್ತೇವೆ. ಕೆಲವರು ಅವನನ್ನು ಜ್ಞಾನ ಸ್ವರೂಪದಲ್ಲಿ ಕಾಣುತ್ತಾರೆ; ಇವರೇ ಜ್ಞಾನಮಾರ್ಗಿಗಳು. ಇನ್ನೂ ಕೆಲವರು ಪ್ರೇಮಸ್ವರೂಪದಲ್ಲಿ ಕಾಣುತ್ತಾರೆ, ಇವರು ಭಕ್ತಿಪಂಥದವರು.

ಪ್ರೇಮರೂಪದಲ್ಲಿ ಅವನನ್ನು ಕಾಣುವ ಮಾರ್ಗವೇ ಅನುಭವ ಮಾರ್ಗ, ಅದು ಭಕ್ತಿಮಾರ್ಗ; ಅಂಥ ಅವರು ಅನುಭಾವಿಗಳು. ಅವರು ಯಾವುದೇ ದೇಶದಲ್ಲಿರಲಿ ಅವರ ಗುರಿ ದೇವನನ್ನು ಪ್ರೇಮ ಸ್ವರೂಪದಲ್ಲಿ ಕಾಣುವದು. He who knoweth God they are begotten of God ಎಂದು ಬಾಯಬಲ್ ತಿಳಿಸುತ್ತದೆ. ಪ್ರೇಮವೆಂಬುದೇ ಸ್ವರ್ಗ, ಅದರ ಅಭಾವವೇ ನರಕ. ಸ್ವರ್ಗ ನರಕಗಳೆಂಬವು ಇನ್ನು ಬೇರೆಯಿಲ್ಲ. ಈ ಸೃಷ್ಟಿಯು ಪರಮಾತ್ಮನ ಅಂತಃಕರಣದಿಂದ ಉಕ್ಕಿಉಕ್ಕಿ ಹೊರಹೊಮ್ಮಿದುದು, ಅವನಿಂದ ಒಕ್ಕುಮಿಕ್ಕದು; ಅವನು ಉಂಡು ಉಗುಳಿದ ಇದು ಮಾನವನಿಗೆ ಪ್ರಸಾದರೂಪವಾಗಿ ದೊರೆತಿದೆ ಅವನಿಂದ. ಇದು ಅನುಪಮುಯುವಾಗಿದೆ. ಸ್ವರ್ಗವೆಲ್ಲಿದೆ ಎಂದು ಕೇಳಿದಾಗ ನಾವು ಕೈಯನ್ನು ಮೇಲೆ ಮಾಡಿ ತೋರಿಸುತ್ತೇವೆ. ಗತಿ ಉನ್ನತವಾದರೆ, ಊರ್ಧ್ವಗತಿಯು ನಮ್ಮದಾದರೆ ಅದುವೆ ಸ್ವರ್ಗ. ಅದಕ್ಕೆ ಪ್ರತಿಯಾಗಿ ಕೀಳು ಗತಿಯಲ್ಲಿ ನಡೆದರೆ ಅದುವೆ ನರಕ. ಊರ್ಧ್ವಮುಖವಾದ ಪ್ರವೃತ್ತಿಯೇ ಸ್ವರ್ಗ. ಅಧೋಮುಖವಾದ ಪ್ರವೃತ್ತಿಯೇ ನರಕ. ದೇವನಿಂದ ಪ್ರಸಾದರೂಪವಾಗಿ ದೊರೆತ ಈ ಸೃಷ್ಟಿಯು ಆತನ ಪ್ರೇಮದ ಪ್ರತೀಕವಾಗಿದೆ. ಪರಸ್ಪರ ಎಳೆತ ಸೆಳೆತದಿಂದ ಆಕರ್ಷಣದಿಂದ ಕೂಡಿದ ಈ ಸೃಷ್ಟಿಯನ್ನು ಭೂಗೋಲದಿಂದ ಖಗೋಲದ ವರೆಗೆ ನೋಡಿದರೂ ಪ್ರೇಮ ಸ್ವರೂಪವಾಗಿದೆ.

ಬಾಯ್‌ಬಲ್ಲಿನಲ್ಲಿ ನಿನ್ನಂತೆ ನಿನ್ನ ನೆರೆಹೊರೆಯವರನ್ನು ಪ್ರೀತಿಸು; (Love thy naighbours as thyself) ಎಂದು ಹೇಳಿದೆ. ಒಬ್ಬರನ್ನೊಬ್ಬರು ಏಕೆ ಪ್ರೀತಿಸಬೇಕು? ಈ ಪ್ರಶ್ನೆಗೆ ಬಾಯಬಲ್ಲಿನಲ್ಲಿ ಉತ್ತರವಿಲ್ಲ ಎಂದು ತಿಳಿಸಿ **ಜರ್ಮನ್ ತತ್ವಜ್ಞಾನಿಯಾದ ಪಾಲ ಡಾಯಸನ್ನನು ಇದಕ್ಕೆ ಭಾರತೀಯ**

ತತ್ವ ತತ್ವಶಾಸ್ತ್ರವು ಉತ್ತರಗುಡುತ್ತದೆಂದು ಒಪ್ಪಿಕೊಂಡಿದ್ದಾನೆ. ಗತಿಯು (Motion) ವರ್ತುಲಾಕಾರವಾಗಿದೆ. ಯಾವ ಸ್ಥಾನದಿಂದ ಗತಿಯು ಪ್ರಾರಂಭವಾಗುತ್ತದೆಯೋ ಅದು ಪುನಃ ತನ್ನ ಸ್ಥಾನಕ್ಕೆ ಬರುವದು. ಒಮ್ಮೆ ನಾನು ಪ್ರೀತಿಸಿದೆನಾದರೆ ಚಾಲನೆಹೊಂದಿದ ಆ ಪ್ರೀತಿಯು ತಿರುಗಿ ನನ್ನೆಡೆಗೇ ಬರುವದು. ಎರಡನೆಯವರನ್ನು ಪ್ರೀತಿಸುವ ಇಲ್ಲವೆ ದ್ವೇಷಿಸುವ ಕಾರ್ಯದಲ್ಲಿ ನಾನು ನನ್ನನ್ನು ಪ್ರೀತಿಸುತ್ತೇನೆ ಇಲ್ಲವೆ ದ್ವೇಷಿಸುತ್ತೇನೆ, Heart is common to all and God seated in the heart is one; ಎಂದರೆ ಪ್ರೇಮ ಹೃದಯವು ಪ್ರಾಣಮಾತ್ರರಿಗೆಲ್ಲ ಇರುತ್ತದೆ. ದೇವನು ಆ ಹೃದಯದಲ್ಲಿ ಪ್ರೇಮರೂಪನಿಂದ ವಾಸಿಸುತ್ತಾನೆ. ಅಷ್ಟೇ ಏಕೆ? ಸುತ್ತೆಲ್ಲ ಕಾಣುವದು, ಸಚರಾಚರ ಸೃಷ್ಟಿಯೆಲ್ಲ ತನ್ನ ಸ್ವರೂಪವೇ ಆಗಿದೆ. ಆದ್ದರಿಂದ ಅನ್ಯರನ್ನು ಪ್ರೀತಿಸಿದರೆ ತನ್ನನ್ನು ಪ್ರೀತಿಸಿದಂತೆಯೇ! ಅದರಂತೆ ಅನ್ಯರನ್ನು ದ್ವೇಷಿಸಿದರೆ ತನ್ನನ್ನು ದ್ವೇಷಿಸಿದಂತೆಯೇ! ಭಾರತೀಯ ತತ್ವ ಶಾಸ್ತ್ರದಲ್ಲಿರುವ ಈ ವಿಚಾರಧಾರೆಯನ್ನು ಡಾಯಸ್ಸನನು ಮುಕ್ತಕಂಠವಾಗಿ ಹೊಗಳಿದ್ದಾನೆ.

ಭಕ್ತಿಯ ಸ್ವರೂಪವನ್ನು ಬಹು ಮನೋಹರವಾಗಿ ವಿವರಿಸುವ ೧೨ನೆಯ ಶತಮಾನದಲ್ಲಿ ರಚಿತವಾಗಿರಬಹುದಾದ ನಾರದ ಭಕ್ತಿಸೂತ್ರವು ೮೦ ಸೂತ್ರಗಳುಳ್ಳ ಒಂದು ಚಿಕ್ಕ ಗ್ರಂಥ. ಅದರಲ್ಲಿ ಭಕ್ತಿಯನ್ನು ಕುರಿತು 'ಸಾ ತ್ವಸ್ಮಿನ್ ಪರಮ ಪ್ರೇಮರೂಪಾ. ಸಾ ಅಮೃತರೂಪಾ ಚ,' ಎಂದರೆ ಭಕ್ತಿಯು ನಿರ್ಮಲವಾದ ಪ್ರೇಮವೇ ಆಗಿಧೆ; ಅದು ಅಮೃತ ಸ್ವರೂಪವಾಗಿದೆ— ಎಂದು ಹೇಳಲಾಗಿದೆ. ಪುರಾಣಗಳಲ್ಲಿ ಅಮೃತ ಮಂಥನದ ಕಥೆಯು ಬರುತ್ತದಷ್ಟೆ! ಇದೂ ಸಹ ಪ್ರೇಮ ದ್ವೇಷಗಳ ವೃತ್ತಾಂತವನ್ನೇ ನಿರೂಪಿಸುತ್ತದೆ. ನಮ್ಮ ಮನಸ್ಸು ಅಪಾರವಾದ ಆಳವಾದ ಸಮುದ್ರವಿದ್ದ ಹಾಗೆ; ನೀರಿನಂತೆ ಯಾವಾಗಲು ಕೆಳಗೆ ಹರಿಯುವದು ಮನಸ್ಸಿನ ಧರ್ಮವಾಗಿದೆ. ಯಾವ ವಿಷಯವನ್ನು ಕುರಿತು ಮನಸ್ಸು ಚಿಂತಿಸುತ್ತಿದೆಯೋ ಆ ವಿಷಯದ ಸ್ವರೂಪವನ್ನೇ ಅದು ತಾಳುತ್ತದೆ. ಇದರಂತೆ ಆ ಮನಸ್ಸಿನಲ್ಲಿ ಅನೇಕಾನೇಕ ಪ್ರವೃತ್ತಿಗಳು ಸೇರಿಕೊಂಡಿರುತ್ತವೆ, ಸಮುದ್ರದಲ್ಲಿ ನಾನಾ ಬಗೆಯ ಪ್ರಾಣಿಗಳು ಸೇರಿಕೊಂಡಿರುವಂತೆ. ಇವುಗಳಲ್ಲಿ ಕೆಲವು ಶಿಷ್ಟವಾದ ಪ್ರವೃತ್ತಿಗಳು ಕೆಲವು ದುಷ್ಟವಾದ ಪ್ರವೃತ್ತಿಗಳು. ಪ್ರೇಮವು ಸತ್ಪ್ರವೃತ್ತಿಗಳನ್ನು ಪ್ರತಿನಿಧಿಸುತ್ತದೆ; ಹಾಗೆಯೇ ದ್ವೇಷವು ದುಷ್ಪ್ರವೃತ್ತಿಗಳನ್ನು

ಪ್ರತಿನಿಧಿಸುತ್ತದೆ. ಸದ್ಭಾವಗಳಿದ್ದ ಪ್ರೇಮಮೂರ್ತಿಗಳಿಗೆ ದ್ವೇಷವು ಏನನ್ನೂ ಮಾಡಲಾರದು. ದ್ವೇಷ ಅಸೂಯೆ ಇತ್ಯಾದಿಗಳು ಮಾನವನ ದೇಹದ ಮೇಲೆ ಬಹು ದೊಡ್ಡ ಕೆಡಕು ಪರಿಣಾಮವನ್ನುಂಟು ಮಾಡುತ್ತವೆ. ಈ ಗುಣ ಗಳು ಮಾನವನ ಮನದಲ್ಲಿ ತಾಂಡವವನಾಡುವಾಗ ರಕ್ತ ವಿಷಮಯವಾಗುತ್ತದೆ. 'ಕೋಪ-ತಾಪಗಳಿಂದ ಸತ್ಯಜ್ಞಾನ ನಾಶ'ವೆಂದು ಅನುಭಾವಿಗಳ ಅಮೃತವಾಣಿ. 'ತನುವಿನ ಕೋಪ ತನ್ನ ಹಿರಿಯತನದ ಕೇಡು, ಮನದ ಕೋಪ ತನ್ನ ಅರಿವಿನ ಕೇಡು' ಎಂದು ಅಣ್ಣ ಬಸವಣ್ಣನ ಅನುಭವದ ವಾಣಿ. ತಾಳ್ಮೆಯಿರದಿದ್ದರೆ ಹಿರಿಯತನಕ್ಕೆ ಕೊರತೆ. ಮನಸ್ಸಿನಲ್ಲಿ ಆ ಸಿಟ್ಟನ್ನು ನುಂಗಿಕೊಂಡರೆ ಅದುವೆ ತಾಪವೆನಿಸಿಕೊಂಡು (ಯಾಕಂದರೆ ಅದು ಅಂತಃಕರಣವನ್ನೇ ಸುಡುತ್ತಿದೆ.) ಅಂತರಂಗದ ಜ್ಞಾನಕ್ಕೆ ಹಾನಿಯನ್ನು ಒಡ್ಡುತ್ತದೆ. ಅದಕ್ಕಾಗಿ ಶಾಂತಿ-ತಾಳ್ಮೆಗಳು ಪ್ರೇಮದ ತಳಹದಿಯಾಗಬೇಕು. ಆನಂದ ಅಮೃತಗಳ ಹೊನಲು ಉಕ್ಕಬೇಕು, ಹೊರಸೂಸಬೇಕು. ಪ್ರೇಮಕ್ಕೆ ಪ್ರೇಮವೇ ಪ್ರತಿಫಲ. ಆ ಪ್ರೇಮಕ್ಕೆ ಭಯವೆಂಬುದು ಗೊತ್ತಿಲ್ಲ. ಅಂಥ ಪ್ರೇಮವೇ ನಿಜವಾದ ಪ್ರೇಮ. ಪರಮಾತ್ಮನ ಸ್ವರೂಪವನ್ನು ಈ ಪ್ರೇಮದಲ್ಲಲ್ಲದೆ ಬೇರೆಡೆಗೆ ಹುಡುಕುವದೆಲ್ಲಿ? Be good and do good ಒಳ್ಳೆಯವರಾಗಿರುವದು, ಒಳ್ಳೆಯದನ್ನು ಮಾಡುವದು, ನಿಜವಾದ ಅನುಭಾವಿಗಳ ಜೀವನದ ಗುಟ್ಟು.

ವೀರಶೈವರಲ್ಲಿ ಸ್ಥಾವರ ಮತ್ತು ಜಂಗಮ ಎಂಬ ಎರಡು ಪದಗಳು ಬಹು ಮಹತ್ವವನ್ನು ಪಡೆದಿವೆ. ಪ್ರೇಮದ ವಿವೇಚನೆಯಿಂದ ಭಕ್ತಿಯ ಈ ದ್ವಿವಿಧ ಸ್ವರೂಪವನ್ನು ಗುರುತಿಸಬಹುದಾಗಿದೆ. ಗುಡಿ–ಗುಂಡಾರಗಳಲ್ಲಿ ಪ್ರತೀಕಗಳನ್ನಿಟ್ಟು ಪೂಜಿಸುವದು ಸ್ಥಾವರ ಪೂಜೆ. 'ಪ್ರತಿ + ಇಕ' ಎಂದರೆ ತನ್ನ ಕಡೆಗೆ ಒಲಿದ ಭಾಗವನ್ನು ಪೂಜಿಸುವದು ಅಚೇತನ ಪದಾರ್ಥದ ಪೂಜೆಯಾಗಿದೆ. ವೀರಶೈವರ ಜಂಗಮ ಭಕ್ತಿಯ ವೈಶಿಷ್ಟ್ಯವು ಇನ್ನೆಲ್ಲಿಯೂ ಕಾಣದು. ಇದು ಸಚೇತನ ವ್ಯಕ್ತಿಯ ಪೂಜೆಯಾಗಿದೆ. ಹಿಂದೂ ದೇವತೆಗಳಲ್ಲಿ ಶಿವಪಂಚಾಯತನದ ಪೂಜೆಯು ಪೌರಾಣಿಕ ಕಾಲದಿಂದ ರೂಢವಾಗಿದೆ. ಈ ಪೂಜಾಕ್ರಮವು ಕೇವಲ ಪೌರಾಣಿಕ ಕಲ್ಪನೆ. ವೀರಶೈವರ ಜಂಗಮ ಪೂಜೆಯು ಪ್ರತ್ಯಕ್ಷ ಕಲ್ಪನೆಯಾಗಿದೆ. ಜಂಗಮ ಪದವು 'ಗಮ್–ಜ್ಞಾನೆ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಜಂಗಮ ಪದಕ್ಕೆ ತ್ವರಿತಜ್ಞಾನ ಸ್ಫುರಣಾತ್ಮಕಜ್ಞಾನ ಎಂಬ ಅರ್ಥಸಂಪತ್ತಿ ಯಿದೆ. ಅಂಶತಃ ಆದರೂ ಸರಿಯೇ ಇಂಥ ಜ್ಞಾನವನ್ನು ಪಡೆದ, ಪರವಸ್ತುವಿನ

ಸಾಕ್ಷಾತ್ಕಾರ ಪಡೆದ ವ್ಯಕ್ತಿಗೆ ಜಂಗಮ ಎಂದು ಹೆಸರು ರೂಢವಾಗಿದೆ. (He has a dynamic knowledge) ಜಂಗಮನು ಶರಣ, ಅಪರೋಕ್ಷಜ್ಞಾನಿ, ಅತಿಮಾನವ. ಲಾಂಛನಗಳನ್ನು ಧರಿಸಿರುವ ಮಾತ್ರದಿಂದ ಮಾನವನು ಜಂಗಮನಾಗಲಾರ. ಜೈನರಲ್ಲಿ ಸಿದ್ಧರೂ ಅಪರೋಕ್ಷಜ್ಞಾನಿಗಳೇ! ಅವರು ದೇವನ ನಿಲವನ್ನು ಕಂಡವರು, ಅಳವಡಿಸಿಕೊಂಡವರು.

ಜಂಗಮದ ಈ ಪ್ರತ್ಯಕ್ಷ ಕಲ್ಪನೆಗೆ ಭಾರತೀಯ ಸಂಸ್ಕೃತಿಯ ಹಿನ್ನೆಲೆ-ಯಿರುತ್ತದೆ. ಉಪನಿಷತ್ತಿನ ಋಷಿಯು ಶಿಷ್ಯರಿಗೆ ಮಾತೃದೇವೋ ಭವ, ಪಿತೃ-ದೇವೋ ಭವ, ಅತಿಥಿದೇವೋ ಭವ,ಆಚಾರ್ಯದೇವೋ ಭವ,ಗುರುದೇವೋ ಭವ, ಎಂದು ಉಪದೇಶಿಸುತ್ತಿದ್ದುದುಂಟು. ತಾಯಿ ತಂದೆ ಅತಿಥಿ ಆಚಾರ್ಯ ಗುರು ಈ ಐದೂ ವ್ಯಕ್ತಿಗಳು ವೇದಕಾಲದ ಜನರಿಗೆ ಅಭಿವಂದ್ಯರು. ಜಂಗಮ ಪೂಜೆಯ ಮಹತ್ವವು ಪ್ರಾರಂಭವಾಗುವದು ವೇದಕಾಲದ ಈ ಪೂಜ್ಯಭಾವದ ಹಿನ್ನೆಲೆಯಿಂದ. ಕ್ರಮೇಣ ಏರ ಪಾವಟಿಗೆಗಳುಳ್ಳ ಜಂಗಮ ಭಕ್ತಿಯು ಮೊಟ್ಟ ಮೊದಲು ತಾಯಿಯಿಂದಲೇ ಪ್ರಾರಂಭವಾಗುವದು— Charity begins ta home—ಎಂಬ ಆಂಗ್ಲ ಉಕ್ತಿಯ ಸತ್ಯದಂತೆ. ಇಲ್ಲಿ ಒಂದು ಪ್ರಶ್ನೆ ಉದ್ಭವಿಸುತ್ತದೆ— ಯಾವನೊಬ್ಬನಿಗೆ ಅಧ್ಯಾತ್ಮದ ಹಸಿವೆಯುಂಟಾದಾಗ, ಆ ಹಸಿವೆಯ ಪೂರ್ತಿಗಾಗಿ ಹಂಬಲಿಸಿ ಹರಿದಾಡುತ್ತಿರುವಾಗ ಇದೇ ತಾಯಿ–ತಂದೆಗಳು ಅಡ್ಡಿ ಆತಂಕಗಳನ್ನು ಒಡ್ಡುವದುಂಟು. ಆಗ ಧರ್ಮ ಸಂಕಟವೇ ಎದುರಿಗೆ ಬಂದು ನಿಲ್ಲುವದು. ಇಂಥ ಪ್ರಸಂಗದಲ್ಲಿ ಅನುಸರಿಸಬೇಕಾದ ಪಥವಾವುದು? ಏನನ್ನು ಮಾಡಬೇಕು? ಮಾನವನಲ್ಲಿ ಪೂಜ್ಯಭಾವನೆ ಭಕ್ತಿ ಗೌರವಗಳ ಜೊತೆಗೆ ತಾರ-ತಮ್ಯ ಜ್ಞಾನವೂ ಮೊಳೆಯಬೇಕು. ವ್ಯಕ್ತಿಧರ್ಮಕ್ಕಿಂತ ಕೌಟುಂಬಿಕ ಧರ್ಮವೂ, ಕೌಟುಂಬಿಕ ಧರ್ಮಕ್ಕಿಂತ ರಾಷ್ಟ್ರಧರ್ಮವೂ ಉತ್ತರೋತ್ತರ ಶ್ರೇಷ್ಠವಾದದ್ದು. ಇಂಥ ಸಮಯದಲ್ಲಿ ಹೆಚ್ಚಿನ ಧ್ಯೇಯಕ್ಕಾಗಿ ಕಡಿಮೆ ಧ್ಯೇಯವನ್ನು ತ್ಯಾಗ ಮಾಡಬೇಕೆಂದು ರಾಷ್ಟ್ರಧರ್ಮವು ಹೇಳುತ್ತದೆ.

ಚಿಕ್ಕ ಜಪಾನು ೧೯೦೫ ರಲ್ಲಿ ವಿಶಾಲವಾದ ರಶಿಯವನ್ನು ಸೋಲಿಸಿ-ತಪ್ಪೇ! ಆಗ ನಡೆದ ಘಟನೆಯೊಂದನ್ನು ಸ್ವಾಮಿ ವಿವೇಕಾನಂದರು ತಮ್ಮ ಗ್ರಂಥದಲ್ಲಿ ಬರೆದಿಟ್ಟಿದ್ದಾರೆ. ಸೈನ್ಯಭರತಿ ನಡೆದ ಕಾಲಕ್ಕೆ ಅಸಹಾಯ ಸ್ಥಿತಿಯಲ್ಲಿ ಮುದುಕಿಯಾಗಿದ್ದ ತಾಯಿಯೊಬ್ಬಳಿಗೆ ಇದ್ದ ಒಬ್ಬ ಮಗನನ್ನು

ದಲ್ಲಿ ಸೇರಿಸಿಕೊಳ್ಳಲಿಕ್ಕೆ ಸರಕಾರ ಒಪ್ಪುವದಿಲ್ಲ. ಈ ಸಮಾಚಾರವನ್ನು ತಿಳಿದ ತಾಯಿ ತನ್ನನ್ನು ಸಂಹರಿಸಿ ಸೈನ್ಯವನ್ನು ಸೇರಲಿಕ್ಕೆ ಆ ಮಗನನ್ನು ಒಪ್ಪಿಸಿದಳಂತೆ! ವ್ಯಕ್ತಿ ಧರ್ಮಕ್ಕಿಂತ ರಾಷ್ಟ್ರದ ಧರ್ಮ ಶ್ರೇಷ್ಠವೆಂಬುದಕ್ಕೆ ಈ ಉದಾಹರಣೆಯೇ ಸಾಕು! ಈ ಉದಾಹರಣೆಯಿಂದ ಉತ್ಸಾಹಗೊಂಡು ೧೯೦೬ ರಲ್ಲಿ ದಾದಾಭಾಯಿ ನವರೋಜಿ ಅವರು ಭಾರತೀಯ ಕಾಂಗ್ರೆಸ್ಸಿನ ಅಧ್ಯಕ್ಷ ಸ್ಥಾನದಿಂದ ಮಾತನಾಡುತ್ತ ಸ್ವಾತಂತ್ರವೇ ನಮ್ಮ ಗುರಿ 'Nothing short of Independence can satisfy the Indian people' ಎಂಬ ಸಿಂಹಗರ್ಜನೆ ಮಾಡಿದರು. ಅಧಿಕ ಧೇಯಸಾಧನೆಗೋಸುಗ ಅಲ್ಪ ಧೇಯವನ್ನು ಬದಿಗೊತ್ತಬೇಕು ಎಂಬ ಧಾಟಿಯಲ್ಲಿಯೇ ಎಲ್ಲಕ್ಕೂ ಉತ್ಕೃಷ್ಟವಾದ ಆತ್ಮಧನ ಸಂಪಾದನೆಗಾಗಿ ಈ ಸೃಷ್ಟಿಯನ್ನು ಬಿಟ್ಟುಕೊಡಬೇಕೆಂದು ಅನುಭವ ಶಾಸ್ತ್ರವು ತಿಳಿಸುತ್ತದೆ. 'ಆತ್ಮಾರ್ಥಂ ಪೃಥಿವೀಂ ತ್ಯಜೇತ್'. ಇದರಿಂದ ಶ್ರೇಷ್ಠ ತತ್ವಕ್ಕಾಗಿ ಕನಿಷ್ಠವನ್ನು ತ್ಯಾಗಮಾಡಬೇಕು; ಇದುವೆ ನಿಜವಾದ ಧರ್ಮ ಎಂದೆನಿಸುವದು. ಇದುವೆ ಯಜ್ಞ! ಇದುವೆ ನಿಜವಾದ ಸನ್ಯಾಸ! ಎಂದು ವ್ಯಕ್ತವಾಗುತ್ತದೆ.

ಇಂಥದೊಂದು ಉನ್ನತವಾದ ಪೂಜ್ಯ ಭಾವವನ್ನು ಬೆಳಸಿಕೊಂಡು ಸ್ಥಾವರಕ್ಕಿಂತಲೂ ಜಂಗಮ ಭಕ್ತಿಯು ಶ್ರೇಷ್ಠವೆಂದು ಸಾರಿ, ಅದನ್ನು ಸಾರ್ವತ್ರಿಕವಾಗಿ ಅನುಭವ ಮಂಟಪದ ಮುಖಾಂತರ ರೂಢಗೊಳಿಸಿದವನು ಬಸವಣ್ಣನು. ಪರವಸ್ತುವನ್ನು ಪ್ರೇಮರೂಪದಲ್ಲಿ ಆರಾಧಿಸುವದೇ ಅನುಭವ ಶಾಸ್ತ್ರದ ಸೂತ್ರವು; ಇದನ್ನು ತನ್ನ ನಡೆಯಿಂದ ಸರ್ವತ್ರ ವ್ಯಾಪಕಗೊಳಿಸಿದವನು ಜಗದಣ್ಣ ಬಸವಣ್ಣನು!

೧೨ನೆಯ ಶತಮಾನದಲ್ಲಿ ಅನುಭಾವಿಗಳಲ್ಲಿ ನಡೆದ ಘಟನೆಗಳ ಮೇಲಿಂದ ಸ್ಥಾವರ ಮತ್ತು ಜಂಗಮದ ವೈಶಿಷ್ಟ್ಯವನ್ನು ಇನ್ನೆಲ್ಲಿಯೂ ಕಾಣಲಾಗುವದಿಲ್ಲ. ಅಸಂಪ್ರಜ್ಞಾತ ಸಮಾಧಿಯಲ್ಲಿದ್ದ ಅನಿಮಿಷಯ್ಯನ ಪ್ರಾಣಕಳೆ ಆತನ ದೇಹದಿಂದ ಅಗಲಿ ಆತನ ಕರದಿಷ್ಟದೊಡನೆ ಅಲ್ಲಮ ಪ್ರಭುವಿನ ದೇಹದಲ್ಲಿ ನೆಲೆಸಿತೆಂದು ವರ್ಣಿತವಾಗಿದೆ. ಶುದ್ಧ ಸಮಾಧಿ ಸ್ಥಿತಿಯಲ್ಲಿದ್ದರೂ ಅನಿಮಿಷಯ್ಯನು ಲಿಂಗಪ್ರಾಣಿಯಾಗಿದ್ದನೆಂಬುದು ಇದರಿಂದ ವಿದಿತವಾಗುತ್ತಿದೆ. ತ್ವರಿತಜ್ಞಾನ ಪರಿಪೂರ್ಣ ಜ್ಞಾನ ಪಡೆದ ವ್ಯಕ್ತಿಗಳನ್ನು ಬಸವಣ್ಣನು ಜಂಗಮ ಪದದಿಂದ ಸಂಬೋಧಿಸುತ್ತಾನೆ. ಏನೂ ಓದಲಿಕ್ಕೆ ಬಾರದಿದ್ದರೂ, ಅವರಲ್ಲಿ ಪಾಂಡಿತ್ಯದ ಸುಳಿವು ಇರ

ದಿದ್ದರೂ ಅವರಲ್ಲಿಯ ಸ್ಫುರಣಜ್ಞಾನ ಮಾತ್ರದಿಂದ ಜಂಗಮ ಪದವು ಅವರಿಗೆ ಸಲ್ಲುತ್ತದೆ. ಜಾತಿ–ಮತ ಕುಲ–ಗೋತ್ರ ಇವುಗಳ ಮೇಲು–ಕೀಳುಗಳಾಗಲಿ, ಲಾಂಛನ-ಲಕ್ಷಣಗಳ ತಾರತಮ್ಯವಾಗಲಿ ಜಂಗಮತ್ವವನ್ನು ನಿರ್ಧರಿಸುತ್ತಿರಲಿಲ್ಲ. ತನ್ನರಮನೆಗೆ ಬರುತ್ತಿದ್ದ ಜನರೆಲ್ಲ ಜಂಗಮ ಎಂದು ಕರೆಯುತ್ತಿದ್ದುದು ಬಸವಣ್ಣನ ವಿಶಾಲ ಹೃದಯವಾಗಿತ್ತು. ಒಮ್ಮೆ ದ್ವಾರಪಾಲಕರು ಅಚಾತುರ್ಯದಿಂದಾಗಿ ಬಾಗಿಲಿಗೆ ಬಂದು ನಿರಾಶೆಗೊಂಡು ಹಿಂದಿರುಗಿದ ಇಬ್ಬರು ವ್ಯಕ್ತಿಗಳ ಹಿಂದೆಯೇ ಬಸವಣ್ಣನ ಪ್ರಾಣವೂ ಹೋಯಿತೆಂಬ ವೃತ್ತಾಂತವು ಒಂದೆಡೆಗೆ ಬರುತ್ತದೆ. ಇದು ಬಸವಣ್ಣನು ಜಂಗಮವೇ ತನ್ನ ಪ್ರಾಣವೆಂದು ತಿಳಿದುಕೊಂಡಿದ್ದನು; ಮಾತ್ರವಲ್ಲ, ಅದರಂತೆ ಆಚರಣೆಯನ್ನೂ ಇಟ್ಟುಕೊಂಡಿದ್ದನೆಂಬುದನ್ನು ಸ್ಪಷ್ಟಗೊಳಿಸುತ್ತಿದೆ. ಅನುಭಾವಿಗಳ ಇತಿಹಾಸದಲ್ಲಿ ಅನುಭವ ಶಾಸ್ತ್ರದಲ್ಲಿ ಇಂತಹ ಉದಾಹರಣೆಗಳು ಅತಿ ವಿರಳ.

ಕಲ್ಪಿತ ಒಂದು ವಸ್ತುವಿಗೆ ತನ್ನ ಸರ್ವಸ್ವವನ್ನು ಸೂರೆಗೊಳ್ಳುವ ಜನಗಳಿಗೇನು ಕೊರತೆಯಿಲ್ಲ. ಆದರೆ ಚೈತನ್ಯ ವಸ್ತುವೊಂದರಲ್ಲಿ ತನ್ನ ಪ್ರತಿಪ್ರಾಣವೇ ಅಡಗಿದೆಯೆಂದು ಗುರುತಿಸಿ ಪ್ರಾಣಸಾಮರಸ್ಯವನ್ನು ಪಡೆದುಕೊಂಡ ಯೋಗ್ಯತೆಯು ಅತ್ಯಂತ ಘನತೆಯಿಂದ ಕೂಡಿಕೊಂಡಿದ್ದಾಗಿರುತ್ತದೆ. ಅನುಭವಶಾಸ್ತ್ರವು ಜೀವ ಕಳೆಯಿಂದ ಕಂಗೊಳಿಸುತ್ತಿರುವದನ್ನು ವ್ಯಕ್ತಿಗಳ ಜೀವನ ಚರಿತ್ರೆಯಿಂದ ಅರಿಯಬೇಕು. ಇದನ್ನು ನಿತ್ಯಜೀವನದಲ್ಲಿ ವ್ಯಕ್ತಗೊಳಿಸುವ ಬಸವಾದಿ ಶಿವಶರಣರು ಅನುಭವಶಾಸ್ತ್ರಕ್ಕೆ ಒಂದು ಮೂರ್ತ ಸ್ವರೂಪವನ್ನು ನೀಡಿದರು ತಮ್ಮ ಅನುಭವ ಮಂಟಪದಿಂದ. ಅನುಭವ ಮಂಟಪದಲ್ಲಿ ಭಾಗವಹಿಸಿದ ವ್ಯಕ್ತಿಗಳ ಮನಃಪ್ರವೃತ್ತಿ–ಪರಿಪಾಕ, ಧೀರೋದಾತ್ತ ಭಾವನೆ ಇತ್ಯಾದಿಗಳ ತಾರತಮ್ಯಕ್ಕೆ ಅನುಗುಣವಾಗಿ ಸಾಧನೆಯ ಕ್ರಮದ ಯೋಜನೆ ಸಿದ್ಧವಾಗಿದ್ದಿತು ಎಂಬ ಮಾತು ಅನುಭವಶಾಸ್ತ್ರವು ಬರಿಯ ವಿಚಾರಪ್ರಧಾನವಲ್ಲ, ಆಚಾರಪ್ರಧಾನವೆಂಬುದನ್ನು ತೋರಿಸುವದು. ಜೀವನ ಸಾರ್ಥಕ್ಯವನ್ನು ಹೊಂದಲು ಕ್ರಮಬದ್ಧವಾದ ಸಾಧನೆಯು ಅತಿಶಯವಾಗಿ ಅನುಕೂಲಿಸುವುದೆಂಬುದನ್ನು ತಿಳಿಸುವುದು ಅನವಶ್ಯಕ. ಅಧ್ಯಾತ್ಮ ಶಾಸ್ತ್ರ ಅನುಭವ ಶಾಸ್ತ್ರಗಳು ಮಾನವನ ಜೀವನದಲ್ಲಿ ಅನಿವಾರ್ಯ ಸಂಗತಿಗಳೆಂಬುದನ್ನು ನೆನಿಸಿ ಅವನ್ನು ಅನುಭವಿಸುವಂತಾಗಲಿ.

---

# ೬. ಮರ

ನಿಸರ್ಗದ ವರ್ಣನೆಯು ಸಾಮಾನ್ಯವಾಗಿ ಎಲ್ಲ ಭಾಷೆಗಳ ಸಾಹಿತ್ಯದ ಸೊತ್ತಾಗಿದೆ. ಚಿಕ್ಕೆ-ಚಂದ್ರಮರನ್ನು, ಬೆಟ್ಟ-ಹೊಳೆಗಳನ್ನು, ಗಿಡ-ಬಳ್ಳಿಗಳನ್ನು ಹೂ-ಹಣ್ಣುಗಳನ್ನು, ಬಿಸಿಲು-ಬೆಳುದಿಂಗಳುಗಳನ್ನು, ನಿಸರ್ಗದ ವಿವಿಧ ಋತು ಗಳನ್ನು, ಪಶು-ಪಕ್ಷಿಗಳನ್ನು ಹೀಗೆ ಪ್ರಕೃತಿಯ ಸಜೀವ ನಿರ್ಜೀವ ವಸ್ತು-ಒಡವೆ ಗಳನ್ನು ಕವಿಯಾಗಲಿ ಸಾಹಿತಿಯಾಗಲಿ ತನ್ನ ಕವನದಲ್ಲಿ ತನ್ನ ಸಾಹಿತ್ಯದಲ್ಲಿ ಬಳಸಿಕೊಂಡಿದ್ದಾನೆ, ಹೃದಯಂಗಮವಾಗಿ ಬಗೆಬಗೆಯಾಗಿ ಬಣ್ಣಿಸಿದ್ದಾನೆ. ಹೀಗೆ ಬಣ್ಣನೆಗೆ ಇಂಬಾದ ನಿಸರ್ಗದ ವಿವಿಧ ವಸ್ತುಗಳಿಂದ ಮನರಂಜನೆಯಾಗ ಬೇಕೆಂಬ ಉದ್ದೇಶವಿಷ್ಟೇ ಇರದೆ ಮಾನವನ ನಡೆ-ನುಡಿಗಳು ನೀತಿ ಬದ್ಧವಾಗ ಬೇಕೆಂಬ ಹೇತುವಿನಿಂದ ನೀತಿಯ ಪಾಠವನ್ನು ಸ್ಪಷ್ಟವಾಗಿಯಾಗಲಿ ಇಲ್ಲವೆ ಗೌಣ ವಾಗಿಯಾಗಲಿ ಕವಿಯು ತಿಳಿಸುತ್ತ ಬಂದಿರುವನು. ನಿಸರ್ಗದ ಹಲವಾರು ವಸ್ತುಗಳಲ್ಲಿ ವೃಕ್ಷವು ಬಹಳ ಪರೋಪಕಾರಿಯೆಂಬುದನ್ನು ಸಂಸ್ಕೃತ ಸಾಹಿತ್ಯವು ಮನೋಹರವಾಗಿ ಬಣ್ಣಿಸುತ್ತಿದೆ. ಹಗಲು ಬಯಲೊಳಗೆ ಹರ್ಷದಿಂದ ಹಾರಾಡಿ ಇರುಳು ಬಂದು ತಾವು ಗಿಡದಲ್ಲಿ ಕಟ್ಟಿದ ಗೂಡುಗಳಲ್ಲಿ ಹಕ್ಕಿಗಳು ಕುಳಿತುಕೊಳ್ಳುವವು; ಹಾಗೆಯೇ ಆ ಗಿಡಗಳಲ್ಲಿಯ ಹಣ್ಣು-ಹಂಪಲಗಳನ್ನು ತಿಂದು ನಿಶ್ಚಿಂತೆಯಿಂದ ಜೀವನವನ್ನು ಸಾಗಿಸುವವು. ದಾರಿ ನಡೆದು ದಣಿದ ದಾರಿ ಕಾರರಿಗೆ ನೆರಳನ್ನು ನೀಡಿ, ಹಸಿದವರಿಗೆ ತನಿವಣ್ಣುಗಳನ್ನು ಕೊಟ್ಟು ಆ ಗಿಡಗಳು ಮುದಗೊಳಿಸುವವು. ಮಾನವರು ತಮ್ಮ ಉರುವಲಕ್ಕಾಗಿಯೋ ಮನೆ ಕಟ್ಟುವ ಕೆಲಸಕ್ಕಾಗಿಯೋ ಇಲ್ಲವೆ ಮನೆಗಳನ್ನು ಸುಂದರಗೊಳಿಸುವದಕ್ಕಾಗಿಯೋ— ಹೀಗೆ ತಮ್ಮ ಸ್ವಾರ್ಥಕ್ಕೋಸುಗ ಅವನ್ನು ಕಡಿದರೂ ಕೊರೆದರೂ ಕೆತ್ತಿದರೂ ಕತ್ತರಿಸಿದರೂ ಪ್ರತೀಕಾರವನ್ನು ಮಾಡದೆ ಪ್ರತಿಯಾಗಿ ತಮಗೆ ಅನಿಷ್ಟವನ್ನು ನೀಡಿದವರಿಗೆ ಅವು ಇಷ್ಟವನ್ನೇ ಕೊಡುವವು; ತಮಗೆ ಅಪಕಾರವನ್ನು ಮಾಡಿದರೂ ತಿರುಗಿ ಉಪಕಾರವನ್ನೇ ಮಾಡುವವು. ಅಂತೆಯೇ ಸಾಧು-ಸತ್ಪುರುಷರ, ಸಜ್ಜನ ಶರಣರ ಜೀವನವನ್ನು ವೃಕ್ಷಗಳ ಜೀವನಕ್ಕೆ ಹೋಲಿಸುವದುಂಟು. ಲೋಕದ ಅಜ್ಞಾನಿಗಳ ಅಪಕಾರವನ್ನು ಅನಿಷ್ಟವನ್ನು ಕೀಟಲೆಯನ್ನು ಸಹಿಸಿಯೂ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಪ್ರತಿಯಾಗಿ ಅವು ಕಲ್ಯಾಣವನ್ನೇ ಬಯಸುವವು,

ಉಪಕಾರವನ್ನೇ ಮಾಡುವವು. ಗಿಡಗಳ ಈ ಉಪಕಾರವನ್ನು ಮುಂದಿಟ್ಟುಕೊಂಡು ಮಹಾಭಾರತವು ಪರೋಪಕಾರಕ್ಕಿಂತ ಹೆಚ್ಚಿನ ಪುಣ್ಯವಿಲ್ಲ, ಪರ ಪೀಡೆಗಿಂತ ಹೆಚ್ಚಿನ ಪಾಪವಿಲ್ಲೆಂದು ಬೋಧಿಸಿತು. 'ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ'. ಪಾಪ–ಪುಣ್ಯಗಳ ತಾತ್ವಿಕ ವಿವೇಚನೆಯಾಗಲಿ, ನೈತಿಕ ಬೆಳವಣಿಗೆಯಾಗಲಿ ಅನೇಕ ಗ್ರಂಥಗಳ ವಿಷಯವಾದರೂ ಪರೋಪಕಾರವೇ ಪುಣ್ಯ ಇಲ್ಲವೆ ಸುಕೃತವೆಂದೂ, ಪರ ಪೀಡೆಯೇ ಪಾಪ ಅಥವಾ ದುಷ್ಕೃತವೆಂದೂ ಬಗೆದುದು ಅನುಭವ ದೃಷ್ಟಿಯಿಂದ ಅತ್ಯಂತ ಮಹತ್ವವಾದ ಸಂಗತಿ. ಸುಕೃತದಿಂದ ಒಳ್ಳೆಯವನಾಗಿ, ದುಷ್ಕೃತದಿಂದ ದುಷ್ಟನಾಗಿ ಜನಿಸುವನೆಂಬುದೇ ಈ ಭಾವನೆಗೆ ಮೂಲವಾಗಿದೆ. ಅಂತಯೇ ಮಹಾತ್ಮರು ಪರೋಪಕಾರಕ್ಕಾಗಿ, ಪರರ ಹಿತಕ್ಕಾಗಿ ತಮ್ಮ ದೇಹವನ್ನೇ ಸವೆಸುತ್ತಾರೆ. ಅನ್ಯರಿಗೆ ಉಪಕಾರ ಮಾಡುವದು ಪರೋಪಕಾರದ ಮುಖ್ಯ ಲಕ್ಷಣ, ಅವರು ಅಪಕಾರ ಮಾಡಿದರೂ ಪ್ರತಿಯಾಗಿ ಅವರಿಗೆ ಉಪಕಾರವನ್ನೇ ಮಾಡುವ ಒಂದೇ ಒಂದು ದೊಡ್ಡ ಗುಣವಾದ ಔದಾರ್ಯದಲ್ಲಿ ಇನ್ನುಳಿದ ಸದ್ಗುಣಗಳೆಲ್ಲ ಅಡಗಿರುತ್ತವೆ. ಸೃಷ್ಟಿಯಲ್ಲಿ ಇಂಥ ಪರೋಪಕಾರದ ಪ್ರತೀಕಗಳು ತರುಮರಾದಿಗಳಲ್ಲದೆ, ಇನ್ನು ಯಾವವು ?

ಭಾರತೀಯರು ಗಿಡಗಳ ಈ ಮಹತಿಯನ್ನು ಬಹುದಿನಗಳ ಹಿಂದಿನಿಂದಲೇ ಕಂಡುಹಿಡಿದಿದ್ದಾರೆ. ಹಾಗು ಮೂರು ಗಿಡಗಳನ್ನು ಮುಖ್ಯವಾಗಿ ಆಯ್ದುಕೊಂಡು ಉಪನಿಷತ್ತುಗಳ ಕಾಲದಿಂದಲೇ ಅವುಗಳ ಆಧ್ಯಾತ್ಮಿಕ ಮೇಲ್ಮೆಯನ್ನು ಬಣ್ಣಿಸಿದ್ದಾರೆ. ಪುರಾತನ ಭಾರತೀಯರಿಗೆ ಉಪಕಾರ ಮಾಡಿದ ಆಲದ ಮರ, ಅರಳೀ ಮರ, ಅತ್ತೀ ಮರ ಇವೇ ಆ ಮೂರು ಗಿಡಗಳು. ಇವುಗಳ ಬಹಳ ಮನೋಹರವಾದ ತತ್ವಪೂರಿತವಾದ ವರ್ಣನೆ ಉಪನಿಷತ್ತುಗಳಲ್ಲಿ ಆಗಾಗ್ಗೆ ಬರುವದುಂಟು. ಛಾಂದೋಗ್ಯ ಉಪನಿಷತ್ತಿನ ೬ನೆಯ ಅಧ್ಯಾಯ ೧೨ನೆಯ ಖಂಡದಲ್ಲಿ ವಟ ಬೀಜದ ರೂಪಕ ಬಂದಿರುತ್ತದೆ. ಅತ್ಯಂತ ಸಣ್ಣದಾಗಿರುವ ಆಲದ ಬೀಜದಲ್ಲಿ, ಕಣ್ಣಿಗೆ ಕಾಣದಷ್ಟು ಚಿಕ್ಕದಾಗಿದ್ದರೂ ಅದರೊಳಗಿಂದಲೇ ಆಲದ ಹೆಮ್ಮರವು ಹೊರಹೊಮ್ಮಿ ಕಣ್ಣಿಗೆ ಗೋಚರಿಸುವಂತೆ, ಅದೃಶ್ಯವಾದ ಸತ್‌ದ ಬಸಿರಿನಿಂದ ಈ ವಿಶಾಲವಾದ ವಿಶ್ವವು ಒಡಮೂಡಿ ಬಂದಿರುತ್ತದೆ. ಇದರಲ್ಲಿ ಶ್ರದ್ಧೆಯನ್ನು ಇಡು ಎಂದು ಆರುಣಿಯು ತನ್ನ ಮಗನಾದ ಶ್ವೇತಕೇತುವಿಗೆ ಹೇಳುವನು.

ಏಷಃ ಅಣಿಮ್ನ ಏಷಂ ಮಹಾನ್ ನ್ಯಗ್ರೋಧಸ್ತಿಷ್ಠತಿ, ಶ್ರದ್ಧತ್ಸ್ವ ।
ಏಷ ಅಣಿಮೈತದಾತ್ಮ್ಯಮಿದಂ ಸರ್ವಂ । ಸ ಆತ್ಮಾ ತತ್ತ್ವಮಸಿ ।

ಮಿಲ್ಟನ್ ಮಹಾಕವಿಯೂ ತನ್ನ Paradise Lost ಎಂಬ ಮಹಾ ಕಾವ್ಯದಲ್ಲಿ ಆಲದ ಮರದ ವರ್ಣನೆಯನ್ನು ಮಾಡಿದ್ದಾನೆ. ಆದರೆ ಅಲ್ಲಿ ಆಲದ ತಾತ್ವಿಕ ವಿವೇಚನೆ ಇರದೆ ಕೇವಲ ಬಾಹ್ಯವರ್ಣನೆ ಇರುತ್ತದೆ. ಶಿವಶರಣರೂ ತಮ್ಮ ವಚನಗಳಲ್ಲಿ ಈ ವಟವೃಕ್ಷದ ಬಗೆಗೆ ಬಹು ರಮ್ಯವಾಗಿ ಹಾಡಿಕೊಂಡಿದ್ದಾರೆ. ಅಲ್ಲಮ ಪ್ರಭುದೇವರು ಶಿವಯೋಗಿ ಸಿದ್ಧರಾಮೇಶ್ವರನಿಗೆ ಬೋಧಿಸಿದ ತಮ್ಮ 'ಮಂತ್ರಗೌಪ್ಯ' ಎಂಬ ಗ್ರಂಥದಲ್ಲಿಯ ಪದ್ಯವಿದು :



ನಿಟಿಲ ಭ್ರೂಮಧ್ಯದ ಸ್ಫಟಿಕವರ್ಣದ ಜ್ಯೋತಿ
ಘಟದೊಳಗೆ ತಾನಾಗಿ ತೊಳಗಿ ಬೆಳಗಿ
ವಟವೃಕ್ಷದಾ ಕೆಳಗೆ ಲೋಕಾದಿ ಲೋಕಗಳು
ಘುಟಿಕೆಯಂತಡಗಿದ ಪರಾತ್ಪರವಿದು

ಇಲ್ಲಿ ವಟವೃಕ್ಷವನ್ನು ಮಾನವ ದೇಹಕ್ಕೆ ಹೋಲಿಸಿ ಅನಂತಕೋಟಿ ಬ್ರಹ್ಮಾಂಡಗಳು ಈ ದೇಹದಲ್ಲಿ ಅಡಗಿದಂತೆ ಜ್ಯೋತಿ ಸ್ವರೂಪವಾದ ಪರಾತ್ಪರ ವಸ್ತುವೂ ಈ ದೇಹದಲ್ಲಿಯೇ ಅಡಗಿದೆ; ಭ್ರೂಮಧ್ಯ ಸ್ಥಾನದ ಯೋಗದ ನಿರ್ನಿಮಿಷ ದೃಷ್ಟಿಯ ಅನುಸಂಧಾನದಿಂದ ಇದನ್ನು ಕಾಣಬಹುದಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಗೊಳಿಸಿರುವರು. ಉರಿಲಿಂಗಪೆದ್ದಿ ಎಂಬ ಇನ್ನೊಬ್ಬ ಶಿವಶರಣನು. ತನ್ನ ಒಂದು ವಚನದಲ್ಲಿ

ವಟ ಬೀಜ ವಟವೃಕ್ಷಕೋಟಿಯ ನುಂಗಿಪ್ಪಂತೆ
ನಟಿಯಿಂದಾದ ಅಜಾಂಡ ಕೋಟಿಗಳ ನುಂಗಿಪ್ಪ ಲಿಂಗವೆ,
ದಿಟ ಪುಟ ಕಣ್ಣು ಮನ ಕರಸ್ಥಲಕ್ಕೆ ಒಂದು ಪ್ರಕಟವಾದೆ.
ಮಝು ಭಾವು, ಮಝು ಭಾಪು ಲಿಂಗವೆ,
'ನ ಚ ರೇಣು ನ ಚಕ್ಷುಃ' ಎನಿಸುವ ಲಿಂಗವೆ,
ಉತ್ಪತ್ತಿ ಸ್ಥಿತಿ ಲಯಕ್ಕೆ ಹೊರಗಾದೆನಯ್ಯಾ, ನಿನ್ನ ಮುಟ್ಟಿದ ಕಾರಣ,
ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ.

ಎಂದು ವಟಬೀಜ ವಟವೃಕ್ಷದ ಉದಾಹರಣೆಯಿಂದ ಸೃಷ್ಟಿ ಸೃಷ್ಟಿಕರ್ತನ ಬಗೆಗೆ ಹಾಡಿಕೊಂಡಿದ್ದಾದೆ— ವಟವೃಕ್ಷದ ಸೂಕ್ಷ್ಮ ಬೀಜದ ಒಡಲಲ್ಲಿ ವಿಸ್ತಾರ-ವಾದ ಅಸಂಖ್ಯ ವಟವೃಕ್ಷಗಳು ಅಡಗಿರುತ್ತವೆ. ಹಾಗೆಯೇ ಸೃಷ್ಟಿ (ವಟ) ಪ್ರಮುಖವಾದ ಅನಂತಕೋಟಿ ಬ್ರಹ್ಮಾಂಡಗಳು ಅವ್ಯಕ್ತ ಪರಾತ್ಪರ ವಸ್ತುವಿನಲ್ಲಿ (ಲಿಂಗದಲ್ಲಿ) ಅಡಗಿರುತ್ತವೆ. ಇಂತಹ ವಸ್ತುವು ದೃಷ್ಟಿಗೆ ಸ್ಪಷ್ಟವಾಗಿ (ದಿಟ-ಪುಟ) ಕಾಣಲೋಸುಗ ಕರ ಮನ ನೇತ್ರ ಎಂಬ ಮೂರು ಸ್ಥಾನಗಳಲ್ಲಿ ವ್ಯಕ್ತವಾಗಿ ಮೂರ್ತಗೊಂಡಿರುತ್ತದೆ— ಎಂದು ತಿಳಿಸಿ ಆತನು ಬೀಜವೃಕ್ಷ ನ್ಯಾಯವನ್ನು ಬಹಳ ಮಾರ್ಮಿಕವಾಗಿ ವಿವರಿಸಿದ್ದಾನೆ.

ಶ್ವೇತಾಶ್ವತರ ಉಪನಿಷತ್ತಿನ ೧ನೆಯ ಅಧ್ಯಾಯದ ೧೪ನೆಯ ಶ್ಲೋಕದಲ್ಲಿ ಅರಣಿವೃಕ್ಷದ ವರ್ಣನೆ ಬರುತ್ತದೆ. ಸಂಸ್ಕೃತ ಕನ್ನಡ ಶಬ್ದಗಳಲ್ಲಿ 'ಣ' ಕಾರವು 'ಳ' ಕಾರವಾಗುತ್ತಿರುವುದನ್ನು ನೆನಿಸಿದರೆ (ರಾವಣ→ ರಾವಳ – ಅರಸು, ಗಿಣಿ→ ಗಿಳಿ, ಕುಣಿ→ ಕುಳಿ) ಈ ಅರಣಿವೃಕ್ಷವೇ ಕನ್ನಡದಲ್ಲಿ ಅರಳಿ ಮರ ಎಂದು ಹೆಸರನ್ನು ಪಡೆಯಿತು. ವೇದಕಾಲದಲ್ಲಿ ಮರ ಮರ ಮಥನಿಸಿ ಅಗ್ನಿಯನ್ನು ತೆಗೆಯುತ್ತಿದ್ದರೆಂಬದು ಎರಡು ಅರಣಿ (ಳಿ) ಕಟ್ಟಿಗೆಯ ತುಂಡಗಳನ್ನು ತಿಕ್ಕುವದರಿಂದ ಬೆಂಕಿ ಪುಟವಾಗುವದನ್ನು ನೆನಿಸಿಕೊಂಡಲ್ಲಿ ತಿಳಿದುಬರುವದು. ಅರಳಿಮರದ ಕಟ್ಟಿಗೆಯಲ್ಲಿ ಅಗ್ನಿ ತತ್ವವು ಹೆಚ್ಚು ಪ್ರಮಾಣದಿಂದ ಜಾಗ್ರತ-ವಾಗಿರುವದರಿಂದ ಯಜ್ಞದಲ್ಲಿ ಅಗ್ನಿಯನ್ನು ಪುಟಗೊಳಿಸಲು ಇದನ್ನು ಉಪ-ಯೋಗಿಸುತ್ತಿದ್ದರು.

ಕಡಲೊಳಗೆ ಕಲ್ಲೊಳಗೆ ಮರದೊಳಗೆ ಮಾನವರ ಒಡಲೊಳಗೆ
ಕಾಮಿಗಳ ಮನದೊಳಗೆ ಜ್ಞಾನಿಗಳ ನುಡಿಯೊಳಗೆ ಯೋಗಿಗಳ ಕಣ್ಣೊಳಗೆ
ರಾಜಿಪ ಅಮಲತರ 'ಜ್ಯೋತಿಲಿಂಗ'—

ಎಂದು ಹೇಳುವಾಗ ಅಗ್ನಿ ತತ್ವವು ಹೆಚ್ಚು ಹೆಚ್ಚು ಪರಿಸ್ಫುಟವಾಗುತ್ತದೆ ಎಂಬ ವಸ್ತುನಿರ್ದೇಶನದಿಂದಿಹ ಈ ಮಾತಿನಲ್ಲಿ ಕಟ್ಟಿಗೆಯಲ್ಲಿ ಹೆಚ್ಚಾಗಿ ಅಗ್ನಿ ಜಾಗ್ರತವಿರುವ ಅರಳಿಯ ಕಟ್ಟಿಗೆಯಲ್ಲಿ ಬೆಂಕಿ ಹುದುಗಿದೆ ಎಂಬದು ಸ್ಪಷ್ಟವಾಗುತ್ತದೆ. ಶ್ವೇತಾಶ್ವತರದಲ್ಲಿ ಬರುವ ಅರಣಿ ಉಲ್ಲೇಖವು ಹೀಗೆ ಇರುತ್ತದೆ :

ಸ್ವದೇಹಮರಣಿಂ ಕೃತ್ವಾ ಪ್ರಣವಂ ಚೋತ್ತರಾರಣಿಂ |
ಧ್ಯಾನನಿರ್ಮಥನಾಭ್ಯಾಸಾತ್ ದೇವಂ ಪಶ್ಯೇನ್ನಿಗೂಢವತ್ ||

ಈ ಶ್ಲೋಕವು ಕೈವಲ್ಯ ಉಪನಿಷತ್ತಿನಲ್ಲಿಯೂ ಬಂದಿರುತ್ತದೆ. 'ತನ್ನ ದೇಹವನ್ನು ಕೆಳಗಿನ ಕಟ್ಟಿಗೆಯನ್ನಾಗಿಯೂ, ಓಂಕಾರವನ್ನೇ ಮೇಲಿನ ಕಟ್ಟಿಗೆಯನ್ನಾಗಿಯೂ ಮಾಡಿ, ಧ್ಯಾನದ ಬಲದಿಂದ ಅವೆರಡನ್ನು ಉಜ್ಜಿ ತನ್ನಲ್ಲಿಯೇ ಅಡಗಿದ ದೇವನನ್ನು ಒಡಮೂಡಿಸಬೇಕು'. ಉಪನಿಷತ್ತಿನ ಈ ಮಾತಿನಲ್ಲಿ ದೇವನು ತನ್ನಲ್ಲಿಯೇ ಇರುವನು ಎಂಬ ಜ್ಞಾನ ಒಂದರಿಂದಲೂ ಸಾಗದು ಅದರಂತೆ ಕೇವಲ ಕ್ರಿಯೆಯಿಂದಲೂ ನಡೆಯದು; ಕ್ರಿಯಾಜ್ಞಾನಗಳ ಸಮ್ಮೇಳನದಿಂದ, ಅವುಗಳ ಸಾಮರಸ್ಯದಿಂದ ದೇವನ ನಿಲವನ್ನು ಅರಿತು ಅಂಗವಿಸಿಕೊಳ್ಳಲು ಶಕ್ಯವಿದೆ ಎಂಬ ಧ್ವನಿಯಿರುತ್ತದೆ. ಗ್ರೀಸದೇಶದ ಸ್ಟೊಯಿಕರೆಂಬ (Stoics) ಅನುಭಾವಿಗಳ ವಾಣಿಯಲ್ಲಿಯೂ ಕಾಂಟ ಎಂಬ ಪಾಶ್ಚಿಮಾತ್ಯ ತತ್ವಜ್ಞಾನಿಯ ಮಾತುಗಳಲ್ಲಿಯೂ ಆಗಮಕಾರರ ವಚನಗಳಲ್ಲಿಯೂ ಇದೇ ಬಗೆಯ ಕ್ರಿಯಾಜ್ಞಾನ ಸಾಮರಸ್ಯದ ನಿಲವು ಬಹು ಸುಂದರವಾಗಿ ವ್ಯಕ್ತವಾಗಿದ್ದದನ್ನು ಕಾಣಬಹುದು.

ಕಠೋಪನಿಷತ್ತಿನ ೨ನೆಯ ಅಧ್ಯಾಯ ೩ನೆಯ ವಲ್ಲಿಯಲ್ಲಿ ಅಶ್ವತ್ಥವೃಕ್ಷದ ಸೊಗಸಾದ ವರ್ಣನೆ ಬಂದಿರುತ್ತದೆ. ಅಶ್ವತ್ಥವೃಕ್ಷವೆಂದರೆ ಅತ್ತಿಮರ. ಕಠೋಪನಿಷತ್ತಿನಲ್ಲಿ ಅತ್ತಿಗಿಡದ ಬಗೆಗಿನ ಮಾತುಗಳಿವು :

ಊರ್ಧ್ವಮೂಲೋಽವಾಕ್ ಶಾಖ ಏಷೋಽಶ್ವತ್ಥಃ ಸನಾತನಃ |
ತದೇವ ಶುಕ್ರಂ ತದ್‌ಬ್ರಹ್ಮ ತದೇವಾಮೃತಮುಚ್ಯತೇ |
ತಸ್ಮಿಂಲ್ಲೋಕಾಶ್ರಿತಾ ಸರ್ವೇ ತದು ನಾತ್ಯೇತಿ ಕಶ್ಚನ ||

'ಈ ಸನಾತನ ಅಶ್ವತ್ಥವೃಕ್ಷದ ಬೇರು ಮೇಲೆ ಮತ್ತು ಕವಲುಗಳು ಕೆಳಗೆ ಇರುತ್ತವೆ. ಅದುವೆ ಶುದ್ಧ ಬ್ರಹ್ಮ, ಅದೇ ಅಮೃತವು. ಅದರಲ್ಲಿಯೇ ಎಲ್ಲ ಲೋಕಗಳಿರುತ್ತವೆ. ಅದನ್ನು ಮಿಕ್ಕಿ ಯಾವದೂ ಇಲ್ಲ'. ಅತ್ತಿಮರಕ್ಕೆ ನಾಲು ಸಾಲಾಗಿ ಹಣ್ಣುಗಳು ಅಂಟಿಕೊಂಡಿರುವದನ್ನು ನೋಡಿ ಪರಮಾತ್ಮನು ತನ್ನಲ್ಲಿ ಅನಂತ ಕೋಟಿ ಬ್ರಹ್ಮಾಂಡಗಳನ್ನು ಅಡಗಿಸಿಕೊಂಡಿರುವನೆಂದು ರೂಪಕದಿಂದ ತಿಳಿಸಲಾಗಿದೆ. ಪರಮಾತ್ಮನಿಗೆ ಅನಂತ ಬ್ರಹ್ಮಾಂಡಗಳ ಅಧಿನಾಯಕನೆಂಬ ಹೆಸರು

ಲತ್ತೀಗಿಡವು ನೀಡಿದ ಸ್ಫೂರ್ತಿಯಿಂದ ಕೊಡಲ್ಪಟ್ಟಿರಬೇಕು. ಈ ಅಶ್ವತ್ಥವೃಕ್ಷವು ಬೌದ್ಧರಿಗೆ ಪವಿತ್ರವಾಗಿದೆ. ಅವರು ಇದಕ್ಕೆ ಬೋಧಿವೃಕ್ಷವೆಂದು ಕರೆಯುವರು; ಯಾಕಂದರೆ ಭಗವಾನ್ ಬುದ್ಧನು ಬೋಧಿಯನ್ನು ಪಡೆದದ್ದು ಅತ್ತೀ ಮರದಡಿಯಲ್ಲಿ. ಅತ್ತೀಮರಕ್ಕೆ ಔದುಂಬರ ವೃಕ್ಷವೆಂದೂ ಹೆಸರಿದೆ; ದತ್ತಾತ್ರೇಯನಿಗೆ ಈ ವೃಕ್ಷವು ಬಹಳ ಪ್ರಿಯವೆಂದು ಹೇಳಲಾಗುತ್ತಿದೆ.

ಕಠೋಪನಿಷತ್ತಿನ ವಿಚಾರ ಸರಣಿಯನ್ನೇ ಭಗವದ್ಗೀತೆಯು ಮುಂದುವರಿಸಿದೆ. ಸತ್‌ದಿಂದ ಸೃಷ್ಟಿಯು ಹುಟ್ಟಿದುದನ್ನು ಹೇಳುವಾಗ ಅದೂ ಸಹ ವೃಕ್ಷದ ರೂಪಕವನ್ನೇ ತೆಗೆದುಕೊಂಡಿರುತ್ತದೆ. ಅಶ್ವತ್ಥವೃಕ್ಷವನ್ನು ವರ್ಣಿಸುವ ಗೀತೆಯ ೧೫ನೆಯ ಅಧ್ಯಾಯದ ಮೊದಲಿನ ಶ್ಲೋಕಗಳು ಹೀಗೆ ಇರುತ್ತವೆ :

ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।
ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥

ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ
ಗುಣಪ್ರವೃದ್ಧಾ ವಿಷಯಪ್ರವಾಲಾಃ ॥
ಅಧಶ್ಚ ಮೂಲಾನ್ಯನುಸಂತತಾನಿ
ಕರ್ಮಾನುಬಂಧೀನಿ ಮನುಷ್ಯಲೋಕೇ ॥

ನ ರೂಪಮಸ್ಯೇಹ ತಥೋಪಲಭ್ಯತೆ
ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ॥
ಅಶ್ವತ್ಥಮೇನಂ ಸುವಿರೂಢಮೂಲಂ
ಅಸಂಗಶಸ್ತ್ರೇಣ ದೃಢೇನ ಛಿತ್ವಾ ॥

ತತಃ ಪದಂ ತತ್ಪರಿಮಾರ್ಗಿತವ್ಯಂ
ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ ॥
ತಮೇವ ಚಾದ್ಯಂ ಪುರುಷಂ ಪ್ರಪದ್ಯೆ
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥

ಯಾವುದರ ಬೇರು ಮೇಲಿದೆಯೋ, ಯಾವುದರ ಕವಲು ಕೆಳಗಿದೆಯೋ ಅಂತಹ ಅವ್ಯಯವೆಂದೆನಿಸಿಕೊಳ್ಳುವ ಅಶ್ವತ್ಥ ವೃಕ್ಷಕ್ಕೆ ವೇದಗಳೇ ಎಲೆಗಳು,

ಇದನ್ನು ಬಲ್ಲವನೇ ವೇದವಿತ್ತನು. ಗುಣಗಣದಿಂದ ಬೆಳೆಯುವ ಅದರ ಶಾಖೋಪಶಾಖೆಗಳು ಕೆಳಗೂ ಮೇಲೆಯೂ ಹಬ್ಬಿರುವವು. ವಿಷಯಗಳೇ ಅದರ ಚಿಗುರು. ಕರ್ಮಾನುಬಂಧಿಯಾದ ಅದರ ಬೇರುಗಳು ಮನುಷ್ಯಲೋಕ ದಲ್ಲಿ ಹರಹಿಕೊಂಡಿರುತ್ತವೆ. ಅದಕ್ಕೆ ಮೊದಲಿಲ್ಲ, ತುದಿಯಿಲ್ಲ, ಆಧಾರವೂ ಇಲ್ಲ. ಆದರೆ ನಿಜಸ್ವರೂಪವು ಹೀಗೆ ತೋರದು. ಚೆನ್ನಾಗಿ ಬೇರು ನಾಟಿದ ಈ ಅಶ್ವತ್ಥ ವೃಕ್ಷವನ್ನು ದೃಢವಾದ ಅಸಂಗಶಸ್ತ್ರದಿಂದ ಸವರಿ ಹಾಕಬೇಕು. ಆ ಬಳಿಕ ಯಾವನಿಂದ ಸೃಷ್ಟಿಯು ಮೊಟ್ಟಮೊದಲು ನಿರ್ಮಾಣವಾಯಿತೊ ಆ ಪುರುಷ-ನನ್ನು, ಯಾವುದನ್ನು ಮುಟ್ಟಿದ ತರುವಾಯ ಪುನರ್ಜನ್ಮವಿಲ್ಲವೊ ಆ ಪದವನ್ನು ಹುಡುಕಬೇಕು.'— ಎಂದು ಗೀತೆಯು ಹೇಳುತ್ತದೆ.

ಕಠವು ಅಶ್ವತ್ಥವೃಕ್ಷವನ್ನು ಪರಬ್ರಹ್ಮನಿಗೆ ಹೋಲಿಸಿದರೆ ಗೀತೆಯು ಅದನ್ನು ಸಂಸಾರಕ್ಕೆ ಅಥವಾ ಪ್ರಪಂಚಕ್ಕೆ ಹೋಲಿಸುತ್ತದೆ. ಬೇರು ಮೇಲೆ ಕವಲು ಕೆಳಗೆ ಎಂಬ ಆ ವೃಕ್ಷದ ವರ್ಣನೆಯಲ್ಲಿ ಎರಡರಲ್ಲಿಯೂ ಸಾಮ್ಯವಿರುತ್ತದೆ. ಈ ವರ್ಣನೆಯಲ್ಲಿ ಬರುವ 'ವೇದ' ಶಬ್ದಕ್ಕೆ 'ಜ್ಞಾನ' ಎಂಬ ಅರ್ಥವಿರುತ್ತದೆ. ಇದು ಪುಸ್ತಕ ಜ್ಞಾನವೂ ಅಲ್ಲ, ಇಂದ್ರಿಯಜನ್ಯ ಜ್ಞಾನವೂ ಅಲ್ಲ; ಇದು ಸ್ಫುರಣಾತ್ಮಕ ಜ್ಞಾನವು. ಅನುಭಾವಿಗಳ ನಿರ್ಮಲವಾದ ಅಂತಃಕರಣದಲ್ಲಿ ಮಿನುಗಿದ ಸ್ಫುರಣ ಜ್ಞಾನವು. ಈ ಸ್ಫುರಣಜ್ಞಾನಕ್ಕೆ ಶ್ರುತಿ ಎಂದೂ ಹೆಸರು. ಅದುವೆ ವೇದ-ವೆಂದೂ ಕರೆಯಲ್ಪಡುತ್ತದೆ. ಇಂಥ ವೇದಗಳೇ ಆ ಅಶ್ವತ್ಥವೃಕ್ಷದ ಎಲೆಗಳು; ಎಂದರೆ ವ್ಯವಹಾರಗಳು, ಸೃಷ್ಟಿಯ ವ್ಯವಹಾರಗಳು ಸಮ್ಯಕ್‌ಜ್ಞಾನಪೂರ್ಣ ವಾಗಿರಬೇಕು. ಜ್ಞಾನದೃಷ್ಟಿಯಿಂದ ಸೃಷ್ಟಿಯ ವ್ಯವಹಾರವನ್ನು ನೋಡಿದಾಗ ಅದು ಒಂದು ಉದ್ದೇಶಪೂರ್ವಕವಾಗಿ ನಡೆದಿದೆ, ಸಿಕ್ಕಾಬಟ್ಟೆಯಾಗಿ ನಡೆದಿಲ್ಲ ಎಂದು ತಿಳಿಯುತ್ತದೆ. ಈ ಸೃಷ್ಟಿಗೆ ಅಶ್ವತ್ಥದ ಎಂದರೆ ಶಾಶ್ವತವಾದ ಸತ್ಯದ ಆಧಾರ ತಪ್ಪಿದರೆ ಅದು ಅಶ್ವತ್ಥವೇ, ಅಶಾಶ್ವತವೇ ಸರಿ. ಅದು ಇಂದು ತೋರಿ ನಾಳೆ ಅಡಗುವಂತಹದಾಗಿ ಕಾಣುತ್ತದೆ. ನಿಸರ್ಗದಲ್ಲಿ ಪರಿವರ್ತನೆಯಿದ್ದರೂ ಅದು ಒಂದು ಕಟ್ಟಿಗೆ ನಿಯಮಕ್ಕೆ ಅನುಗುಣವಾಗಿ ಸಾಗಿರುತ್ತದೆ. ಬರಿಯ ಕಣ್ಣಿಗೆ ಮಾತ್ರ ಸೃಷ್ಟಿಯ ವ್ಯವಹಾರಗಳು ಅಸಂಬದ್ಧವಾಗಿಯೂ ಉದ್ದೇಶರಹಿತ ವಾಗಿಯೂ ಅಶಾಶ್ವತವಾಗಿಯೂ ತೋರುತ್ತವೆ. ಸೃಷ್ಟಿಯು ಆತ್ಮನಿಂದ ಪ್ರಕಟ ವಾಗಿದೆ; ಆದ್ದರಿಂದ ಅದು ಆತ್ಮನಿಂದ ಅನ್ಯವಲ್ಲ ಎಂಬ ವಿಶ್ವಾಸ ಬೇಕು. ಒಂದು ವೇಳೆ ಅನ್ಯವೆಂದು ತೋರಿದರೆ, ಆ ತಿಳಿವಳಿಕೆ ಮೋಹಮೂಲವು. ಪ್ರಕೃತಿಯು

ಬಾಹ್ಯಪ್ರಸಾರಕ್ಕೆ ಮೋಹಗೊಂಡು ನಾವು ಅಜ್ಞಾನಿಗಳಾಗಿದ್ದೇವೆ ಅಷ್ಟೇ. ಪ್ರಕೃತಿಯಲ್ಲಿ ಸಿಲುಕಿದ ಮೋಹವನ್ನು, ವಿಷಯಗಳಿಗೆ ಅಂಟಿಕೊಂಡ ಆಸಕ್ತಿಯನ್ನು ಅಸಂಗಶಸ್ತ್ರದಿಂದ ಅಂದರೆ ಜ್ಞಾನಖಡ್ಗದಿಂದ ಕತ್ತರಿಸಬೇಕು. ಮತ್ತು ಮೂಲ ಪುರುಷನನ್ನು ಎಂದರೆ ಸತ್‌ವಸ್ತುವನ್ನು ಸೇರಬೇಕು ಎಂದು ಗೀತೆಯು ಹೇಳುತ್ತದೆ. ಇದರಿಂದ ಅಶ್ವತ್ಥವು ಬ್ರಹ್ಮವೆಂದೂ ಅಮೃತವೆಂದೂ, ಆದರೆ ಈ ಅಶ್ವತ್ಥವೃಕ್ಷವನ್ನು ಕಡಿಯಲು ಅಸಾಧ್ಯವೆಂದೂ ಉಪನಿಷತ್ತು ಹೇಳಿದರೆ ಗೀತೆಯು ಈ ಅಶ್ವತ್ಥವನ್ನು ಸಂಸಾರಕ್ಕೆ ಹೋಲಿಸಿ ಅಸಂಗ ಶಸ್ತ್ರದಿಂದ ಇದನ್ನು ಕಡಿದು ಹಾಕಬೇಕೆಂದೂ ಉಪದೇಶಿಸುವದು. ಸಂಸಾರದ ದುಷ್ಟ ಚಕ್ರದಲ್ಲಿಯೇ ಸುಳಿದಾಡುವದರಿಂದ ಪ್ರಗತಿಯಿಲ್ಲ. ಈ ಚಕ್ರಕ್ಕೆ ಆದಿ ಅಂತ್ಯ ಆಧಾರ ಯಾವುದೂ ಇಲ್ಲ. ಇದು ಅನಾದಿ ಪ್ರವಾಹರೂಪವಾಗಿರುವದು. ಅದರಿಂದ ಇದರಲ್ಲಿ ಮರ್ಮರ ಧ್ವನಿಯು ಹುಟ್ಟುವದೂ ಸ್ವಾಭಾವಿಕವು. ತ್ರಿಗುಣಾತ್ಮಕವಾದ ಪ್ರಕೃತಿಯು ತನ್ನ ಪ್ರಸಾರವನ್ನು ಮಾನವಲೋಕದಲ್ಲಿ ಹರಹಿದೆ. ಇಂತಹ ಪ್ರಕೃತಿಯಿಂದ ಇಂತಹ, ಸಂಸಾರದಿಂದ ಬಿಡುಗಡೆಯನ್ನು ಹೊಂದಲಿಕ್ಕೆ ಅನಾಸಕ್ತಿ ಯೋಗವು ಒಂದೇ ಒಂದು ಉಪಾಯವಾಗಿದೆ. ಆದ್ದರಿಂದ ಪ್ರಕೃತಿಯನ್ನು ಮೀರಿ ಪುರುಷನನ್ನು ಹೊಂದಬೇಕು. ಅದಕ್ಕಾಗಿ ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ ।' ಎಂದು ಗೀತೆಯು ಹೇಳುತ್ತದೆ.

ಈ ಅಶ್ವತ್ಥದೊಡನೆ ಈ ಸಂಸಾರದೊಡನೆ ಸ್ಕ್ಯಾಂಡೆನೇವ್ಹಿಯಾದ ಪುರಾಣದೊಳಗಿನ ಇಗ್‌ಡ್ರಾಸಿಲ್ ಎಂಬ ವೃಕ್ಷದ ವರ್ಣನೆಯನ್ನು ಹೋಲಿಸಿ ನೋಡಬೇಕು. ಕಾರ್ಲಾಯಿಲನು ಈ ವೃಕ್ಷವನ್ನು ಹೀಗೆ ಬಣ್ಣಿಸಿದ್ದಾನೆ: "ಅಖಂಡ ಜೀವನವು ಒಂದು ಮರವೆಂದು ರೂಪಿಸಲ್ಪಟ್ಟಿರುತ್ತದೆ. ಇಗ್‌ಡ್ರಾಸಿಲ್ ಎಂಬ ಈ ಪ್ರಚಂಡ ವೃಕ್ಷದ ಬೇರುಗಳು ರಸಾತಳದಲ್ಲಿರುತ್ತವೆ. ಬೊಡ್ಡೆಯು ಸ್ವರ್ಗದೆತ್ತರವಾಗಿದ್ದು ಸಂಸಾರದ ಗದ್ದಲದಲ್ಲೆಲ್ಲ ಇದರ ಟೊಂಗೆಗಳೇ ಟೊಂಗೆಗಳು. ಈ ಪ್ರಕಾರವಾಗಿದೆ ಈ ವಿಶ್ವವೃಕ್ಷವು. ರಸಾತಳದಲ್ಲಿರುವ ಅದರ ಅಡ್ಡಿಯಲ್ಲಿ ಮೂವರು ದೇವಕನ್ನಿಕೆಯರು— ಭೂತ, ವರ್ತಮಾನ ಭವಿಷ್ಯತ್ ಎಂಬವರು. ಅದರ ಟೊಂಗೆಗಳ ಮುಗುಳು—ಚಿಗುರುಗಳು ಕಷ್ಟಕಾರ್ಪಣ್ಯಗಳು; ಅನುವು—ಆಪತ್ತುಗಳು ಅಖಂಡ ದಿಕ್ಕುಗಳನ್ನು ವ್ಯಾಪಿಸಿರುವವು. ಅದರ ಒಂದೊಂದು ಎಲೆಯು ನುಡಿಯಾಗಿಯೂ, ಒಂದೊಂದು ನೀರೆಳೆಯು ನಡೆ-

ಯಾಗಿಯೂ ಇರುವುದಲ್ಲದೆ ಅದರ ಟೊಂಗೆಗಳು ಜಾತಿ ಜನಾಂಗಗಳ ಇತಿಹಾಸಗಳಾಗಿ ಇರುವವು. ಪುರಾತನ ಕಾಲದಿಂದ ಬಂದ ಮಾನವ ಪ್ರಪಂಚದ ಘೋಷಣೆಯೇ ಆ ಮರದ ಮರ್ಮರ ಧ್ವನಿಯು. ಮಾನವನ ಭಾವಸಂವೇಗದಿಂದುಂಟಾದ ಈ ಮರ್ಮರ ಧ್ವನಿಯು ಬೆಳೆಯುತ್ತ ಬೆಳೆಯುತ್ತ ಅಲ್ಲೋಲ ಕಲ್ಲೋಲವೆದ್ದು ದೇವತೆಗಳ ಬಳಗವೆಲ್ಲ ಕೂಗಿಡುವಂತೆ ಬಿರುಗಾಳಿಯೂ ಬೀಸುವದು. ಇದು ಇಗ್‌ಡ್ರಾಸಿಲ್ ಪ್ರಪಂಚವೃಕ್ಷ. ಭೂತ ವರ್ತಮಾನ್ ಭವಿಷ್ಯತ್; ಮಾಡಿದುದು, ಮಾಡುತ್ತಿರುವದು, ಮಾಡುವದು ಇದು ಮಾಡು ಧಾತುವಿನ ಅನಂತ ಕ್ರಿಯಾಮಾಲೆ" ಇದೊಂದು ಮಾಟ, ಇದೊಂದು ಕೈಚಳಕ ಈ ಸಂಸಾರವೃಕ್ಷದ ಬೇರುಗಳು ರಸಾತಳದಲ್ಲಿವೆ, ಬೊಡ್ಡೆಯ ತುದಿ ಸ್ವರ್ಗದಲ್ಲಿದೆ.

ಸಂಸಾರವೆಂದರೇನು? (The world process is the sleight of the mighty World-Spirit) ಕಾಲಪುರುಷನೊಡ್ಡಿದ ಜಾಲವಿದು. ಜೀವನವು ಅಖಂಡ ಪ್ರವಾಹದಂತೆ ಇದೆ ಎಂಬ ಜ್ಞಾನವಿಲ್ಲದುದರಿಂದ ಸಂಸಾರದ ತೊಡಕು. ಈ ಸಂಸಾರಕ್ಕೆ ಬಸವಣ್ಣನು ದಂದುಗವೆಂದು ಕರೆದಿದ್ದಾನೆ. ಈ ದಂದುಗವು ನಮ್ಮನ್ನು ದಂಗುಬಡಿಸುತ್ತಿರುವುದೇಕೆ? ಹಿಂದು–ಇಂದು-ಮುಂದುಗಳಲ್ಲಿ ನಮ್ಮ ಸಂದು ಬಿಡಲೊಲ್ಲದಾದುದರಿಂದ! ಈ ಸಂಸಾರ ದಂದುಗ ಈ ಅಶ್ವತ್ಥವು, ಕಾಲರಾಯನ ಕೈಚಳಕ. ಕಾಲಕಲ್ಪನೆಯಲ್ಲಿ ಮಾನವನು ಹಿಂದು ಮುಂದು ನೋಡಿ ನಡೆಯುವ ಪ್ರಾಣಿ. ಇಂದು ತುಸು ಸ್ಥಾಯೀಯಾಗಿ ಇದ್ದೇನೆ ಎಂದು ಬಗೆದು ಹಿಂದು ಇಂದು ಮುಂದುಗಳ ನಡುವಣ ಸಂದು ಬಿಡದುದರಿಂದ ದಂದುಗ ಹಿಂಗಲೊಲ್ಲದಾಗಿದೆ. ಬಸವಣ್ಣನ ಶಬ್ದಗಳಲ್ಲಿ ಸಂಸಾರ ವರ್ಣನೆ ಹೀಗಿದೆ :

'ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯ'
ಎನ್ನವನು ಕಾಯಯ್ಯಾ, ಕಾಯಯ್ಯಾ !
ಹುರುಳಿಲ್ಲ ! ಹುರುಳಿಲ್ಲ !!
ಕೂಡಲ ಸಂಗಮದೇವಾ, ಶಿವಧೋ ! ಶಿವಧೋ !!

ಅಖಂಡವಾದ ಈ ಕಾಲವನ್ನು ಏಕಕಾಲಕ್ಕೆ ಆಕಲನ ಮಾಡುವ ಸಾಮರ್ಥ್ಯ ನಮ್ಮ ಬುದ್ಧಿಯಲ್ಲಿಲ್ಲ. ಹಿಂದು–ಇಂದು–ಮುಂದುಗಳನ್ನು ಏಕಕಾಲಕ್ಕೆ ಆಕಲನ ಮಾಡುವಂತಹ ಮತಿ ಬೆಳೆದರೆ ಸಂಸಾರವೇನು ಮಾಡುವದು ? ದಂದುಗವೇಕೆ ದಂಗುಗೊಳಿಸುವದು ?

ಪೌರಾಣಿಕ ಕಲ್ಪನೆಯಲ್ಲಿಯೂ ಸಂಸಾರವು ಒಂದು ವೃಕ್ಷದಂತಿದೆ ಎಂದು ಗೊತ್ತಾಯಿತು. ಔಪನಿಷದಿಕ ಕಲ್ಪನೆಯಲ್ಲಾಗಲಿ, ಗೀತೆಯ ಕಲ್ಪನೆಯಲ್ಲಾಗಲಿ ಇಲ್ಲವೆ ಪುರಾಣದ ಕಲ್ಪನೆಯಲ್ಲಾಗಲಿ ಬರುವ ಸಂಸಾರ ವೃಕ್ಷದ ವರ್ಣನೆ ಬಾಹ್ಯ ದೃಷ್ಟಿಯಿಂದ. ನಮ್ಮ ಹೊರಗಣ್ಣಿಗೆ ಕಾಣುವ ಪ್ರಪಂಚ ವಿಸ್ತಾರವು ವಿಸ್ತಾರವಾದ ಒಂದು ಮರಕ್ಕೆ ಹೋಲಿಸಲ್ಪಟ್ಟು ಬ್ರಹ್ಮಾಂಡದ ವರ್ಣನೆಯನ್ನು ವ್ಯಕ್ತಗೊಳಿಸುತ್ತಿದೆ. ಯೋಗಶಾಸ್ತ್ರವಾದರೂ ಈ ಜೀವನವು ಒಂದು ಮರವೋಪಾದಿಯಲ್ಲಿ ಇರುತ್ತದೆಂದು ಹೇಳುತ್ತದೆ. ಈ ಮರವು ಹೊರಗಿಲ್ಲ, ಆದರೆ ಅಂತರ್‌ದೃಷ್ಟಿಯಿಂದ ಕಂಡು ಈ ವೃಕ್ಷವು ನಮ್ಮ ದೇಹದಲ್ಲಿಯೇ ಇದೆಯೆಂದು ಯೋಗಶಾಸ್ತ್ರವು ಹೇಳುತ್ತಿದೆ. ಅಂತರಂಗ ದೃಷ್ಟಿಯಿಂದ ಯೋಗಶಾಸ್ತ್ರದಲ್ಲಿ ಬರುವ ವೃಕ್ಷ ವರ್ಣನೆಯು ಪಿಂಡದ ಸ್ವರೂಪವನ್ನು ಮಾಡಿಕೊಡುತ್ತದೆ.

ಭೂಮಿಯಾಕಾಶ ಒಂದು ಜೀವನುದರ.
ಅಲ್ಲಿ ಘನವನು ಘನವೆನ್ನದೆ ಕಿರಿದನು ಕಿರಿದೆನ್ನದೆ.
ಆ ಘನವು ಮನಕ್ಕೆ ಸಮನಿಸಿದರೆ
ಇನ್ನು ಸರಿಯುಂಟೆ, ಗುಹೇಶ್ವರಾ ?

ಎಂಬ ಪ್ರಭುದೇವರ ಬೆಡಗಿನ ನುಡಿಯಲ್ಲಿ ಪಿಂಡ–ಬ್ರಹ್ಮಾಂಡಗಳ ಐಕ್ಯದ ರಹಸ್ಯವು ವ್ಯಕ್ತವಾಗುತ್ತದೆ. ಪಿಂಡಾಂಡದ ಕಿರಿತನ ಹಾಗು ಬ್ರಹ್ಮಾಂಡದ ಹಿರಿತನ ಇವೆರಡೂ ಅರಿವಿನಲ್ಲಿ ಅರಿತುಹೋಗುವವು. ತನ್ನಿಂದಲೇ ಆರಂಭವಾಗಬೇಕಾದ ಯೋಗಸಾಧನೆಯಿಂದ ಪಡೆಯುವ ಅರಿವಿನ ದೃಷ್ಟಿಗೆ ದೇಹವೃಕ್ಷವು ಅಂತರ್ಬಾಹ್ಯಗಳ ಸಮನ್ವಯವನ್ನು ಸೂಚಿಸುತ್ತದೆ.

ಯೋಗಶಾಸ್ತ್ರವು ಈ ಜೀವನವು ಒಂದು ವೃಕ್ಷದೋಪಾದಿಯಲ್ಲಿ ಇದೆ ಎಂದು ಹೇಳುತ್ತದೆ. ಜೀವನವನ್ನು ಕುರಿತು ಅಭ್ಯಾಸ ಮಾಡಿದರೆ ಜೀವಾಣುವಿನಲ್ಲಿ ಅಮರತ್ವವು ಅಡಗಿರುತ್ತದೆಂದು ಗೊತ್ತಾಗುತ್ತದೆ. ಈ ವೃಕ್ಷದ ಹುಟ್ಟು ಬೆಳವಣಿಗೆಗಳ ಬಗೆಗೆ ಕಾಲದ ಇತಿ–ಮಿತಿಯಿಲ್ಲ. ಆದರೆ ಜೀವಾಣುವು ಭೌತಿಕ ವಿಚಾರವನ್ನು ವ್ಯಕ್ತಗೊಳಿಸಿದರೆ ಅದು ಕೇವಲ ವಿಚಾರದ ಒಂದು ಮಗ್ಗಲು ಮಾತ್ರ. ಅದರ ಇನ್ನೊಂದು ಸ್ವರೂಪವು ಅಧ್ಯಾತ್ಮವನ್ನು ಪ್ರಕಟಿಸುವದು. ಇಂಗ್ಲಿಷಿನಲ್ಲಿಯ Soul, Nons, Psyche, Entelechy, Anima, Munde, The Logos ಇತ್ಯಾದಿ ಪದಗಳು ಈ ಆತ್ಮದ

ವಿವಿಧ ರೂಪಗಳು. ಪ್ರಾಕೃತಕ್ಕೆ ಒಳಗಾದ ಜೀವಾಣುವೇ ಅಮರವಾಗಿರುವ-ದಾದರೆ ಆಧ್ಯಾತ್ಮದಲ್ಲಿ ವ್ಯವಹರಿಸುವ ಅದು ಅಷ್ಟೇ ಅಮರವಾಗಿರಬೇಕು. ಅದೇಕೆ ಅದಕ್ಕಿಂತ ಇನ್ನೂ ಹೆಚ್ಚಾಗಿ ಅಮರವಾಗಿರಬೇಕು. ಆಧುನಿಕ ವಿಜ್ಞಾನವು ಈ ಎರಡೂ ಸ್ವರೂಪಗಳಲ್ಲಿ ಜೀವಾಣುವಿನ ವಿಕಾಸವನ್ನು ಕುರಿತ ವಿಚಾರವನ್ನು ಎಡವಿಡದೆ ನಡೆಸಿರುತ್ತದೆ. ಜೀವನ ವೃಕ್ಷವು ಬೆಳೆಯುತ್ತ ಬೆಳೆ-ಯುತ್ತ ಮಾನವ ಜನಾಂಗದವರೆಗೆ ಬಂದು ನಿಂತಿರುವದು; ಮಾತ್ರವಲ್ಲ, ಅದು ಋಷಿಗಳು, ಶರಣರು, ಸತ್ಪುರುಷರು, ಅನುಭಾವಿಗಳು ಎಂಬ ಹಣ್ಣುಗಳನ್ನು ನೀಡುತ್ತಿರುವದು.

'ಶರೀರಮಾದ್ಯಂ ಖಲು ಧರ್ಮ ಸಾಧನಂ' ಎಂಬ ಮಾತು ಆಧ್ಯಾತ್ಮ ಸಾಧನೆಗೆ ಅವಶ್ಯವಾದರೆ ಯೋಗಸಾಧನೆಗೆ ಆ ಶರೀರವು ಇನ್ನೂ ಆರೋಗ್ಯ-ವುಳ್ಳದ್ದಾಗಿರಬೇಕು. ಮಾನವ ದೇಹದಲ್ಲಿ ಕೇಂದ್ರನರಮಂಡಲವು ಅತ್ಯಂತ ಮಹತ್ವದ ಮತ್ತು ಗೂಢವಾದ ಪಾತ್ರವನ್ನು ವಹಿಸುತ್ತದೆ. ಶರೀರಶಾಸ್ತ್ರ ದೃಷ್ಟಿಯಿಂದ ವಿಚಾರಿಸಿದರೆ ಅದರ ಎಲ್ಲ ಕಾರ್ಯಗಳು ನಡೆದಿರುವದು ಈ ನರ ಮಂಡಲದ ಮುಖಾಂತರವಾಗಿಯೇ! ಮಾನವನ ಚಟುವಟಿಕೆಗಳು ದೈಹಿಕ-ವಿರಲಿ, ಮಾನಸಿಕವಿರಲಿ ಅವೆಲ್ಲಕ್ಕೂ ಕೇಂದ್ರ ನರಮಂಡಲವೇ ಮೂಲವಾಗಿದೆ. ಈ ನರಮಂಡಲವೇ ಅಶ್ವತ್ಥವೃಕ್ಷವು, ವೃಕ್ಷವು ಬೊಡ್ಡೆ–ಬೇರುಗಳಿಂದ ಟೊಂಗೆ-ಟಿಸಿಲುಗಳಿಂದ ಕೂಡಿಕೊಂಡಿರುವಂತೆ ದೇಹದ ತುಂಬೆಲ್ಲ ಈ ನರಮಂಡಲದ ಶಾಖೆ ಉಪಶಾಖೆಗಳು ಹರಡಿಕೊಂಡಿರುತ್ತವೆ. ದೇಹದ ಬೆನ್ನುಹುರಿಯು ಮಿದುಳಿನಿಂದ ಹೊರಟು ಗುದದ್ವಾರದ ವರೆಗೆ ಇಳಿದಿರುತ್ತದೆ. ನರಮಂಡಲದ ಶಾಖೋಪಶಾಖೆಗಳು ದೇಹದಲ್ಲೆಲ್ಲ ವ್ಯಾಪಿಸಿರುವದು ಈ ಹುರಿಯ ಮುಖಾಂತರವಾಗಿಯೇ. ಬೆನ್ನುಹುರಿಗೆ ಮೇರುಹುರಿ ಮೇರುದಂಡ ಎಂದು ಹೆಸರು. ಯೋಗಶಾಸ್ತ್ರದಲ್ಲಿ ಸಹಸ್ರಾರ ಚಕ್ರದಿಂದ ಆಧಾರಚಕ್ರದ ವರೆಗೆ ಮೇರುದಂಡವು ಇಳಿದಿರುವದೆಂದು ಹೇಳುತ್ತಾರೆ. ಮೇಲಿನ ಭಾಗದ ಸಹಸ್ರಾರಕ್ಕೆ ಊರ್ಧ್ವಸೃಷ್ಟಿಯೆಂದೂ ಕೆಳಭಾಗದ ಆಧಾರಕ್ಕೆ ಅಧಃಸೃಷ್ಟಿಯೆಂದೂ ಹೆಸರನ್ನು ಕೊಡಲಾಗಿದೆ. ಪೌರಾಣಿಕ ದೃಷ್ಟಿಯಿಂದ ಇವಕ್ಕೆ ಸ್ವರ್ಗ (Heaven) ಪಾತಾಳ, ರಸಾತಳ (Hedes, Hela,) ಎಂದು ಕರೆಯುವರು. ಭೂತ ಪ್ರಾಣಿ ಯೆನಿಸುವ ಮಾನವನು ಕೆಳ ಸೃಷ್ಟಿಯಲ್ಲಿ ತೊಳಲುತ್ತಾನೆ. ಮತ್ತು ಸ್ವರ್ಗೀಯ ಗುಣಮಂಡಿತ ಮಾನವನು ಮೇಲಿನ ಸೃಷ್ಟಿಯಾದ ಸ್ವರ್ಗದಲ್ಲಿ ವಿಹರಿಸುತ್ತಾನೆ.

ಕೇಂದ್ರ ನರಮಂಡಲದ ದೆಸೆಯಿಂದ ಮಾನವ ದೇಹ ರಚನೆಯು ವೃಕ್ಷದಂತೆ ಕಾಣುವದು. ಗಿಡದ ಬೊಡ್ಡೆ ಬೇರುಗಳಿಗೆ ನೀರು ಬೇಕಷ್ಟೆ! ಅದಕ್ಕಾಗಿಯೇ ಯೋಗಶಾಸ್ತ್ರದಲ್ಲಿ ಶೀರ್ಷಾಸನವನ್ನು ಹಾಕಲು ತಿಳಿಸುತ್ತಾರೆ. ಇದರಿಂದ ಹೃದಯದಿಂದ ಶುದ್ಧ ರಕ್ತ ಸಂಚಲನೆ ಮಿದುಳಿನ ಕಡೆಗೆ ಹೆಚ್ಚು ಪ್ರಮಾಣದಿಂದ ಆಗಿ ಅದನ್ನು ಹೆಚ್ಚು ಭದ್ರಗೊಳಿಸುವದು. ದೇಹದ ಎಲ್ಲ ಅವಯವಗಳಿಗೂ ಆರೋಗ್ಯವುಂಟಾಗಬೇಕಾದರೆ ರಕ್ತಸಂಚಲನೆಯು ಆವಶ್ಯಕ! ಯಾವ ಅವಯವಕ್ಕೆ ರಕ್ತವು ಸರಿಯಾಗಿ ಪೂರ್ತಿಯಾಗಿ ಪ್ರವಹಿಸುತ್ತಿರುವದಿಲ್ಲವೋ ಆ ಅವಯವದ ಕಾರ್ಯವು ಸ್ಥಗಿತವಾಗಿ ದೇಹವು ರೋಗಕ್ಕೆ ತುತ್ತಾಗುವದು. ದೇಹವು ರೋಗಕ್ಕೆ ತುತ್ತಾಗದೆ ಯೋಗಕ್ಕೆ ಅದು ಅನುಕೂಲವನ್ನೊದಗಿಸಿಕೊಡಬೇಕು. ಅದಕ್ಕಾಗಿ ಮಿದುಳನ್ನು ಮೊದಲು ಮಾಡಿ ಇನ್ನುಳಿದ ಎಲ್ಲ ಅವಯವಗಳಿಗೂ ರಕ್ತವು ಸರಿಯಾಗಿ ಮುಟ್ಟುತ್ತಿರಬೇಕು. ಮಿದುಳಿಗೆ ರಕ್ತವು ಸಾಕಷ್ಟು ಒದಗದಿರುವುದಕ್ಕೆ ಇನ್ನೂ ಒಂದು ತಡೆಯುಂಟು. ಆಕರ್ಷಣ ಶಕ್ತಿಯಿಂದ ಕೆಳಗಿನ ಅವಯವಗಳಾದ ಹೊಟ್ಟೆ ಕೈ—ಕಾಲುಗಳಿಗೆ ರಕ್ತವು ಸುಲಭವಾಗಿ ಹರಿದುಬರುತ್ತದೆ. ಆದರೆ ಮಿದುಳಿಗೆ ರಕ್ತವನ್ನು ಒದಗಿಸಲು ಹೃದಯವು ಹೆಚ್ಚು ಶ್ರಮ ವಹಿಸಬೇಕಾಗುತ್ತದೆ. ಶೀರ್ಷಾಸನದಿಂದ ಈ ತಡೆಯು ದೂರಾಗಿ ಮಿದುಳಿಗೆ ಸಾಕಷ್ಟು ರಕ್ತವು ಹರಿದುಬರುತ್ತದೆ; ಏಕೆಂದರೆ ಈ ಆಸನದಲ್ಲಿ ಮಿದುಳು ಹೃದಯದ ಕೆಳಗೆ ಬರುತ್ತದೆ. ಮಿದುಳಿಗೆ ಪ್ರತಿಕೂಲವಾಗಿದ್ದ ಆಕರ್ಷಣ ಶಕ್ತಿಯು ಈಗ ಅನುಕೂಲವಾಗುತ್ತದೆ. ಆಮ್ಲ ಜನಕದಿಂದೊಡಗೂಡಿದ ಪರಿಶುದ್ಧವಾದ ರಕ್ತವು ಪೋಷಕದ್ರವ್ಯಗಳೊಡನೆ ಹೃದಯದಿಂದ ಹೊಸದಾಗಿ ಹೊರಟು ಮಿದುಳಿಗೆ ನುಗ್ಗಿಬರುತ್ತದೆ. ಅಲ್ಲದೆ ಈ ರಕ್ತದ ಬಲದಿಂದ ಮಿದುಳಿನಲ್ಲಿರುವ ನಿರ್ನಾಳ ಗ್ರಂಥಿಗಳಾದ ಪೀನಿಯಲ್ ಗ್ರಂಥಿ (Peneal Gland) ಮತ್ತು ಪಿಚುಟರಿ ಗ್ರಂಥಿ (Pitutary Gland) ಗಳಿಗೆ ಸಾಮರ್ಥ್ಯವೊದಗಿ ಅವುಗಳಲ್ಲಿಯ ರಸವಿಶೇಷವು ಸಮೃದ್ಧವಾಗುವದು. ಅದರಿಂದ ಒಂದರ (ಪೀನಿಯಲ್ ಗ್ರಂಥಿ) ರಸವಿಶೇಷದಿಂದ ಜನನೇಂದ್ರಿಯದ ಅಭಿವೃದ್ಧಿಗೂ ದೇಹದ ಇತರ ಭಾಗದ ಬೆಳವಣಿಗೆಗೂ ಸರಿಯಾದ ಅವಕಾಶವೊದಗುವದು. ಇನ್ನೊಂದರ (ಪಿಚುಟರಿ ಗ್ರಂಥಿ) ರಸವಿಶೇಷದಿಂದ ಎಲುವುಗಳಿಗೂ ನರಗಳಿಗೂ ಹೆಚ್ಚಾದ ಶಕ್ತಿಯು ದೊರೆತು ಇಡಿಯ ದೇಹದಲ್ಲಿ ನವಚೈತನ್ಯವುಂಟಾಗುತ್ತದೆ. ಯೋಗಿಗಳು ಪಾಲಿಸುವ ಶೀರ್ಷಾಸನದಲ್ಲಿ ಇಂಥ

ಮಹತ್ವವುಂಟು. ಗಿಡಗಳಿಗೆ ಹೂ–ಹಣ್ಣುಗಳು ಬಿಡುತ್ತವೆ. ದೇಹವೆಂಬ ಗಿಡಕ್ಕೆ ಸಹ ಈ ಹೂ-ಹಣ್ಣುಗಳು ಇಲ್ಲದಿಲ್ಲ. ಯೋಗಿಗಳು ದೇಹದಲ್ಲಿ ಕಂಡಿರುವ ಸಪ್ತಚಕ್ರಗಳೇ ಹೂಗಳು. ಇವನ್ನು ಸಪ್ತಕಮಲಗಳೆಂದೂ ಕರೆದಿರುವರು. ಶರೀರ ಶಾಸ್ತ್ರದಲ್ಲಿ ವಿವಿಧ ನಿರ್ನಾಳ ಗ್ರಂಥಿಗಳು (Ductless Glands) ಈ ಚಕ್ರಗಳನ್ನು (Plexes) ಸೂಚಿಸುತ್ತವೆ. ಗಿಡದ ಹಣ್ಣು ಅದರ ತುಟ್ಟತುದಿಯಲ್ಲಿ ಬಿಡುವದು. ಅದುವೆ ಅಮೃತಫಲ (Fruit of Immortality) ಸಹಸ್ರಾರ ಚಕ್ರದ ಕೊನೆಯಲ್ಲಿ ಕಾಣುವ ಅಮೃತಫಲ ಮಿದುಳಿನ ಭಾಗದಲ್ಲಿರುವ ಪೀನಿಯಲ್ ಗ್ರಂಥಿಗೆ (Peneal Gland) ನಮುವೆನಿಸಿದೆ. ಈ ಸಹಸ್ರಾರವು (ಈ ಪೀನಿಯಲ್ ಗ್ರಂಥಿಯು) ಅಮೃತಸ್ಯಂದಿಯಾದ ಪುಷ್ಪವೂ ಅಹುದು, ಫಲವೂ ಅಹುದು; ಅದು ಎಲ್ಲೆಡೆಯಲ್ಲಿ ಸೌಷ್ಟವದ ಸುವಾಸನೆಯನ್ನು ಬೀರುವ, ಶ್ರೇಷ್ಠವಾದ ಮಾಧುರ್ಯವನ್ನು ಸುರಿಸುವ ಅಮರ ಝುರಿಯು.

ಯೋಗಸಾಧನೆಯ ಪ್ರಥಮ ಲಕ್ಷಣಗಳನ್ನು ಶ್ವೇತಾಶ್ವತರ ಉಪನಿಷತ್ತು ಬಹಳ ರಮ್ಯವಾಗಿ ಬಣ್ಣಿಸಿರುತ್ತದೆ. ಅದು ಹೇಳುವದು :

ಲಘುತ್ವಮಾರೋಗ್ಯಮಲೋಲುಪತ್ವಂ
ವರ್ಣಪ್ರಸಾದಂ ಸ್ವರಸೌಷ್ಟವಂ ಚ ।
ಗಂಧಃ ಶುಭೊ ಮೂತ್ರಪುರೀಷಮಲ್ಪಂ
ಯೋಗಪ್ರವೃತ್ತಿಂ ಪ್ರಥಮಾಂ ವದಂತಿ ॥

ದೇಹವು ಹಗುರಾಗುವದು, ನಿರೋಗಿಯಾಗುವದು. ವಿಷಯಾಸಕ್ತಿ ದೂರಾಗುವದು. ಶರೀರವು ಕಾಂತಿಯನ್ನು ತಳೆಯುವದು. ಸ್ವರವು ಮಧುರವಾಗುವದು. ದೇಹದಲ್ಲಿ ಸುಗಂಧವು ಹುಟ್ಟುವದು. ( ಯೋಗಾನುಸಂಧಾನದಿಂದ ಬೆವರು ಹೆಚ್ಚಾಗಿ ಬಿಡುವದರಿಂದ ) ಮಲಮೂತ್ರಗಳ ಪ್ರಮಾಣವು ಅಲ್ಪವಾಗುವದು. ಸಹಸ್ರಾರಚಕ್ರದ ಅಮೃತಕುಂಭದಿಂದ ಅವಿರತವಾದ ಸೊದೆಯು ಸುರಿಯುವದು.

ಇಂಬಾದ ಬ್ರಹ್ಮದಲ್ಲಿ ತುಂಬಿದ ಜಗವೆಲ್ಲ ಸಂಭ್ರಮಿಸುತ್ತಿದೆ.
ಕುಂಭದೊಳಗಣ ಸುಧೆಯನುಂಬ ಭೇದವನರಿಯದೆ
ಸುಂಬಳವನುಂಡಂತಾದುದು ಜಗವೆಲ್ಲವು.

ಒಂಬತ್ತು ನಾಳಗಳೊಳಗಣ ಮಧ್ಯನಾಳದ ಬೆಂಬಳಿಯಲ್ಲಿ
ಎಯ್ದಿದಾತಗೆ ಸುಧೆ ಸಾಧ್ಯವು.
ತೊಂಬತ್ತಾರು ಅಂಗುಲ ದೇಹವನು ತುಂಬುವದು ಆ ಸುಧೆಯು;
ಮತ್ತೊಂದು ಸುಧೆಯನು ಹಂಬಲಿಸಲೇಕೆ
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ?

ಸ್ವತಂತ್ರ ಸಿದ್ಧಲಿಂಗೇಶ್ವರ ಯೋಗಿಗಳು ಈ ವಚನದಲ್ಲಿ ತಿಳಿಸುವ ಮಧ್ಯನಾಳವು ಸುಷುಮ್ನಾ ನಾಡಿಯನ್ನು ತಿಳಿಸುವದು. ಜನಸಾಮಾನ್ಯರಲ್ಲಿ ಉಸಿರಿನ ಎಡೆಯಾಟವು ಇಡಾ ಪಿಂಗಳ ಎಂಬೆರಡು ನಾಡಿಗಳ ಮುಖಾಂತರ ನಡೆಯುವದು. ಅದೂ ಸಹ ಕ್ರಮಬದ್ಧವಾದ ರೀತಿಯಲ್ಲಿ ನಾಗುತ್ತಿರುವದಿಲ್ಲ. ಯೋಗದ ಅನುಸಂಧಾನದ ಪ್ರಗತಿಯಲ್ಲಿ ಇಡಾ ಪಿಂಗಳ ನಾಡಿಗಳಿಂದ ನಡೆಯುವ ಪ್ರಾಣವ್ಯಾಪಾರವು ನಿಂತು ಸುಷುಮ್ನಾ ನಾಡಿಯಿಂದಲೇ ಪ್ರಾರಂಭವಾದರೆ ಬ್ರಹ್ಮರಂಧ್ರದ ಅಮೃತಕುಂಭದ ಬಾಯಿ ತೆರೆದು ಚಿದ್ರಸವು, ಆನಂದಸುಧೆಯು ಓತಪ್ರೋತವಾಗಿ ಸುರಿಯುತ್ತ ವ್ಕ್ತಿ ಮನಗಳನ್ನು ತಣಿಸುವದು; ಆತ್ಮವನ್ನು ಆನಂದಸಾಗರದಲ್ಲಿ ತೇಲಿಸುವದು, ತೃಪ್ತಿಗೊಳಿಸುವದು. ಈ ಅಮೃತಸುಧೆಯನ್ನು ಸೇವಿಸುವ ಅವಸ್ಥೆಗೂ ಅಜ್ಞಜೀವಿಗಳು ಸುಂಬಳವನ್ನು ನುಂಗುವ ಅವಸ್ಥೆಗೂ ಇರುವ ಅಂತರವನ್ನು ಕಾಣುವದು ತೊಡಕಿನದಲ್ಲ. ಮನಸ್ಸುಮಾಡಿ ಸಂಕಲ್ಪವನ್ನು ಬೆಳಿಸಿಕೊಂಡರೆ ಸಾಮಾನ್ಯರೂ ಈ ಉಚ್ಚ ಸ್ಥಿತಿಯನ್ನು ಪಡೆಯಬಲ್ಲರು. ನವನಾಳಗಳಲ್ಲಿ ಗತಿಯಿರುವ ಜೀವನ ವ್ಯಾಪಾರವೆಲ್ಲ ತಡೆದು ಮಧ್ಯನಾಳದ ಮುಖಾಂತರ ಅದು ನಡೆಯುವುದಾದರೆ ಈ ಸ್ಥಿತಿಯು ಶಕ್ಯವೆನಿಸುವದು. ಅದಕ್ಕಾಗಿ ಕಟುತರವಾದ ಪ್ರಯತ್ನ ಬೇಕಾದೀತು ಅಷ್ಟೆ ! ಅಂತಾದಾಗ ಆ ಅಮೃತಸುಧೆಯು ಇಡಿಯ ದೇಹದ ತುಂಬೆಲ್ಲ ಪಸರಿಸುವದು. ದೇಹದ ಪ್ರತಿಯೊಂದು ಕೋಶವೂ ಆ ದಿವ್ಯ ರಸದಲ್ಲಿ ಮಿಂದು ಮಿನುಗುವದು. (Every cell of the body must be saturated by this divine fluid) ಆಗ ದೇಹವು ಅಮರವಾಗುವದು. ಎಲ್ಲರ ದೇಹದಲ್ಲಿಯೂ ಸಹಸ್ರಾರದಿಂದ ಆ ಸೊನೆಯು ಗಣನೆಗೆ ಬಾರದ ಅತ್ಯಲ್ಪ ಪ್ರಮಾಣದಿಂದಲಾದರೂ ಸುರಿಯುತ್ತಿದೆ. ಆದರೆ ದೇಹವು ಕಾಂತಿಯುಕ್ತವಾಗದಿರಲು ಕಾರಣವೇನು ? ಮನುಷ್ಯನು ಅದನ್ನು ಸವಿದು ಅಮರನಾಗದಿರಲು ಕಾರಣವಾವುದು? ದೇಹದಲ್ಲಿಯ ಇನ್ನಿತರ ರಸಗಳ ಪ್ರಾಬಲ್ಯ

ದಲ್ಲಿ ಇದಕ್ಕೆ ಸ್ಥಾನವೆಲ್ಲಿ ದೊರೆಯಬೇಕು ? ಸಹಸ್ರಾರದಿಂದ ಇಳಿದು ನಾಭಿ ಚಕ್ರದ ವರೆಗೆ ಬಂದ ಈ ಅಲ್ಪ ಪ್ರಮಾಣದ ಚಿದ್ರಸವು ಅಲ್ಲಿದ್ದ ಅಗ್ನಿತತ್ವದಲ್ಲಿ ಸುರಿದು ಕಾದ ಹಂಚಿನ ಮೇಲೆ ಬಿದ್ದ ನೀರ ಹನಿಯಂತೆ ಗುರುತು ಇಲ್ಲದಂತೆ ಅರತು ಹೋಗುವದು. ನಾಭಿಚಕ್ರದಲ್ಲಿ ಅಗ್ನಿ ಇರುವುದರಿಂದಲೇ ಮನುಷ್ಯರು ಉಂಡ ಅನ್ನವು ಅರಗುವದು. ಅಮೃತಸುಧೆಯು ಈ ನಾಭಿಯ ವರೆಗೆ ಬಂದೊಡನೆ ಕಮರಿ ಬಿಡುವುದರಿಂದ ಅದರ ಕೋಮಲತೆಯನ್ನು ಊಹಿಸಿಕೊಳ್ಳ ಬೇಕು. ಸಹಸ್ರಾರದಿಂದ ಹರಿದು ನಾಭಿಯಲ್ಲಿ ಕಮರಿಹೋಗದಂತೆ ಓತಪ್ರೋತ ವಾಗಿ ಸುರಿವ ಆ ಅಮೃತರಸವು ಆಧಾರದ ವರೆಗೆ ಇಳಿದರೆ ಅದು ಸರ್ವಾಂಗವನ್ನು ವ್ಯಾಪಿಸಿ ಅದಕ್ಕೆ ಸುಂದರ ಕಾಂತಿಯೊಗೆದು ಕಳೆಯೇರುವದು. ಆಗ ದೇಹವು ಅಮರವಾಗುವದು. ಅಯ್ಯಾ ಮಾನವ, ನಿನ್ನ ದೇಹದಲ್ಲಿ ಸಹಸ್ರಾರ ಚಕ್ರವಿದೆ, ಅಲ್ಲಿ ಅಮೃತಕುಂಭವಿದೆ, ಅದರಿಂದ ಅಮೃತವು ಸಂತತ ಧಾರೆಯಾಗಿ ಸುರಿ-ಯುತ್ತಿದೆ, ಅದನ್ನು ಸೇವಿಸಿ ನೀನು ಅಮರನಾಗು— ಎಂದು ಯೋಗಶಾಸ್ತ್ರವು ಬೋಧಿಸುವದು, ಈ ಅಶ್ವತ್ಥವೃಕ್ಷ ವಿದ್ಯೆಯು ಉಪದೇಶಿಸುವದು. ಇದೇ ಅಮರದ ಅಂದರೆ ಅಶ್ವತ್ಥವೃಕ್ಷದ ನೆಲೆ–ಕಲೆಗಳನ್ನು ಅರಿಯುವದರಿಂದ, ಅರಿತು ಆಚರಿಸುವದರಿಂದ ಆಗುವ ಲಾಭವು.



# ಈಶ್ರಮ

ಭಾರತೀಯರಲ್ಲಿ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ ಎಂಬ ನಾಲ್ಕು ಆಶ್ರಮಗಳು ಪ್ರಸಿದ್ಧವಾಗಿರುತ್ತವೆ. ಆದರೆ 'ಆಶ್ರಮವನ್ನು ತೆಗೆದುಕೊ' ಎಂಬ ಮಾತಿನಲ್ಲಿ ಆಶ್ರಮ ಪದಕ್ಕೆ ವಿಶಿಷ್ಟವಾದ ಅರ್ಥವುಂಟು. ನಾಲ್ಕನೆಯ ಆಶ್ರಮವಾದ ಸನ್ಯಾಸ ಪರವಾಗಿಯೇ ಇಲ್ಲಿ 'ಆಶ್ರಮ' ಎಂಬ ಪದವು ಬಳಿಸಲ್ಪಡುತ್ತದೆ. 'ಆಶ್ರಮ' ಪದದಲ್ಲಿಯ 'ಆ' ಶಬ್ದವು ದೂರದರ್ಶಕವಾಗಿದ್ದು 'ಆಶ್ರಮ' ಎಂಬುದಕ್ಕೆ ಪ್ರಸಿದ್ಧವಾದ ಆ ಚತುರ್ಥ 'ಆಶ್ರಮ' ಎಂಬ ರೂಢವಾದ ಅರ್ಥವು ಸೂಚಿತವಾಗುತ್ತದೆ. ಇಲ್ಲಿ ವ್ಯಕ್ತವಾಗಿರುವ 'ಶ್ರಮ' ಪದಕ್ಕೆ 'ಸಾಧನೆ' ಎಂದು ಹೇಳುವುದಾದರೆ ಸಾಧನದಿಂದ ಆ ಪ್ರಖ್ಯಾತವಾದ ಅವಸ್ಥೆಯನ್ನು ಪಡೆಯುವಿಕೆ ಎಂಬ ಅರ್ಥವನ್ನು 'ಆಶ್ರಮ' ಪದದಲ್ಲಿ ಕಾಣ-ಬೇಕಾಗುವದು. ಈ ದೆಸೆಯಿಂದ 'ಆಶ್ರಮ' ಪದಕ್ಕೆ ವಾನಪ್ರಸ್ಥ ಹಾಗು ಸನ್ಯಾಸ ಅವಸ್ಥೆಗಳಲ್ಲಿ ಅಪೇಕ್ಷಿಸಬಹುದಾದ ಏಕಾಂತವಾಸ ಆತ್ಮಸಾಕ್ಷಾತ್ಕಾರ ಎಂಬ ಅರ್ಥ ಪ್ರತೀತಿಯಿರುತ್ತದೆ. ಆಶ್ರಮ ಪದದ ಜೊತೆಗೆ 'ಈಶ್ರಮ' ಎಂಬುದನ್ನು ಇರಿಸಿ ಅರ್ಥೈಸಿದಾಗ ಅಚ್ಚರಿಯೆನಿಸಬಹುದು. 'ಆಶ್ರಮ'ದಲ್ಲಿಯ ದೂರದರ್ಶಕವಾದ 'ಆ' ದಂತೆ ಈಶ್ರಮದಲ್ಲಿ 'ಈ' ಶಬ್ದವು ಸಮೀಪ ದರ್ಶಕವಾಗಿದೆ, ಆಶ್ರಮ ಈಶ್ರಮಗಳೆರಡರಲ್ಲಿ 'ಶ್ರಮ' ಶಬ್ದವು ಸಮಾನವಾಗಿದೆ, ಅದಕ್ಕೆ ಸಾಧನೆ ಎಂಬ ಅರ್ಥವೂ ಸಮಾನವಾಗಿದೆ ಎಂದು ಗಮನಿಸಿದಾಗ ಈಶ್ರಮಕ್ಕೆ ಲೋಕಾಂತ, ಲೋಕ ಕಲ್ಯಾಣಕ್ಕಾಗಿ ಶ್ರಮ ಸಾಧನೆ ಮಾಡುವದು ಎಂದು ಅರ್ಥವಾಗುತ್ತದೆ. ಆಶ್ರಮ ಪದದಿಂದ ಮೂಡಿ ಬಂದಿರುವ ಭಾವನೆ-ಯಿಂದಾಗಿ ವ್ಯಕ್ತಿಯ ವಿಕಾಸವು ಪ್ರಾಧಾನ್ಯವನ್ನು ಪಡೆಯುತ್ತದೆ. ಮತ್ತು ಇಹದ ಬಾಳುವೆಯ ಬಗೆಗೆ ಒಂದು ವಿಧವಾದ ಜಗುಪ್ಸೆ ಬೆಳೆದುಬರುತ್ತದೆ. ವಾನಪ್ರಸ್ಥ ವಿಶೇಷವಾಗಿ, ಸನ್ಯಾಸ ಆಶ್ರಮ ಪಾಲನೆಯಲ್ಲಿ ಜೀವನವು ಅಸ್ಥಿರ ಅನಿಶ್ಚಿತ. ಅದು ಸುಳ್ಳು ಟೊಳ್ಳು ಪೊಳ್ಳಾಗಿದೆ ಎಂಬ ತಿರಸ್ಕಾರ ಭಾವನೆ ಪ್ರಚುರವಾಗಿದೆ; ಲೋಕಾಂತ ಲೋಕ ಕಲ್ಯಾಣಕ್ಕಾಗಿ ಶ್ರಮ ಎಂಬ ಮಾತುಗಳಲ್ಲಿ ಇಹದಲ್ಲಿಯ ಜೀವನವು ತ್ಯಾಜ್ಯವೇನೂ ಅಲ್ಲ, ಅದಕ್ಕೆ ಸಲ್ಲಬೇಕಾಗಿದ್ದ ಪೂಜ್ಯ ಭಾವನೆಯನ್ನು ವ್ಯಕ್ತಗೊಳಿಸಬೇಕು. ಗೌರವವನ್ನು ತೋರಿಸಲೇ ಬೇಕು ಎಂಬ ಅಭಿಪ್ರಾಯ ಒಡಮೂಡಿರುತ್ತದೆ.

ಆಶ್ರಮ ಈಶ್ರಮಗಳಿಂದ ದೊರೆಯುವ ವ್ಯಕ್ತಿವಿಕಾಸ ಹಾಗು ಸಮಾಜ ಉದ್ಧಾರ ಎಂಬ ಅರ್ಥದ ಅಭಿವ್ಯಕ್ತಿಯು ಪ್ರತಿಯೊಂದು ಜನಾಂಗ ಜೀವನ-ದಲ್ಲಿಯೂ ಕಂಡುಬರುತ್ತದೆ. ಅರಬ್ಬೀ ಭಾಷೆಯಲ್ಲಿ ರಾಕ್ ಮತ್ತು ಸಬ್‌ಜಾ ಎಂಬ ಎರಡು ಪದಗಳಿರುತ್ತವೆ. ಆಶ್ರಮದಲ್ಲಿ 'ಸಬ್‌ಜಾ' ಎಂದರೆ ಎಲ್ಲರೂ ಹೋಗಿರಿ ಎಂಬ ಭಾವವೂ, ಈಶ್ರಮದಲ್ಲಿ ರಾಕ್ ರಕ್ ಎಂದರೆ ಎಲ್ಲರೂ ಇಲ್ಲಿಯೇ ಉಳಿಯಿರಿ ಎಂಬ ಭಾವವೂ ಅಡಗಿರುತ್ತದೆ. ಈ ಕರ್ಮಭೂಮಿಯ-ಲ್ಲಿಯೇ ಇದ್ದು ಕೊಂಡು ತ್ರಿಗುಣಗಳನ್ನು ಪರಿವರ್ತನೆಗೊಳಿಸಿ ಪ್ರಕೃತಿಯ ಜಾಡ್ಯ ವನ್ನು ಪರಿಹರಿಸಿಕೊಳ್ಳುವುದರಿಂದ ಚಿತ್‌ಶಕ್ತಿಯ ವಿಕಾಸವಡೆಯಲು ಶಕ್ಯವಿದೆ; ಇದರಿಂದ ವ್ಯಕ್ತಿ, ಸಮಾಜಗಳೆರಡರ ವಿಕಾಸವೂ ಹಿತವೂ ಸಾಧ್ಯವಾಗುವದು. ಆದ್ದರಿಂದ 'ಆಶ್ರಮ' ಜೀವನಕ್ಕಿಂತ 'ಈಶ್ರಮ' ಸಾಧನೆಯೇ ಮಿಗಿಲಾದುದು ಎಂದು ಹೇಳಲಾಗುತ್ತದೆ.

ಈಶ್ರಮದಲ್ಲಿ ನಾವು ಗಳಿಸಬೇಕಾದುದು ಪರಿವರ್ತನೆ, ಪರಾಙ್ಮುಖತೆಯಲ್ಲ. ಸಾಧನೆಗೆ ಈ ಸೃಷ್ಟಿಯಷ್ಟು ಶ್ರೇಷ್ಠವಾದ ಸ್ಥಾನ ಇನ್ನೊಂದಿರಲಿಕ್ಕಿಲ್ಲ. ಈ ಸೃಷ್ಟಿಯು ಸೃಷ್ಟಾರನಷ್ಟೇ ಸತ್ಯವಾಗಿರುವದರಿಂದ, ಸೃಷ್ಟಿಯ ಒಂದಂಶವಾದ ವ್ಯಕ್ತಿಗಳೂ ಸತ್ಯವಾಗಿರುವದರಿಂದ ಇದರ ಬಗೆಗೆ ಅಸಾಧುವಾದ ಅಭಿಪ್ರಾಯವು ಶ್ರೇಯಸ್ಕರವಲ್ಲ. ತಿಳಿದವರು ಸ್ವಹಿತಕ್ಕೆಂದು ಇದನ್ನು ತಿರಸ್ಕರಿಸಿದರೆ ಉಳಿ-ದವರು ಏನನ್ನು ಮಾಡಬೇಕು ? ತಮಗೆ ಅಲ್ಲದಿದ್ದರೂ ಮುಂಬರುವವರಿಗೆ ಈ ಸೃಷ್ಟಿಯು ಲೀಲಾಭೂಮಿಯಾಗಬೇಕು. ಸಾಧನೆಯಿಂದ ಸ್ವ-ಪರಹಿತವನ್ನು ಕಾಣಬಯಸುವ ಸಾಧಕರಿಗೆ ಇಲ್ಲಿ ಯಾವ ರೀತಿಯಿಂದಲೂ ಸಹಾಯ ಅನು-ಕೂಲತೆಗಳು ಇಲ್ಲದಿದ್ದರೆ ಎಲ್ಲವನ್ನೂ ನಿರಾಕರಿಸುವ ಸ್ವಭಾವವು ಸಹಜವಾಗಿ ಮೂಡಿಕೊಳ್ಳುವುದು. ಹೀಗೆ ಎಲ್ಲವನ್ನೂ ನಿರಾಕರಿಸುವುದರಿಂದ ತಮಗೆ ತಿಳಿಯದಂತೆ ತಮೋಗುಣವು ಬೆಳೆದುಬರುವುದು. ತಿರಸ್ಕಾರವೂ ಉಂಟಾಗ-ಬಾರದು, ತಮೋಗುಣವು ಬೆಳೆದು ಬರಕೂಡದು. ಇವೆರಡು ಪ್ರಕೃತಿಯ ಜಾಡ್ಯಗಳೇ. ಈ ಪ್ರಕೃತಿಯ ಜಾಡ್ಯವನ್ನು ನಿವಾರಿಸಲು ಪ್ರಯತ್ನಿಸದಿದ್ದರೆ ಅದು ಸಾಧನವೂ ಅಲ್ಲ. ಅದರಿಂದ ಯಾವ ಲಾಭವೂ ಇಲ್ಲ ಈ ಲೋಕಕ್ಕೆ. ಹೀಗೆ ಹೇಳುವುದರಿಂದ ಸಾಧನೆಗೆ ತಕ್ಕ ಸಂಪಾದನೆ ಬೇಡವೆಂದಲ್ಲ. ಸಾಧನೆ ಮಾಡಬೇಕು, ಸಂಪಾದನೆ ಮಾಡಿಕೊಳ್ಳಬೇಕು; ಆದರೆ ಇದುವೆ ಕೊನೆಯದಲ್ಲ. ಸಂಪಾದಿಸಿದುದನ್ನು ಸಸವೆಬೇಕಾಗುತ್ತದೆ, ಲೋಕ ಕಲ್ಯಾಣಕ್ಕಾಗಿ ವ್ಯಯಿಸ

ಬೇಕಾಗುತ್ತದೆ, ಇನ್ನುಳಿದವರ ಹಿತ ಸಾಧನೆಗಾಗಿ ಬಳಿಸಬೇಕಾಗುತ್ತದೆ. ಈಶ್ರಮದಲ್ಲಿ ಈ ಕ್ರಮವಡಗಿರುತ್ತದೆ.

ಸೃಷ್ಟಿಯು ದೃಶ್ಯ ಮತ್ತು ಅದೃಶ್ಯ ಎಂದು ಎರಡು ವಿಧವಾಗಿದೆ. ಮನವು ಅದೃಶ್ಯ ಸೃಷ್ಟಿಯ ಮೂಲವಾಗಿದೆ. ಅದರಂತೆ ದೇಹವು ದೃಶ್ಯ ದೃಷ್ಟಿಗೆ ಮೂಲವಾಗಿದೆ. ದೃಶ್ಯ ಅದೃಶ್ಯ ಸೃಷ್ಟಿಗಳಲ್ಲಿ ಯಾವುದಕ್ಕೂ ಮಿತಿ ತಪ್ಪಕೂಡದು. ಎಲ್ಲೆಡೆಯಲ್ಲಿ ಸಮತ್ವವನ್ನು ಪಡೆದು ನಡೆದುಕೊಳ್ಳಬೇಕಾಗುವದು. ಅದಕ್ಕಾಗಿ ದೇಹ ಮನಗಳು ಸುಸ್ಥಿರವಾಗಿ ಸುಸಂಬದ್ಧವಾಗಿದ್ದು ತಮ್ಮ ಕಾರ್ಯವನ್ನು ಮಾಡುತ್ತಿರಬೇಕಾಗುತ್ತದೆ. ದೇಹದ ಮೇಲಾಗುವ ಪರಿಣಾಮ ಮನದ ಮೇಲೆ, ಮನದ ಮೇಲಾಗುವ ಪರಿಣಾಮ ದೇಹದ ಮೇಲೆ ಉಂಟಾಗುವದು ಅನುಭವ ಸಿದ್ಧವಾದ ಮಾತು. ಅದಕ್ಕಾಗಿ ಒಂದರಲ್ಲಿ ಸಮತ್ವ ತಪ್ಪಿದರೆ ಇನ್ನೊಂದರಲ್ಲಿ ಅಸಮತ್ವವುಂಟಾಗುವದು ಅನಿವಾರ್ಯವಾಗಿದೆ. ಈ ದೆಸೆಯಿಂದ ದೃಶ್ಯ ಅದೃಶ್ಯ ಸೃಷ್ಟಿಗಳೆರಡರಲ್ಲಿ ಸ್ವಾಸ್ಥ್ಯ ತಪ್ಪಿಹೋಗುವದೂ ಸಹಜವಾಗುವದು. ಒಂದು ದೃಷ್ಟಿಯಿಂದ ವಿಚಾರಿಸಿದಾಗ ದೇಹದ ಸ್ವಾಸ್ಥ್ಯಗಿಂತ ಮನದ ಸ್ವಾಸ್ಥ್ಯವೇ ಮಿಗಿಲಾದುದು. ಮನಸ್ಸಿನ ಸ್ಥೈರ್ಯ ಸಂಕಲ್ಪ ಶಕ್ತಿಯ ಮುಖಾಂತರ ಅಸ್ವಾಸ್ಥ್ಯ ಗೊಂಡ ದೇಹಶಕ್ತಿಯನ್ನು ಪಡೆದುಕೊಳ್ಳಲಿಕ್ಕೆ ಸಾಧ್ಯವಿದೆ. ಅದಕ್ಕೆ ವ್ಯತಿರಿಕ್ತ ವಾಗಿ ದೇಹ ಸುಸ್ಥಿತಿಯಿಂದ ಮನದ ಸ್ವಾಸ್ಥ್ಯವುಂಟಾಗುವದು ಅಷ್ಟು ಸುಲಭ-ವಲ್ಲ. ದೃಶ್ಯ ಸೃಷ್ಟಿಗಿಂತ ಅದೃಶ್ಯ ಸೃಷ್ಟಿಯೇ ವಿಶಾಲವಾಗಿದೆ. ಅದಕ್ಕೋಸುಗ ವಿಶಾಲ ಸೃಷ್ಟಿಯ ಸಮತ್ವವನ್ನು ಅವಲಂಬಿಸಿ ದೃಶ್ಯ ಸೃಷ್ಟಿಯ ಸಮತ್ವವು ನಿಂತಿದೆಯೆಂದೂ ಅದು ಬೇಗನೆ ಅಳವಿಯಲ್ಲಿ ಅಂಕಿತದಲ್ಲಿ ಬರುವುದೆಂದೂ ಹೇಳಬಹುದು.

ಮನಸ್ಸಿನ ಸ್ವಾಸ್ಥ್ಯ–ಸಮತೆಗಳನ್ನು ಕುರಿತು ಆಲೋಚಿಸುವಾಗ ಅದರ ಎರಡು ಬಗೆಯಾದ ಚಿತ್ರಗಳು ಎದುರಿಗೆ ಬರುತ್ತವೆ. ಅದು ಜಾಗರಿತ (Conscious) ಮತ್ತು ಅಜಾಗರಿತ (Unconscious) ಎಂದು ದ್ವಿವಿಧ-ವಾಗಿದೆ. ಜಾಗರಿತ ಮನಕ್ಕಿಂತ ಅಜಾಗರಿತ ಮನವು ಎಷ್ಟೋ ಮಡಿ ಮಿಗಿಲಾ-ಗಿದೆ. ನೀರಲ್ಲಿ ಮುಳುಗಿದ ಬರ್ಫದ ಬಂಡೆ ನೀರ ಮೇಲೆ ಕಾಣುವ ಆ ಬಂಡೆಗಿಂತ ಅನೇಕ ಪಟ್ಟು ದೊಡ್ಡದಿರುತ್ತದೆ. ಹಾಗೆಯೇ ಅಜಾಗರಿತ ಮನ ಮತ್ತು ಜಾಗರಿತ ಮನಗಳು. ಗಜ್ಜರಿಯ ಮೊನೆಯ ಹಿಂದೆ ದೊಡ್ಡದೊಂದು ಗಡ್ಡೆಯೇ ಇರುತ್ತದೆ. ಹಾಗೆಯೇ ಜಾಗರಿತ ಮನದ ಹಿಂದೆ ಅಜಾಗರಿತ ಮನದ ವಿಶಾಲವಾದ ಒಂದು

ಸೃಷ್ಟಿಯು ಅಡಗಿರುತ್ತದೆ. ಈ ಜಾಗರಿತ ಮತ್ತು ಸುಪ್ತ ಮನಸ್ಸಿನ ವಿಭಾಗಗಳಲ್ಲಿ ಎಡೆವಿಡದೆ ಒಂದು ವಿಧವಾದ ಹೋರಾಟವು ನಡೆದಿರುತ್ತದೆ. ಇದನ್ನು ಮನ-ಗಾಣಲು ಜಾಗರದ ಸ್ಥಿತಿಯ ಮನದ ವ್ಯವಹಾರಕ್ಕೂ ಸ್ವಪ್ನದಲ್ಲಿ ನಡೆಯುವ ತದ್ವಿರುದ್ಧವಾದ ಮನದ ವ್ಯವಹಾರಕ್ಕೂ ಇರುವ ವಿಭಿನ್ನತೆಯನ್ನು ಪರೀಕ್ಷಿಸಿ ಕೊಳ್ಳಬೇಕು. ಮನದಲ್ಲಿ ಒಂದು, ಭಾವದಲ್ಲಿ ಇನ್ನೊಂದು ಎಂಬ ಸ್ಥಿತಿಯನ್ನೂ ಶೋಧಿಸಿಕೊಳ್ಳಬೇಕು. ಜಾಗರದಲ್ಲಿ ಬಯಕೆ ಈಡೇರದೆ ಅಂತರಂಗದಲ್ಲಿ ತಳಮಳ ವೆದ್ದು ಸ್ವಪ್ನದಲ್ಲಿ ಅದನ್ನು ಪೂರೈಸಿಕೊಳ್ಳುವ ಇಲ್ಲವೆ ಮನಸ್ಸಿನಲ್ಲಿದ್ದಂತೆ ಕೃತಿ-ಯಲ್ಲಿ ಬಾರದೆಯಿದ್ದ ಒಂದು ಹೊಂದಾಣಿಕೆಯಿಲ್ಲದ ವ್ಯವಸ್ಥೆಯಿಂದ ಬೆರೆತು ಯಾವುದೋ ಒಂದು ಅಶಾಂತಿಯು ಜೀವನದ ಸ್ವಾಸ್ಥ್ಯವನ್ನೇ ಕದಡುತ್ತ ಸಂಯಮವನ್ನು ಕೆಡಿಸಿಬಿಡುತ್ತದೆ ಎಂಬುದನ್ನು ಅರಿತುಕೊಳ್ಳಬೇಕು. ಮನಸ್ಸಿಗೆ ಸಾಸ್ಥ್ಯವಿಲ್ಲದುದೂ ಮತ್ತು ಅಶಾಂತಿಯ ತಳಮಳವು ಕಂಡುಕೊಂಡಿರುವದೂ ಒಂದು ರೋಗಲಕ್ಷಣವೇ ಸರಿ. ಜಾಗರಿತ ಅಜಾಗರಿತ ಮನಗಳಲ್ಲಿ ತಲೆದೋರಿದ ವಿರೋಧವನ್ನು (Conflict) ಪರಿಹರಿಸಿ, ವಿಶ್ರಾಮವನ್ನು ಹೊಂದಿ ನಿರೋಗ ಸ್ಥಿತಿಯನ್ನು ಪಡೆಯಬೇಕು. ಈ ಕರ್ತಾರನ ಕಮ್ಮಟದಲ್ಲಿ ಅಲ್ಲಿ ಸಲ್ಲುವಂತೆ ಇಲ್ಲಿಯೂ ಸಲ್ಲಬೇಕೆಂದು ಕಲ್ಯಾಣ ಬಸವಣ್ಣನು ಹೇಳಿದ್ದಾನೆ. ಇಂತಹ ನಿರೋಗಿಗಳೇ ಈ ಸಂಗತಿಯನ್ನು ಸಾಧಿಸಬಲ್ಲರು.

ವ್ಯಕ್ತ ಮತ್ತು ಅವ್ಯಕ್ತ ಸೃಷ್ಟಿಯಲ್ಲಿ ಒಂದೊಂದು ವಸ್ತುವಿಗೆ ಒಂದೊಂದು ಗುಣಧರ್ಮವಿರುತ್ತದೆ, ಒಂದೊಂದು ಶಕ್ತಿಯಿರುತ್ತದೆ. ಇದಕ್ಕೆ ಆ ವಸ್ತುವಿನ ಸ್ವಭಾವಧರ್ಮವೆಂದು ಹೆಸರು. ಇದು ಆ ವಸ್ತುವಿಗೆ ನೈಜವಾಗಿರುತ್ತದೆ. ಪದಾರ್ಥದ ನೈಜವಾದ ಸ್ವಭಾವವೇ ಸ್ವಧರ್ಮ. ಪೃಥ್ವಿಯಲ್ಲಿ ಧಾರಣಶಕ್ತಿಯೂ ಅಪ್ಪುವಿನಲ್ಲಿ ಆಪ್ಯಾಯನ ಶಕ್ತಿಯೂ ಅಗ್ನಿಯಲ್ಲಿ ದಾಹಕ ಶಕ್ತಿಯೂ ವಾಯು-ವಿನಲ್ಲಿ ಸಂಚಲನ ಶಕ್ತಿಯೂ ಆಕಾಶದಲ್ಲಿ ವ್ಯಾಪನ ಶಕ್ತಿಯೂ ನೈಜವಾಗಿ ಇರುವಂತೆ ಮನಸ್ಸಿನಲ್ಲಿ ಮನನಶಕ್ತಿಯೂ ಆತ್ಮನಲ್ಲಿ ಬುದ್ಧಿಶಕ್ತಿಯೂ ಪರಮಾತ್ಮ ನಲ್ಲಿ ಚಿತ್‌ಶಕ್ತಿಯೂ ಸ್ವಭಾವಸಿದ್ಧವಾಗಿರುತ್ತವೆ. ಇದುವೆ ಆ ವಸ್ತುವಿನ ಸ್ವಧರ್ಮ. ಮಾನವನು ತನ್ನ ಬುದ್ಧಿಯನ್ನು ಶುದ್ಧವಾಗಿಟ್ಟುಕೊಂಡು ಸಮ-ದೃಷ್ಟಿಯನ್ನು ಪಡೆದು ಸ್ವಧರ್ಮವನ್ನು ಸಂಯಮಧರ್ಮವನ್ನು ಪರಿಪಾಲಿಸಬೇಕು. ಇಂತಹ ಸ್ಥಿತಿಯಲ್ಲಿ ಆತನು ಕರ್ಮಗಳನ್ನೆಸಗುವದರಿಂದ ಕರ್ಮಲೇಪವು ಉಂಟಾ ಗುವದಿಲ್ಲವೆಂದು ಗೀತೆಯು ಹೇಳುತ್ತದೆ. ಖಗೋಲದಲ್ಲಿ ಸಹ ಅನೇಕ ನಕ್ಷತ್ರ

ಮಂಡಲಗಳ ಮತ್ತು ಸೂರ್ಯ ಮಂಡಲಗಳ ಮೂಲಕವಾಗಿ ಸ್ವಧರ್ಮ ಸಂಯಮ ಧರ್ಮಗಳು ಪಾಲಿಸಲ್ಪಡುತ್ತಿವೆ. ಸೂರ್ಯ ಮಂಡಲದಲ್ಲಿ ಒಂದು ನಿಯಂತ್ರಣ-ಕ್ಕೊಳಪಟ್ಟು ಒಂದು ಸಂಯಮದಿಂದ ಗ್ರಹ ನಕ್ಷತ್ರಾದಿಗಳು ಸ್ವಗತಿಯಿಂದ ಕೂಡಿಕೊಂಡು ಸೂರ್ಯನ ಸುತ್ತಲೂ ತಿರುಗುತ್ತಿಲ್ಲವೆ ? ತಮ್ಮ ಧರ್ಮವನ್ನು ಪಾಲಿಸುತ್ತಿಲ್ಲವೆ ? ಅಣುಗಳಲ್ಲಿಯ ಪ್ರೊಟೋನ್ ನ್ಯೂಟ್ರೋನ್ ಪ್ರೊಸಿಟ್ರೋನ್ ನಿಯಮಬದ್ಧವಾಗಿ ವರ್ತಿಸುತ್ತಿಲ್ಲವೆ ? ಸ್ವಧರ್ಮವನ್ನು ಆಚರಿಸುತ್ತಿಲ್ಲವೆ ? ಸರ್ವಜ್ಞತ್ವ ಸರ್ವಕರ್ತೃತ್ವ ಸರ್ವವ್ಯಾಪಕತ್ವ ಗುಣಮಂಡಿತನಾದ ಪರಮಾತ್ಮನೂ ತನ್ನ ಚಿಚ್ಛಕ್ತಿಯ ಮುಖಾಂತರವಾಗಿ ದಿವ್ಯಯೋಜನೆಯನ್ನು ಕ್ರಮಬದ್ಧವಾಗಿ ಸಾಗಿಸುತ್ತಿರುವನು, ಲೋಕವ್ಯವಹಾರವನ್ನು ನಿಯಮಬದ್ಧವಾಗಿ ನಡೆಸುತ್ತಿ-ರುವನು, ಸ್ವಧರ್ಮ ಪರಿಪಾಲನೆಯಲ್ಲಿ ನಿರತನಾಗಿರುವನು. ಹೀಗೆ ಸುತ್ತೆಲ್ಲ ಕ್ರಮಬದ್ಧತೆ, ಸಂಯಮಗಳು ಕಾಣುತ್ತಿರುವಾಗ ಮಾನವನು ಮನಸ್ಸಿಗೆ ಬಂದಂತೆ ನಡೆದು ಸಂಯಮಧರ್ಮವನ್ನು ಸ್ವಧರ್ಮವನ್ನು ಕಡೆಗಣಿಸುತ್ತ ಏಕೆ ಹೋಗಬೇಕು ? ಅದರಿಂದ ವ್ಯಕ್ತಿ ಸಮಾಜ ಜೀವನಗಳೆರಡಕ್ಕೂ ಭಂಗವುಂಟಾ-ಗುವದು, ಹಾನಿಯೊದಗುವದು. ಚತುರ್ವಿಧ ಪುರುಷಾರ್ಥಗಳಲ್ಲಿ ಧರ್ಮಕ್ಕೆ ಅಗ್ರಸ್ಥಾನವಿದೆ. ಅರ್ಥ ಕಾಮ ಮೋಕ್ಷಗಳನ್ನುಗಳಿಸುವುದು ಧರ್ಮದ ಸ್ವಧರ್ಮದ ಆಧಾರದ ಮೇಲೆಯೇ. ಅರ್ಥ ಕಾಮ ಮೋಕ್ಷಗಳು ವ್ಯಕ್ತಿಯ ಬಹಿರಂಗ ವ್ಯವ-ಹಾರಕ್ಕೆ ಸಂಬಂಧಪಟ್ಟವುಗಳಾದರೆ ಧರ್ಮವು ಅವನ ಅಂತರಂಗ ವ್ಯವಹಾರಕ್ಕೆ ಸಂಬಂಧಿಸಿರುತ್ತದೆ. ಸಂಯಮದಿಂದ ಅಂತರಂಗ ಬಹಿರಂಗಗಳು ಪರಿಶುದ್ಧವಾದರೆ ಆತ್ಮಸಂಗವು ತಾನಾಗಿಯೇ ಲಭಿಸುತ್ತದೆ.

ನಮ್ಮೀ ಪ್ರಪಂಚವು ಒಂದು ದ್ವಂದ್ವದ ವ್ಯೂಹವಾಗಿದೆ; ದ್ವಂದ್ವಗಳಲ್ಲಿ ಒಂದು ವಿಧವಾದ ಹೋರಾಟವಿದೆ. ಪ್ರಾಣಿಗಳಲ್ಲಿ ಸ್ವಭಾವವೈರವಿರುತ್ತದೆ. ಆದರೂ ಅವು ಸಂಯಮಧರ್ಮವನ್ನು ಪಾಲಿಸುತ್ತವೆ; ಆದ್ದರಿಂದಲೇ ಜೀವನವು ಮಾಧುರ್ಯಯುಕ್ತವಾಗುತ್ತದೆ. ಪ್ರತಿಯೊಂದು ವ್ಯಕ್ತಿಯೂ ತನ್ನತನ್ನ ಸೀಮಾರೇಖಾವಲಯದಲ್ಲಿಯೇ ವ್ಯವಹರಿಸುತ್ತದೆ, ಹಾಗೆ ವ್ಯವಹರಿಸಬೇಕು. ಸೀಮೆಯ ಉಲ್ಲಂಘನೆಯಲ್ಲಿ ಸಂಯಮಧರ್ಮಕ್ಕೆ ಅವಕಾಶವಿಲ್ಲ. ಸೀಮಾರೇಖೆಯನ್ನು ಮೀರಿದರೆ ಸಂಯಮಧರ್ಮಕ್ಕೆ ಚ್ಯುತಿಯೊದಗುತ್ತದೆ. ಮನುಷ್ಯನು ತನ್ನ ದೇಹ ಧರ್ಮ ಪರಿಪಾಲನೆಯಲ್ಲಿಯೂ ಅಮಿತವಾದ ಸಂಯಮವನ್ನು ವ್ಯಕ್ತಗೊಳಿಸ-ಬೇಕು. ಆಯುರ್ವೇದದ ಮೇರೆಗೆ ವಾತ ಪಿತ್ತ ಕಫಗಳೆಂಬ ತ್ರಿದೋಷಗಳು

ಸಮತ್ವದಲ್ಲಿ ಉಳಿದರೆ ಮನುಷ್ಯನು ನಿರೋಗಿಯಾಗುತ್ತಾನೆ. ಇದಕ್ಕೆ ಭಂಗ ಉಂಟಾದರೆ, ಇವುಗಳ ಗುಣಧರ್ಮಕ್ಕೆ ಚ್ಯುತಿಯುಂಟಾಗುವಂತೆ ನಡೆದರೆ, ಇವುಗಳಲ್ಲಿ ಸಮತ್ವವು ತಪ್ಪಿದರೆ ಆವನು ರೋಗಕ್ಕೆ ತುತ್ತಾಗುತ್ತಾನೆ. ಮನದ ಸ್ವಾಸ್ಥ್ಯದ ಬಗೆಗೂ ಹಾಗೆಯೇ. ಸತ್ವ ರಜ ತಮ ಗುಣಗಳಲ್ಲಿ ವ್ಯತ್ಯಾಸ ತೋರಿ-ದರೆ ಆಯಿತು, ಬಡಿದಾಟಕ್ಕೆ ಮೊದಲಾಗುವದು. ಪ್ರಪಂಚದಲ್ಲಿಯ ದ್ವಂದ್ವಗಳ ಮೂಲವು ತ್ರಿಗುಣಗಳ ವ್ಯತ್ಯಸ್ಥ ಸ್ಥಿತಿಯಲ್ಲಿಯೇ ಕಾಣಿಸಿಕೊಳ್ಳುವದು. ಸುಖದ ತಿಳಿವಳಿಕೆಯ ಬುಡದಲ್ಲಿ ರಾಗವೂ ದುಃಖದ ತಿಳಿವಳಿಕೆಯ ಹಿನ್ನೆಲೆಯಾಗಿ ದ್ವೇಷವೂ ವ್ಯಕ್ತಗೊಳ್ಳುತ್ತದೆ. 'ಸುಖಾನುಶಯೀ ರಾಗಃ, ದುಃಖಾನುಶಯೀ ದ್ವೇಷಃ'. ನಿಜವಾಗಿ ಸುಖವು ಸುಖವೂ ಅಲ್ಲ, ದುಃಖವು ದುಃಖವೂ ಅಲ್ಲ, ಸುಖವಾಗಲಿ ದುಃಖವಾಗಲಿ ಮೋಹಬೀಜವಾಗಿರುತ್ತದೆ. ಮೋಹವು ತಮೋ-ಗುಣ ಪ್ರಧಾನವಾದದ್ದು. ನಿರೋಗ ಸ್ಥಿತಿಯಲ್ಲಿದ್ದರೆ, ಸಮತ್ವದಲ್ಲಿ ಉಳಿದರೆ ತಮೋಗುಣವೂ ಇಲ್ಲ, ಮೋಹವೂ ಇಲ್ಲ, ರಾಗದ್ವೇಷವೂ ಇಲ್ಲ, ದ್ವಂದ್ವವೂ ಇಲ್ಲ. ಸಂಯಮಧರ್ಮವು ಆಗ ಸಹಜವಾಗಿ ವ್ಯಕ್ತಗೊಳ್ಳುತ್ತದೆ.

ಸಾಹಿತ್ಯವು ಜೀವನದ ಪಡಿನೆಳಲು. ಜೀವನದಲ್ಲಿ ಕಾಣುವ ಹರ್ಷ-ಹೋರಾಟ, ರಾಗ–ದ್ವೇಷ, ಸುಖ–ದುಃಖ ಇತ್ಯಾದಿಗಳು ಸಾಹಿತ್ಯದಲ್ಲಿ ಒಡ-ಮೂಡಿದಾಗ ಅದನ್ನು ಓದಿ ಮನಸ್ಸಿಗೆ ಅಲ್ಹಾದವನ್ನು ಮಾಡಿಕೊಳ್ಳುತ್ತೇವೆ. ನಾಟಕದಲ್ಲಿ ಸುಕುಮಾರ (Comedy) ಮತ್ತು ಆವಿದ್ಧ (Tragedy) ಗಳು ವ್ಯಕ್ತಿ ಮತ್ತು ಸಮಾಜಗಳ ಮನಸ್ಸಿನ ಚಿತ್ರವನ್ನು ಕೊಡುತ್ತವೆ. ಮನುಷ್ಯನು ತಾರುಣ್ಯದಲ್ಲಿದ್ದಾಗ ಹಾಗು ಜೀವನದಲ್ಲಿ ವಿಶೇಷವಾದ ಆಸಕ್ತಿಯಿಂದಿದ್ದಾಗ ಸುಕುಮಾರ ನಾಟಕಗಳೂ, ಜೀವನದ ಹೋರಾಟದಲ್ಲಿ ಸಾವುನೋವುಗಳೊದಗಿ ಅವರಲ್ಲಿ ವಿರಸವುಂಟಾದಾಗ ಆವಿದ್ಧ ನಾಟಕಗಳೂ ಅದರ ಯಥಾವತ್ತಾದ ಚಿತ್ರವನ್ನು ಕೊಡುತ್ತವೆ. ಸುಕುಮಾರ ಮತ್ತು ಆವಿದ್ಧ ನಾಟಕಗಳನ್ನು ಬರೆಯುವುದರಲ್ಲಿ ಪ್ರಖ್ಯಾತನಾದ ಶೆಕ್ಸಪಿಯರನೂ ಯೌವನಾವಸ್ಥೆಯಲ್ಲಿದ್ದಾಗ ಸುಕುಮಾರ ನಾಟಕಗಳನ್ನೂ, ವಿರಸವನ್ನು ಹೊಂದಿದಾಗ ಆವಿದ್ಧ ನಾಟಕ-ಗಳನ್ನೂ ಮತ್ತು ಒಂದು ಸಾಮ್ಯಾವಸ್ಥೆಗೆ ಬಂದಾಗ ಸರಸವಾದ 'ಸುರತನಗರದ ಶ್ರೇಷ್ಠಿ' (Merchant of Venice) ಎಂಬ ನಾಟಕವನ್ನು ಬರೆದನೆಂದು ಹೇಳುತ್ತಾರೆ. ನಾಟಕದಲ್ಲಿ ಇಲ್ಲವೆ ಸಾಹಿತ್ಯದಲ್ಲಿ ಚಿತ್ರಿತವಾದ ಜೀವನವು

ಸಂಯಮ ಧರ್ಮದ ತಿರಸ್ಕಾರ ಪುರಸ್ಕಾರಗಳಿಂದ ಒದಗುವ ಪರಿಣಾಮಗಳನ್ನೇ ಸೂಚಿಸುತ್ತಿದೆ.

ಅನೇಕ ಸಾರೆ ಪ್ರಕೃತಿಯಲ್ಲಿ ಹಲವಾರು ವ್ಯತ್ಯಾಸಗಳು ತಲೆದೋರುವವು. ಭೂಕಂಪವು ಕಾಣಿಸಿಕೊಳ್ಳುವದು, ಜ್ವಾಲಾಮುಖಿಗಳು ಜಾಗ್ರತವಾಗುವವು. ಮಹಾವೇಗದ ಬಿರುಗಾಳಿಯು ಬೀಸುವದು, ಅತಿವೃಷ್ಟಿ ಅನಾವೃಷ್ಟಿಗಳಾಗುವವು, ಮಹಾಪೂರ–ಜಲಪ್ರಳಯಗಳು ಉಂಟಾಗುವವು, ಅತಿ ಶೀತ ಅತಿ ಉಷ್ಣ ಹವೆಯು ಪಸರಿಸುವದು— ಹೀಗೆ ವ್ಯಕ್ತವಾಗುವ ಪ್ರಕೃತಿ ವ್ಯತ್ಯಾಸವು ಏನನ್ನು ತೋರಿಸುವದು ? ಪ್ರಕೃತಿಯಲ್ಲಿ ಒಂದು ಸಮತ್ವ ಸಮತೂಕ ಸಂಯಮ ತಪ್ಪಿರುವದೆಂಬುದನ್ನಲ್ಲವೆ ? ಮಹಾಭಾರತದ ಯುದ್ಧದ ಪೂರ್ವದಲ್ಲಿ ಉಭಯ ಪಕ್ಷಗಳಲ್ಲಿ ತಪ್ಪಿದ ಸಮತೆಯನ್ನು ತಿದ್ದಲು, ಸಮನ್ವಯ ದೃಷ್ಟಿಯನ್ನು ತರಲು ಪ್ರಯತ್ನ ನಡೆಯಿತೆಂಬುದನ್ನು ಉದ್ಯೋಗಪರ್ವದಿಂದ ತಿಳಿಯಬಹುದು. ಆದರೆ ಸಂಯಮ ಧರ್ಮವು ಮೂಲೆಗೆ ಬಿದ್ದುದರಿಂದ ಮಹಾಭಾರತ ಯುದ್ಧವು ಅನಿವಾರ್ಯವಾಯಿತು. ಹೀಗೆಯೇ ಸಂಭವಿಸಿ ಹೋದ ಅನೇಕ ಯುದ್ಧಗಳಿಗೆ ಸಂಯಮ ಧರ್ಮದ ಬಗೆಗಿನ ಅನಾಸಕ್ತಿಯೇ ಕಾರಣವೆಂದು ಹೇಳಬಹುದು. ಕಾಲನ ಓಟದಲ್ಲಿ ಸಮನ್ವಯ ತಪ್ಪಿದರೆ ಇಂತಹದೇ ಒಂದು ದುರವಸ್ಥೆ-ಯೊದಗುವದು. ಹೀಗೆ ಜೀವನದ ಯಾವ ರಂಗದಲ್ಲಿಯೇ ಆಗಲಿ, ಯಾವ ಹಂತದಲ್ಲಿಯೇ ಇರಲಿ, ಸಮತ್ವ ಸಂಯಮಗಳು ತಪ್ಪಿದುದರ ದುಷ್ಪರಿಣಾಮ-ಗಳನ್ನು ಗಮನಿಸಬಹುದು.

ಜೀವನದಲ್ಲಿ ತನಗೆ ಸಾಧ್ಯವಾಗುವದನ್ನು ಕುರಿತು ಆಲೋಚಿಸಿ ಅದಕ್ಕೆ ಕೈ ಹಾಕಬೇಕು. ಪರಿಸ್ಥಿತಿಗೆ ಯೋಗ್ಯತೆಗೆ ಅನುಗುಣವಾದುದನ್ನು ಲಕ್ಷಿಸಿ ಪ್ರಯತ್ನಿಸಬೇಕು. ಇದರಿಂದ ಜೀವನ ಸಾಮರಸ್ಯವನ್ನು ಕಾಣಲು ಸಾಧ್ಯ-ವಾಗುತ್ತದೆ. ಇದರಿಂದ ಒಂದು ಸರಳತೆಯೂ ಒಂದು ಸೌಂದರ್ಯವೂ ಕಂಗೊಳಿಸುತ್ತದೆ. Harmony leads to simplicity. Where there is simplicity there is beauty. ಕಳೆದ ಶತಮಾನದಲ್ಲಿ ಔದ್ಯೋಗಿಕ ಕ್ರಾಂತಿಗೆ ಮೊದಲಾಯಿತಷ್ಟೆ ! ಅಂದಿನಿಂದ ಯಾಂತ್ರಿಕ ಯುಗವೂ ಪ್ರಾರಂಭವಾಗಿ ಜೀವನವು ಹೆಚ್ಚು ಹೆಚ್ಚು ಸಂಕೀರ್ಣವಾಗುತ್ತ ನಡೆದಿದೆ. ಸಂಕೀರ್ಣವಾದಷ್ಟು ಜೀವನ ಹ್ರಾಸವಾಗುತ್ತ ಸಾಗುವದು. ಹ್ರಸ್ವದಲ್ಲಿ ಜೀವನ ಶಕ್ತಿಯ ಸಂಚಯವೂ ದೀರ್ಘದಲ್ಲಿ ಹ್ರಾಸವೂ ಉಂಟಾಗುತ್ತದೆ. ಸಮೂಹ-

ದಲ್ಲೇನೋ ಬಿಡಿ ಬಿಡಿ ವ್ಯಕ್ತಿಗಳು ತಮ್ಮ ತಮ್ಮ ದೃಷ್ಟಿಕೋನದಲ್ಲಿ ಕಾರ್ಯ-ಪ್ರವೃತ್ತವಾಗುತ್ತಾರೆ. ಆದರೂ ಇಡಿಯಾದ ಜೀವನದ ಬಗೆಗಿನ ಒಂದು ಸಮಗ್ರ ದೃಷ್ಟಿಗೆ ಕೊರತೆಯೊದಗಕೂಡದು. ಗರ್ಭದಲ್ಲಿ ಹೊತ್ತಿರುವ ಕೂಸಿನ ಜೋಪಾನ ಮಾಡಲು ಅಪೇಕ್ಷೆಯುಳ್ಳವರು ತಾಯಿಯನ್ನು ಕಡೆಗಾಣಿಸಲಾಗದು; ತಾಯಿಯ ಸಂರಕ್ಷಣೆಯಲ್ಲಿ ಕೂಸಿನ ರಕ್ಷಣೆಯು ತಾನೇ ಉಂಟಾಗುವದು. ಕೂಸು ಮತ್ತು ತಾಯಿ ಇವರು ಅನ್ಯೋನ್ಯವಾಗಿರುವುದರಿಂದ ಬಿಡಿ ಬಿಡಿ ಭಾವನೆಯು ಮೂಡಿ-ಕೊಳ್ಳದ ಸಮಗ್ರ ದೃಷ್ಟಿಯು ಅರಳಬೇಕು. ಕೂಸು ತಾಯಿಗಳಲ್ಲಿ ಹೇಗೆ ಅಂಶ–ಅಂಶೀ ಭಾವವನ್ನು ಕಾಣಲಾಗುವದೋ ಹಾಗೆಯೇ ವ್ಯಕ್ತಿ ಮತ್ತು ಸಮೂಹದಲ್ಲಿ ಅದನ್ನು ಕಾಣಬೇಕು.

ವ್ಯಕ್ತಿಯ ಉತ್ಕರ್ಷದಲ್ಲಿ ಸಮೂಹದ ಕಲ್ಯಾವೂ, ಸಮೂಹದ ಕ್ಷೇಮ-ಲಾಭದಲ್ಲಿ ವ್ಯಕ್ತಿಯ ಹಿತವೂ ಉಂಟಾಗುವದೇನೋ ನಿಜ. ವ್ಯಕ್ತಿ ಮತ್ತು ಸಮೂಹದ ನಡುವಿರುವ ಸಂಬಂಧವೇ ಅಂತಹದು. ಅಲ್ಲಿ ಪರಸ್ಪರ ಹಿತ ಸಾಧನೆಯು ಅನ್ಯೋನ್ಯವಾಗಿದೆ. ಆದರೂ ಕೇವಲ ವ್ಯಕ್ತಿಯ ಸ್ವಾರ್ಥದಲ್ಲಿ ಸಮೂಹದ ಕಲ್ಯಾಣವನ್ನು ಕೆಡಿಸಲಾಗದು. ವ್ಯಕ್ತಿಗಾಗಿ ಸಮೂಹದ ಕಲ್ಯಾಣ ವನ್ನು ಕಡೆಗಣಿಸುವುದರಿಂದ ಅನೇಕ ಹಾನಿಗಳು ಘಟಿಸುತ್ತವೆ. ವ್ಯಕ್ತಿ ಸಮಾಜ ಪರಮಾತ್ಮ ಈ ಮೂರು ಘಟಕಗಳಲ್ಲಿ ಸಮಾಜವು ವ್ಯಕ್ತಿ ಪರವಸ್ತುಗಳಿಗೆ ಮಧ್ಯವರ್ತಿಯಾಗಿದ್ದು, ಪರವಸ್ತುವನ್ನು ಕಾಣುವ ಮೊದಲು ವ್ಯಕ್ತಿಗೆ ಸಮಾಜವೇ ದೇವರು, ದೈವವಾಗಿರುತ್ತದೆ. ಸಮೂಹದಲ್ಲಿ ದೈವ ದೇವತ್ವವುಂಟೆಂಬ ಲೋಕಾ-ರೂಢಿಯನ್ನೂ ಇಲ್ಲಿ ಮನ್ನಿಸಬೇಕು. ಇದರ ಅರ್ಥವಿಷ್ಟೆ, ಸಮಾಜವನ್ನು ಕಡೆಗಣಿಸಲಾಗದು! ಸಮಾಜಕ್ಕೆ ಒಂದು ಯುಗಧರ್ಮವುಂಟು. ವ್ಯಕ್ತಿ-ಪರಮಾತ್ಮರಲ್ಲಿ ಶಾಶ್ವತ ಧರ್ಮವಿರುತ್ತದೆ, ಒಂದು ಆಶ್ರಮಧರ್ಮವಿರುತ್ತದೆ. ಆದರೆ ಶಾಶ್ವತ ಧರ್ಮದಲ್ಲಿ ಯುಗಧರ್ಮವನ್ನು ಅಲಕ್ಷಿಸಬಾರದು. ಯುಗ-ಧರ್ಮ ಪಾಲನೆಯೇ ಆಶ್ರಮಕ್ಕೆ ಗುರಿಯಾಗಿರುತ್ತದೆ. ಅದಕ್ಕೋಸುಗ ಆಶ್ರಮಕ್ಕಿರುವ ಮಹತಿಯನ್ನು ಮರೆಯಲಾಗದು.

ಆಶ್ರಮಕ್ಕೆ ಒಂದು ಸರಿಯಾದ ಸಮನ್ವಯದಿಂದ ಕೂಡಿದ ವ್ಯವಸ್ಥೆ-ಯನ್ನು ನೀಡಿದವರಲ್ಲಿ ಭಗವಾನ್ ಬುದ್ಧದೇವನು ಮೊದಲಿನವನು. ರಾಜ-ಪುತ್ರನಾಗಿ ಜನಿಸಿ ಅಷ್ಟೈಶ್ವರ್ಯ ಭೋಗದಿಂದೊಡಗೂಡಿದ ತರುಣ ಸಿದ್ಧಾರ್ಥ

ನಿಗೆ ಐಹಿಕ ಜೀವನದಲ್ಲಿ ಸುಖವಿಲ್ಲ, ತೃಪ್ತಿಯಿಲ್ಲ. ಮಡದಿ–ಮಗುವನ್ನು ರಾಜಭೋಗವನ್ನು ರಾಜ್ಯವನ್ನು ತೊರೆದು ಕಾಡಿಗೆ ಸೇರಿದನು. ಏಳು ವರ್ಷಗಳ ವರೆಗೆ ಉಗ್ರ ತಪಸ್ಸನ್ನು ಆಚರಿಸಿದನು. ಆದರೇನು ? ಅವನಿಗೆ ಸುಖವೆನಿಸ ಲಿಲ್ಲ. ಸುಖದ ದಾರಿಯು ಯಾವುದೆಂಬ ಬಗೆಗೆ ಹಂಬಲಿಸಿದನು, ಚಿಂತಿಸಿದನು. ಕೊನೆಗೊಂದು ದಿವಸ ತಾನು ಕಂಡ ಸ್ವಪ್ನದಿಂದ ಸುಖದ ಸುಳಿವನ್ನು ಕಂಡನು. ಅವನು ಕಂಡ ಸ್ವಪ್ನದಲ್ಲಿ ಮೂರು ತಂತಿಗಳುಳ್ಳ ಒಂದು ವೀಣೆ; ಒಂದು ತಂತಿಯಿಂದ ಜೊಂಯಿಗುಡುವ ನಾದ, ಇನ್ನೊಂದರಿಂದ ಮಧುರ ನಾದ, ಮತ್ತೊಂದರಿಂದ ಕರ್ಕಶ ನಾದ ಕೇಳಿಬರುತ್ತವೆ. ಬುದ್ಧನಾಗಿ ಪರಿವರ್ತನೆ ಗೊಂಡಿದ್ದ ಆತನು ಸ್ವಪ್ನದಿಂದ ತಿಳಿದೆದ್ದನು. ಸ್ವಪ್ನವನ್ನು ಕುರಿತು ನೀಳವಾಗಿ ಆಲೋಚಿಸಿದನು. ಎರಡು ಹಾದಿಯು ಬಿಟ್ಟು ನಡುವೆ ಹೋಗುವತನಕ ಜೀವನದಲ್ಲಿ ಸುಖವಿಲ್ಲೆಂದು ನಿರ್ಣಯಿಸಿದನು. ಸುಖದ ಮಾರ್ಗವು ಕಠೋರ ವಾದ ತಪಸ್ಸನ್ನಾಚರಿಸುವುದರಲ್ಲಿಯೂ ಇಲ್ಲ, ಶಿಥಿಲವಾದ ಸಂಸಾರ ಜೀವನ ದಲ್ಲಿಯೂ ಇಲ್ಲ. ಆದರೆ ಇವೆರಡರ ಸಮನ್ವಯವಾದ ಸಂಯಮನ ಮಾರ್ಗ ದಿಂದಲೇ ಸುಖ ಪ್ರಾಪ್ತಿಯೆಂಬುದನ್ನು ನಿಶ್ಚಯಿಸಿ ಬೋಧಿಸತ್ವದೆಡೆಗೆ ಹೋಗಿ ಆ ಮಾರ್ಗವನ್ನು ಕಂಡನು.

ಬುದ್ಧನ ಉಪದೇಶದಲ್ಲಿ ಸುಖಪ್ರಾಪ್ತಿಯೇ ಮಾನವನ ಜೀವನದ ಧ್ಯೇಯ ವಾಗಿರಲಿಲ್ಲ; ಆದರೆ ದುಃಖ ನಿವಾರಣೆಯ ಉಪಾಯವೇ ಅವನು ಬೋಧಿಸಿದ ಉಪದೇಶವಾಗಿದೆ. ಸುಖಪ್ರಾಪ್ತಿ ಮತ್ತು ದುಃಖನಿವಾರಣೆ ಇವು ಸಕೃದ್ದರ್ಶನಕ್ಕೆ ಒಂದೇ ಎಂದು ಕಂಡರೂ ಅವೆರಡೂ ಒಂದೇ ಅಲ್ಲ. ಸುಖವನ್ನು ಹೊಂದುವುದೇ ಬೇರೆ, ದುಃಖವನ್ನು ನಿವಾರಿಸಿಕೊಳ್ಳುವುದೇ ಬೇರೆ. ಸುಖವು ಕಾಲ್ಪನಿಕವಾಗಿರ ಬಹುದು, ಆದರೆ ದುಃಖವು ಹಾಗಲ್ಲ. ಸುಖದ ತಿಳಿವಳಿಕೆಯಲ್ಲಿ ತತ್ಕಾಲದಲ್ಲಿ ಮನಸ್ಸಿಗೆ ಯಾವುದು ಹಿಡಿಸುವದೊ ಯಾವುದರಿಂದ ಹಿತವು ಸಾಧಿಸಿತೆಂಬ ಅನಿಸಿಕೆಯಿದೆಯೋ ಅದು ಭ್ರಾಮಕವೂ ಆಗಿರಬಹುದು. ಆದರೆ ದುಃಖದಿಂದ ತೊಳಲುತ್ತಿರುವ ಸಂದರ್ಭ ಸನ್ನಿವೇಶಗಳಲ್ಲಿ, ವೈಮನಗಳೆರಡಕ್ಕೂ ಸಾವು-ನೋವು ಒದಗಿದ ಕಾಲಕ್ಕೆ ಅದಕ್ಕೆ ಭ್ರಾಂತಿಯ ಆರೋಪವನ್ನು ಅಂಟಿಸುವದು ಸಹಜಕ್ಕೆ ದೂರವಾದ ಸಂಗತಿಯಾಗಿರುತ್ತದೆ. ಕತ್ತಲೆಯನ್ನು ಬೆಳಕೆಂದು ಭಾವಿಸುವುದಕ್ಕಿಂತ ಭಿನ್ನವಾದ ಆತ್ಮವಂಚನೆ ಇನ್ನಾವುದಿದೆ? ಅದಕ್ಕಾಗಿ ಬುದ್ಧದೇವನು ದುಃಖನಿವೃತ್ತಿಯ ಕಡೆಗೆ ಗಮನವನ್ನು ಕೊಟ್ಟನು. ಕತ್ತಲೆ

ಯಲ್ಲಿದ್ದರೂ ಲೇಸು, ಆದರೆ ಬೆಳಕಿನ ಆಭಾಸದ ಬೆನ್ನುಹತ್ತುವದು ನೆಟ್ಟಗಲ್ಲ ವೆಂಬುದು ಆತನ ಉಪದೇಶ.

ವಿಷಯಗಳಲ್ಲಿಯ ಆಸಕ್ತಿಯೇ ( Attachment ) ರಾಗವೆಂದು ತಿಳಿಯಲಾಗುತ್ತದೆ. ಬುದ್ಧನ ಉಪದೇಶದ ಮೇರೆಗೆ ದುಃಖದ ಮೂಲವು ರಾಗದಲ್ಲಿದೆ. ಆದ್ದರಿಂದ ದುಃಖದ ಅಭಾವವು ವಿರಾಗಕ್ಕೆ ಅವಕಾಶವನ್ನು ನೀಡುತ್ತದೆ. ಬುದ್ಧನ ಅಷ್ಟಾಂಗಯೋಗದಲ್ಲಿ ಸಮ್ಯಕ್‌ದರ್ಶನ–ಜ್ಞಾನ-ಚಾರಿತ್ರ ಗಳಿಗೆ ಬಹಳ ಪ್ರಾಶಸ್ತ್ಯವುಂಟು. ಸತ್ಕ್ರಿಯೆಯಿಂದೊಡಗೂಡಿದ ಇವೇ ಮುಂದಿನ ಅನುಭಾವಿಗಳಲ್ಲಿ ಸದ್ಭಾವ ಸುಜ್ಞಾನ ಸ್ವಾನುಭಾವಗಳಾಗಿ ಕಂಗೊಳಿಸುತ್ತವೆ. ವೀರಶೈವರಲ್ಲಿಯ ಗುರು–ಲಿಂಗ–ಜಂಗಮ ತತ್ವಗಳೂ ಬುದ್ಧನ ಈ ಸಿದ್ಧಾಂತ ಗಳಿಂದಲೇ ವಿಕಾಸವನ್ನು ಪಡೆದಿವೆಯೆನ್ನಬಹುದು. ಬುದ್ಧನು ಈ ಸಿದ್ಧಾಂತ ಗಳಿಂದ ದುಃಖನಿವಾರಣೋಪಾಯವನ್ನು ಬೋಧಿಸಿದನು; ಇಹದ ಬಾಳುವೆಯ ಮಹತಿಯನ್ನು ವ್ಯಕ್ತಗೊಳಿಸಿದನು.

ಭಾರತದಲ್ಲಿ ಬುದ್ಧನು ತತ್ವೋಪದೇಶಗೆಯ್ದು ದುಃಖನಿವಾರಣೋಪಾಯ-ವನ್ನು ಬೀರುತ್ತಿದ್ದ ಸುಮಾರಿನ ಕಾಲದಲ್ಲಿಯೇ ಚೀನಾದಲ್ಲಿ ಕನ್‌ಫ್ಯೂಶಿಯಸನು ಶುದ್ಧವಾದ ನೀತಿಬದ್ಧವಾದ ಸಮಾಜರಚನೆಗಾಗಿ ಪ್ರಯತ್ನಿಸುತ್ತಿದ್ದನು. ಚೀನೀ ಭಾಷೆಯಲ್ಲಿ ಚೆಂಗ್ ಎಂದರೆ ನಿರ್ವಂಚನೆ. ಕನ್‌ಫ್ಯೂಶಿಯಸನು ಬೋಧಿಸಿದ್ದೂ ಈ ನಿರ್ವಂಚನೆಯನ್ನು. ನಿರ್ವಂಚನೆ ಬೆಳೆದರೆ ವ್ಯಕ್ತಿವಿಕಾಸವೂ, ಅದರಿಂದಾಗಿ ಸಮಾಜಸ್ವಾಸ್ಥ್ಯವೂ ಬೆಳೆದು ಬರುವದೆಂದು ಆತನು ಉಪದೇಶಿಸಿದನು. ಬಸವಣ್ಣನೂ 'ಎರದೆಲೆಯಂತೆ ಒಳಗೊಂದು ಹೊರಗೊಂದು ಆಗಬಾರದೆ'ಂದು ಹೇಳಿ ನಿರ್ವಂಚನೆಯಿಂದ ನಡೆದುಕೊಳ್ಳಬೇಕೆಂದೇ ಬೋಧಿಸಿದನು. ಜ್ಞಾನ ಧೈರ್ಯ ಉದಾರತೆ ಉತ್ಸಾಹ ಮುಂತಾದ ಮಂಗಲಗುಣಗಳು ಮೊಳೆಯಲು ನಿರ್ವಂಚನೆಯ ನಡತೆಯೇ ಕಾರಣವೆಂದು ಕನ್‌ಫ್ಯೂಶಿಯಸನು ಹೇಳುವನು. ಇಂತಹ ನಿರ್ವಂಚನೆ ಅಳವಡದಿದ್ದರೆ ಯಾವ ಪ್ರಗತಿಯೂ ಇಲ್ಲ. ಮಾನವನು ಸಂಘಜೀವಿ. ಆದ್ದರಿಂದ ಅವನಿಗೆ ಋಣತೀರಿಸುವ ಭಾವನೆ ಒಂದು ಕರ್ತವ್ಯ-ವಾಗಿ ಅಂಗವಿಸುತ್ತದೆ. Duty is that which is due to others. ಅದಕ್ಕಾಗಿ ಅನ್ಯರಿಗೆ ಸಲ್ಲಬೇಕಾಗಿದ್ದ ತಮ್ಮ ಪಾಲಿನ ಕರ್ತವ್ಯ ನಿರ್ವಹಣೆಯನ್ನು ಮಾನವರು ಮರೆಯಕೂಡದು. ಕುಟುಂಬದ ಸ್ವಾಸ್ಥ್ಯ ಜೀವನವು ರಾಷ್ಟ್ರದ ಭದ್ರವಾದ ಜೀವನಕ್ಕೆ ಅಡಿಗಲ್ಲನಂತಿಹುದು. Family is the founda-

tion of the State. ಆದ್ದರಿಂದ ಜ್ಞಾನಿಗಳು ಅನುಭಾವಿಗಳು ಆಳರಸ-ರಾಗಿರಬೇಕು. Philosophers should be kings— ಎಂದು ಮೊದಲು ಸಾರಿದವನು ಕನ್‌ಫ್ಯೂಶಿಯಸನು. ಅಲ್ಲಿ ಮತದ ಹೆಚ್ಚಳ ಇಲ್ಲವೆ ಪಾರಲೌಕಿಕದ ಮೇಲ್ಮೆಯಿಲ್ಲ. ಲೌಕಿಕ ಜೀವನದ ಘನತೆಯೇ ಕನ್‌ಫ್ಯೂಶಿಯಸನ ಉಪದೇಶದ ಸಾರವಾಗಿರುತ್ತದೆ.

ದೇವತೆಗಳಿಗೆ ಒಂದೇ ಒಂದು ಅವಸ್ಥೆಯುಂಟು. ಅದು ಜಾಗರಾವಸ್ಥೆ ! ಆದ್ದರಿಂದಲೇ ಅವರಿಗೆ ಅನಿಮಿಷವೆಂದು ಹೆಸರು. ಪಶು–ಪಕ್ಷ್ಯಾದಿ ಪ್ರಾಣಿಗಳಿಗೆ ಜಾಗ್ರ ಮತ್ತು ಸ್ವಪ್ನ ಎರಡೂ ಅವಸ್ಥೆಗಳುಂಟು. ಮನುಷ್ಯನಿಗೆ ಮಾತ್ರ ಜಾಗ್ರ ಸ್ವಪ್ನ ಹಾಗು ಸುಷುಪ್ತಿ ಎಂಬ ಮೂರು ಅವಸ್ಥೆಗಳುಂಟು. ಸುಷುಪ್ತಿ ಅವಸ್ಥೆಯ ಅನುಭವದಿಂದ ಮಾನವನಿಗೆ ಆನಂದದ ಕಲ್ಪನೆ ನಿಲುಕಿತು. ಮಾನವ ಜನ್ಮದ ಶ್ರೇಷ್ಠತೆಯಾಗಲಿ, ಇಲ್ಲವೆ ಇದನ್ನು ವ್ಯಕ್ತಗೊಳಿಸಲು ಅವಶ್ಯಕವಾದ ಕರ್ಮಭೂಮಿಯ ಘನತೆಯಾಗಲಿ ಮಾನವನಿಗೆ ಗೊತ್ತಾಗಿದ್ದುದು ಈ ಆನಂದದ ಕಲ್ಪನೆಯಿಂದಲೆ. ಮನುಷ್ಯೇತರವಾದ ಒಂದೊಂದು ಪ್ರಾಣಿಯು ಸುಷುಪ್ತಿ ಅವಸ್ಥೆಯ ಕೊರತೆಯಿದ್ದರೂ ಒಂದೊಂದು ಶ್ರೇಷ್ಠ ಗುಣದಿಂದ ಆನಂದಾನುಭೂತಿಯನ್ನು ಪಡೆಯುತ್ತದೆ. ಆದರೆ ಆನಂದಾನುಭೂತಿಗೆ ಸುಷುಪ್ತಿಯವಸ್ಥೆಯಿಂದ ಸಹಜವಾಗಿ ಅವಕಾಶವನ್ನು ಪಡೆದ ಮಾನವನು ಅದಕ್ಕೆ ಎರವಾಗುತ್ತಿದ್ದಾನೆ; ಇದಕ್ಕಿಂತ ಕರಕಷ್ಟವಾದುದು ಇನ್ನಾವುದಿದೆ ?

ವಾಯುಗುಣವನು ಸರ್ಪಬಲ್ಲುದು;
ಮಧುರ ಗುಣವನಿರುಹೆ ಬಲ್ಲುದು;
ಗೋತ್ರದ ಗುಣವನು ಕಾಗೆ ಬಲ್ಲುದು;
ವೇಳೆಯ ಗುಣವನು ಕೋಳಿ ಬಲ್ಲುದು.
ಇದು ಕಾರಣ,
ಮನುಷ್ಯಜನ್ಮದಲಿ ಬಂದು ಶಿವಜ್ಞಾನವನರಿಯದಿದ್ದರೆ,
ಆ ಕಾಗೆ ಕೋಳಿಗಳಿಂದ ಕರಕಷ್ಟ ಕಾಣಾ,
ಕಲಿದೇವರ ದೇವಾ !

ಶಿವಜ್ಞಾನವು ಸ್ವಸ್ವರೂಪ ಜ್ಞಾನದಿಂದ ಅನ್ಯವಲ್ಲ. ಸುಷುಪ್ತಿಯಲ್ಲಿಯ ಶಾಂತಿ ಆನಂದಗಳ ಅನುಭವದ ಆಧಾರದಿಂದ ಸ್ವಸ್ವರೂಪ ಜ್ಞಾನವನ್ನು ಪಡೆದು

ಮಾನವನು ತೆರೆಕೊರೆಯಿಲ್ಲದ ಆನಂದವನ್ನು, ತೆರೆಕೊರೆಯಿಲ್ಲದ ಪರಮಾನಂದದ ಅನುಭೂತಿಯನ್ನು ಹೊಂದಬೇಕು. ಇಲ್ಲದಿದ್ದರೆ ಅವನ ಬಾಳುವೆ ಹೀನ, ಅವನು ಹೀನ ಮಾನವನು. ಸಮ್ಯಕ್‌ಜ್ಞಾನ-ಸಮನ್ವಯ ಜ್ಞಾನದ ಅಭಾವ ದಿಂದಾಗಿ ಪಶು-ಪಕ್ಷ್ಯಾದಿಗಳ ಜೀವನಕ್ಕಿಂತ ಅವನ ಜೀವನ ಯಾವ ರೀತಿ-ಯಿಂದಲೂ ಮೇಲಾಗಲಾರದು. ಇಹಲೋಕದ ಜೀವನವು ಶ್ರೇಷ್ಠವಾದುದೆಂಬು ದನ್ನು ಮನಗಾಣುವದು ಮಾನವನ ಒಳ್ಳೆಯ ಗುಣಗಳಿಂದಲೆ. ಇದನ್ನು ಕಲಿಸಿ ಕೊಟ್ಟವರು ಬುದ್ಧ ಕನ್‌ಫ್ಯೂಶಿಯಸ ಅವರು.

ಬುದ್ಧನ ತರುವಾಯ ಈಶ್ರಮದ ಮಹತಿಯನ್ನು ವ್ಯಕ್ತಗೊಳಿಸಿದವನು ಬಸವಣ್ಣನು. ಬಡತನ-ಬಳಲಿಕೆಗಳು ಕಷ್ಟ-ಕಾರ್ಪಣ್ಯಗಳು ಮನುಷ್ಯನ ಕರ್ಮದ ಪಾಪದ ಫಲವೆಂದೂ, ಅವನ್ನು ನಿವಾರಿಸುವದು ಅಶಕ್ಯ ಅವನ್ನು ಭೋಗಿಸಿಯೇ ತೀರಬೇಕೆಂದೂ ಹೇಳುತ್ತ ವ್ಯಕ್ತಿ ವ್ಯಕ್ತಿಗಳ ಜೀವನದ ವೈಷಮ್ಯಗಳನ್ನು ಸಮಾಜವು ಕಡೆಗಣಿಸುತ್ತಿದ್ದುದನ್ನು ಬಸವಣ್ಣನು ಕಂಡು- ಇದರ ಕೊನೆಯನ್ನು ಕಾಣಲು ಹವಣಿಸಿದನು. ಆತನು ದೃಢವಾಗಿ ಸಾರಿದ್ದಾನೆ— ಬಡತನವು ಸಾಮಾಜಿಕ ದೋಷವೆಂಬುದನ್ನು. ಅದೇನೂ ನಿವಾರಿಸಲಿಕ್ಕೆ ಬಾರದ ಪಾಪವಲ್ಲ. ಸಿರಿತನ ಬಡತನಗಳು ಕೃತಕವಾಗಿವೆ. ಪುಣ್ಯ-ಪಾಪಗಳ ಫಲ, ಸಿರಿತನ ಬಡತನ ವೆಂಬವು ಮಾನವ ನಿರ್ಮಿತ ಸಂಗತಿಗಳೇ ಆಗಿವೆ. ಸ್ವಾರ್ಥ ಮೂಲವಾದ ಈ ವಿಂಗಡಿಕೆಯು ಬಸವಣ್ಣನಿಗೆ ಸಮ್ಮತವಿಲ್ಲ.

ಸುಖ ಬಂದರೆ ಪುಣ್ಯದ ಫಲವೆನ್ನೆನು,
ದುಃಖ ಬಂದರೆ ಪಾಪದ ಫಲವೆನ್ನೆನು;
ನೀ ಮಾಡಿದೊಡಾಯಿತ್ತೆಂದೆನ್ನೆನು,
ಕರ್ಮಕ್ಕೆ ಕರ್ತೃವೆ ಕಡೆಯೆಂದೆನ್ನೆನು;
ಉದಾಸೀನವಿಡಿದು ಶರಣೆನ್ನೆನು.
ಕೂಡಲ ಸಂಗಮದೇವಾ,
ನೀ ಮಾಡಿದುಪದೇಶವು ಎನಗೀ ಪರಿಯಲಿ !
ಸಂಸಾರವ ಸವೆಯೆ ಬಳಸುವೆನು.

ಸುಖ-ದುಃಖಗಳು ಸಮಾಜ ರಚನೆಯ ದೋಷಗಳಿಂದ ಬಂದವುಗಳು ಮಾತ್ರ.

ಸುಖ–ದುಃಖ ಸಿರಿತನ ಬಡತನಗಳು ಬಗೆಗೆ ಹೇಗೋ ಹಾಗೆಯೇ ಸ್ವರ್ಗ ನರಕಗಳ ಬಗೆಗಿನ ಕಲ್ಪನೆಯೂ ಮಾನವನ ಸ್ವಾರ್ಥಮೂಲವಾಗಿಯೇ ಉಗಮ ಗೊಂಡಿರುತ್ತದೆ. ಸತ್ತಮೇಲೆ ಸುಖ ಸಿಗುವದು, ಸ್ವರ್ಗ ದೊರೆಯುವದು ಎಂದು ಹೇಳುವ ಮಾತು ನೊಂದ ಜೀವಕ್ಕೆ ಸಮಾಧಾನವನ್ನುಂಟು ಮಾಡುವದಕ್ಕೆ ಮಾತ್ರ ಅಷ್ಟೆ! ಇದರಿಂದ ಸಮಾಧಾನವುಂಟಾಗಲಿಲ್ಲ, ಶಾಂತಿ ಸ್ವಾಸ್ಥ್ಯಗಳು ಲಭಿಸಲಿಲ್ಲ. 'ಸ್ವರ್ಗ ನರಕ ತಮ್ಮ ಇಷ್ಟ ಕಂಡಯ್ಯಾ; ಅಯ್ಯಾ, ಎಂದಡೆ ಸ್ವರ್ಗ; ಎಲವೊ, ಎಂದಡೆ ನರಕ' ಎಂಬ ಅಣ್ಣಬಸವಣ್ಣನ ವಚನದಲ್ಲಿ, ಇಲ್ಲಿಯೇ ಇಹಲೋಕದಲ್ಲಿಯೇ ಸ್ವರ್ಗಲೋಕದ ಸವಿ ಸುಖವನ್ನು ಪಡೆಯುವ ವಿಧಾನ ಅಡಗಿದೆ; ಇಹವನ್ನೇ ಸ್ವರ್ಗವಾಗಿ ಪರಿವರ್ತಿಸುವ ರಹಸ್ಯವೂ ಅಡಕವಾಗಿದೆ. ಬಸವಣ್ಣನು ಇಷ್ಟಕ್ಕೆ ತೃಪ್ತಿಯನ್ನು ಪಡೆಯಲಿಲ್ಲ. ಆತನಿಗೆ ಬೇಕಾಗಿದ್ದುದು ಸುಖದ ಕಾಲ್ಪನಿಕ ಚಿತ್ರವಲ್ಲ, ಪ್ರತ್ಯಕ್ಷ ಅನುಭವಾನಂದ. ತನಗಿಲ್ಲದ ಬಯಕೆ ಭೋಗಗಳ ಪ್ರಾಪ್ತಿಗಾಗಿ ಅದೃಷ್ಟ ದೈವವನ್ನು ಮೊರೆಹೊಕ್ಕು ಜೀವನವನ್ನು ಬರಡು ಮಾಡಿಕೊಳ್ಳುವದು ಅವನಿಗೆ ಒಪ್ಪಿಗೆಯಿಲ್ಲ. ಅದೃಷ್ಟ, ದೈವ ಎನ್ನುವುದು ಕೈಲಾಗದ ಹೇಡಿಗಳ ಸಾಹಸಹೀನರ ವೃತ್ತಿ. 'ದುಡಿಯೈ ಸುಖಮಂ ಪಡೆಯೈ, ದುಡಿಯದ ಮನುಜಂಗೆ ದುಃಖವು ಬಿಡದೈ' ಎಂಬುದು ಆತನು ಕಲಿಸಿದ ಕಾಯಕ ರಹಸ್ಯ. ಕ್ರಿಯಾಹೀನವಾದ ಸತ್ವಶೂನ್ಯವಾದ ಅದೃಷ್ಟವಾದಕ್ಕಿಂತ ನಿಷ್ಠುರವಾದ ಕಾಯಕಯೋಗಕ್ಕೆ ಆತನು ಮಹತ್ವವನ್ನು ಕೊಟ್ಟನು. ಕಾಯಕವೇ ಕೈಲಾಸವೆಂಬುದನ್ನು, ಕಾಯಕದಲ್ಲಿಯೇ ಕೈಲಾಸವಿದೆ ಎಂಬುದನ್ನು ಅವನು ಬಿತ್ತರಿಸಿದನು. ಇದರಿಂದ ಪೂರ್ವಾರ್ಜಿತ, ಕರ್ಮ, ಅದೃಷ್ಟ ಇತ್ಯಾದಿ ಕಾಲ್ಪನಿಕ ವಿಚಾರಗಳು ಎಷ್ಟು ದೂರವುಳಿದವು ಎಂಬುದು ವ್ಯಕ್ತವಾಗದಿರದು. ಈಶ್ರಮದ ವಿಷಯದಲ್ಲಿ ಅವನು ಎಷ್ಟು ಮಹತ್ತರವಾದ ಗೌರವವನ್ನಿಟ್ಟುಕೊಂಡಿದ್ದನೆಂಬುದೂ ಇದರಿಂದ ತಿಳಿಯದಿರದು.

ಸರಿಯಾದ ತಿಳಿವಳಿಕೆಯನ್ನು ಪಡೆಯದೆ ದುಃಖಮಯವಾದುದೇ ಸಂಸಾರವೆಂದು ಹೇಳುವವರು ಅನೇಕರು. ಸಂಸಾರವು ಒಂದು ರಾಹು ಸರ್ಪ ಶ್ವಾನ ಇಲಿ ಬಲೆ ಬಂಧನ ನರವಿಂಧ್ಯ ಗಾಳಿಯ ಸೊಡರು ಎಂದು ಅದನ್ನು ಬಗೆಬಗೆಯಾಗಿ ಬಣ್ಣಿಸುವದುಂಟು. ಬಸವಣ್ಣನು ಒಂದು ವಚನದಲ್ಲಿ ಇದನ್ನು ಒಂದು ಸಮುದ್ರಕ್ಕೆ ಹೋಲಿಸಿದ್ದಾನೆ :

ಸಂಸಾರ ಸಾಗರದ ತೆರೆ ಕೊಬ್ಬಿ
ಮುಖದ ಮೇಲೆ ಅಲೆಯುತ್ತಿದ್ದುದೇ ನೋಡಾ !
ಸಂಸಾರಸಾಗರ ಉರದುದ್ದವೆ ? ಹೇಳಾ !
ಸಂಸಾರಸಾಗರ ಕೊರಲುದ್ದವೆ ? ಹೇಳಾ !
ಸಂಸಾರಸಾಗರ ಸಿರದುದ್ದವಾದ ಬಳಿಕ ಏನ ಹೇಳುವೆನಯ್ಯಾ !
ಅಯ್ಯಾ, ಅಯ್ಯಾ, ಎನ್ನ ಹುಯ್ಯಲ ಕೇಳಯ್ಯಾ,
ಕೂಡಲ ಸಂಗಮದೇವಾ, ನಾನೇವೆನಯ್ಯಾ ?

ಈ ಅಂಬುಧಿಯಲ್ಲಿ ಸಿಕ್ಕು ಈಸಿ ಪಾರಾಗಲಿಕ್ಕೆ ಅಸದಳವಾಗಿ ಮನುಷ್ಯನು ತೊಳಲುತ್ತಾನೆ, ಬಳಲುತ್ತಾನೆ; ಕೈ ಸೋತು ನಿರಾಶೆಗೊಳ್ಳುತ್ತಾನೆ. ತುಂಬಿದ ತೊರೆಯನ್ನು ದಾಟಿಸಲಿಕ್ಕೆ ಅಂಬಿಗನಿರುವಂತೆ ಭವಸಾಗರವನ್ನು ದಾಟಿಸಲಿಕ್ಕೆ ಗುರುವುಂಟೆಂದು ಆತನು ನಂಬುಗೆಗೊಳ್ಳಬೇಕು. ಸಮುದ್ರವನ್ನು ದಾಟಲಿಕ್ಕೆ ಬಾರದವರು ಡೋಣಿಯಲ್ಲಿ ಬಂದು ಕುಳಿತುಕೊಳ್ಳಿರೆಂದು ನಿಜವಾದ ಗುರುವು ಹೇಳುತ್ತಿದ್ದಾನೆ. ನಾವು (ಡೋಣಿ) ನೀರೊಳಗೆ ನಿಂತರೆ ನೋವಿಲ್ಲ. ಆದರೆ ನಾವಿನಲ್ಲಿ ನೀರು ನಿಂತರೆ ಆ ನೋವಿನ ಉಗ್ರತೆಯನ್ನು ಬಣ್ಣಿಸುವದೆಂತು ? ಗುರುವಿನ ಸಹಾಯಹಸ್ತದ ಮಹಿಮೆಯೇ ಅಂತಹದು : ನಾವು ನೀರೊಳು ನಿಂತರೂ ನಾವಿನಲ್ಲಿ ನೀರು ನಿಲ್ಲದಂತೆ ಅವನು ನೋಡಿಕೊಳ್ಳುತ್ತಾನೆ ! ಸಾಗರದ ಆಚೆ ದಂಡೆಯನ್ನು ಮುಟ್ಟಿದ ಅವನಿಗೆ ಪಾರಾಗುವ ರೀತಿ ಗೊತ್ತಿದೆ; ಇಷ್ಟೇ ಅಲ್ಲ, ಈಚೆ ದಂಡೆಯಲ್ಲಿದ್ದುಕೊಂಡು ಅಶಕ್ತರಾದವರಲ್ಲಿ ಶಕ್ತಿ ಉತ್ಸಾಹಗಳನ್ನು ತುಂಬಿ ಪಾರುಗೊಳಿಸುವ ಕಲೆಯನ್ನೂ ಅವನು ಬಲ್ಲನು. ಈಚೆ ದಂಡೆಯಲ್ಲಿದ್ದವರು ಆಚೆ ದಂಡೆಯನ್ನು ಮುಟ್ಟಿದ ಬಳಿಕ ಸಾಮಾನ್ಯವಾಗಿ ಇಲ್ಲಿದ್ದವರನ್ನು ಮರೆಯುವದೇ ಹೆಚ್ಚು. ಆದರೆ ಇದು ಸಲ್ಲದು. ಭವವ ದಾಟುವುದು ಕರ್ತವ್ಯವಾಗಿರುವಂತೆ, ಅದನ್ನು ದಾಟಲು ಕಲಿಸುವದೂ ಅಷ್ಟೇ ಹೊಣೆಗಾರಿಕೆಯಿಂದ ಕೂಡಿದ ಕರ್ತವ್ಯವಾಗಿದೆ. 'ಮಾನವ ಪ್ರಾಣಿಗಳು ದುಃಖ–ದುಮ್ಮಾನಗಳಿಂದ ಬಿಡುಗಡೆ ಹೊಂದುವ ವರೆಗೆ ನನಗೆ ನಿರ್ವಾಣ, ಮುಕ್ತಿ ಇಲ್ಲ', ಎಂದು ಬುದ್ಧನು ಹೇಳಿದ್ದಾನೆ. ಜನ್ಮ ಜನ್ಮಗಳನ್ನು ಪಡೆದು ಬರಬಾರದೆಂದು ಹೇಳುತ್ತಾರೆ. ಆದರೆ ಭೌತಿಕವಿರಲಿ ಅಧ್ಯಾತ್ಮಿಕವಿರಲಿ ಪ್ರಗತಿಗೆ ಕೊನೆಯೆಂಬುದೇ ಇಲ್ಲ. ಅದರ ಪರಾಕಾಷ್ಠೆಯನ್ನು ಪಡೆದಷ್ಟು ಅದು ಇನ್ನೂ ಸೂಕ್ಷ್ಮವಾಗುತ್ತಲೆ ಇರುತ್ತದೆ.

ಈ ಸೂಕ್ಷ್ಮಾತ್ ಸೂಕ್ಷ್ಮತರವಾಗುವ ಅಧ್ಯಾತ್ಮ ಪ್ರಗತಿಯನ್ನು ಸಾಧಿಸಲು ಮತ್ತೆ ಮತ್ತೆ ಬರಲೇಬೇಕು. ಬಂದ ಬಂದ ಕಾಲಕ್ಕೊಮ್ಮೆ ಅರಿವನ್ನು ಕಟ್ಟಿ ಕೊಂಡು ಬರಬೇಕು. ಮತ್ತೆ ಹೆಚ್ಚಿನ ಪ್ರಗತಿಯನ್ನು ಪಡೆಯಲು ಪ್ರಯತ್ನಿಸ ಬೇಕು. ಇದೂ ಅಲ್ಲದೆ ಮಾನವ ಕೋಟಿಯ ಉದ್ಧಾರದ ಮಾರ್ಗವನ್ನು ಚಿಂತಿಸಬೇಕು. ಆಶ್ರಮದ ಮಾರ್ಗವು ಇದನ್ನು ಒಪ್ಪಿಕೊಳ್ಳುವದಿಲ್ಲ. ಆದರೆ ಈಶ್ರಮದ ಕ್ರಮವು ಮಾತ್ರ ಇದನ್ನು ಎತ್ತಿ ಹಿಡಿಯುತ್ತದೆ. ಈಶ್ರಮದ ಈ ಕಲ್ಪನೆಯಲ್ಲಿ ಪುರುಷ ಪ್ರಯತ್ನದ ಪುರಸ್ಕಾರವಿದೆ, ಪೌರುಷವಾದದ ಘನತೆಯಿದೆ.

ರತ್ನಾಕರವರ್ಣಿಯು ತನ್ನ ಭರತೇಶ ವೈಭವದಲ್ಲಿ ಯೋಗಭೋಗಗಳ ತಾಳವರಿತು ಸಮನ್ವಯಗೊಳಿಸಿದ್ದಾನೆ. ಆತನು ಭೋಗ ವಿಜಯದಲ್ಲಿ ಲಲಿತ ಕಲೆಗಳ ಸೊಬಗನ್ನು ಬಹು ಸುಂದರವಾಗಿ ಬಣ್ಣಿಸಿ ಶೃಂಗಾರವು ಅಧ್ಯಾತ್ಮಕ್ಕೆ ವಿರೋಧವೇನಲ್ಲ, ಅದು ಸಹಾಯಕಾರಿಯೇ ಆಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತಾನೆ. ಅಲ್ಲಿ ಅವನು ದೇಹದ ಕಾಂತಿ ಆತ್ಮದ ಶಾಂತಿ ಎರಡನ್ನೂ ಸಾಧಿಸಿದ್ದಾನೆ. ಯೋಗವಾಗಲಿ ಭೋಗವಾಗಲಿ ಪ್ರಭುವಿನ ಇಚ್ಛೆಯಲ್ಲಿ ಒದಗಿದ್ದು, ಎಲೋ ಪ್ರಭುವೆ ನನ್ನೆದೆಯೊಳಿರುತಿರ್ದು ಅವನ್ನು ಸ್ವೀಕರಿಸು ಎಂದು ಸಾಧನೆಯ ರೀತಿಯನ್ನು ಸೂಚಿಸಿದ್ದಾನೆ. ಪ್ರತಿಯೊಂದು ಪ್ರಾಣಿಯಲ್ಲಿ ಹಂಸ ತತ್ವವು ನಿಗೂಢವಾಗಿದೆ. ಇದನ್ನು ತಿಳಿದುಕೊಂಡಾಗಲೆ ಅವನಿಗೆ ಸಾಧನೆಯ ರೀತಿಯು ಸ್ಫುಟವಾಗುವದು.

ಉಸಿರೆಂಬ ಕರಗಸದಿಂದ ದೇಹಾತ್ಮರ
ಬೆಸುಗೆಯ ಬಿಡಿಸಿ ನೋಡಿದರೆ
ಮಸುಳದೆ ತೋರ್ಪ ಮಹಾತ್ಮನೆ ಎನಗೊಪ್ಪ
ನೆಸಗು ನಿರಂಜನ ಸಿದ್ಧ

ಎಂಬ ಮಾತುಗಳಲ್ಲಿ ರತ್ನಾಕರವರ್ಣಿಯು ಆ ಸಾಧನೆಯ ರೀತಿಯನ್ನು ಬಿಡಿಸಿ ತಿಳಿಸಿದ್ದಾನೆ. ಮನವು ಆತ್ಮ ವಾಯುಗಳ ಸಮಿಶ್ರಣವಷ್ಟೆ! ಹಾಗೆಯೇ ದೇಹ ಮತ್ತು ಆತ್ಮ ಇವು ಬಿಡಿಸಬಾರದಷ್ಟು ತಾದಾತ್ಮ್ಯ ಹೊಂದಿಕೊಂಡಿರುತ್ತವೆ. ಮನದೊಡನೆ ಕೂಡಿಕೊಂಡ ಆತ್ಮತತ್ವವನ್ನು ಇಲ್ಲವೆ ದೇಹದೊಡನೆ ತಾದಾತ್ಮ್ಯ ವನ್ನು ಪಡೆದ ಆತ್ಮತತ್ವವನ್ನು ವ್ಯಕ್ತಗೊಳಿಸಲು ವಾಯುತತ್ವವೇ ಒಂದು

ಉಪಕರಣ. ಉಸಿರು ಅಥವಾ ಪ್ರಾಣವಾಯುವು ಒಂದು ಕರಗಸವಿದ್ದಂತೆ. ಕರಗಸವು ಕಟ್ಟಿಗೆಯನ್ನು ಹೋಗುತ್ತ ಒಮ್ಮೆ ಬರುತ್ತ ಒಮ್ಮೆ ಕೊರೆಯುವುದಷ್ಟೆ! ಹೀಗೆಯೇ ತಾಳವರಿತು ಎಡೆಯಾಡುತ್ತಿರುವ ವಾಯುವಿನಿಂದ ಅರ್ಥಾತ್ ಪ್ರಾಣಾಯಾಮಾದಿ ಯೋಗಸಾಧನೆಯಿಂದ ದೇಹ ಮತ್ತು ಆತ್ಮದ ಬೆಸುಗೆಯನ್ನು, ಹೊಲಿಗೆಯನ್ನು ಬಿಚ್ಚಿ ನೋಡಲಿಕ್ಕೆ ಆಗುವದು. ಆಗ ಮಾಸಿ ಕಾಂತಿ ವಿಹೀನವಾಗಿದ್ದ ಆತ್ಮತೇಜವು ತಳತಳಸಿ ಬೆಳಗಹತ್ತುವದು.

ಜೀವವೆಂಬ ಹಂಸಪಕ್ಷಿಯು ಅಂತಃಕರಣವೆಂಬ ತತ್ತಿಯನ್ನಿಟ್ಟಿದೆ. ಕಾವು ಕೊಟ್ಟರೆ ತತ್ತಿಯೊಡೆದು ಮರಿಗಳು ಹೊರಬರುವಂತೆ, ಅಧ್ಯಾತ್ಮಸಾಧನೆಯನ್ನು ಕೈಕೊಂಡರೆ ಅಂತಃಕರಣದ ವದರು ಪದರುಗಳೆಲ್ಲ ಬಿಚ್ಚಿ ಆತ್ಮಪ್ರಕಾಶವು ತುಂಬಾ ಪಸರಿಸುವದು. ಮಾನವನ ಹೃದಯ ಗುಹೆಯಲ್ಲಿ ಸುತ್ತೆಲ್ಲ ಕತ್ತಲೆಯೇ ವ್ಯಾಪಿಸಿದೆ. ಈ ಕತ್ತಲೆಯಳಿದು ಬೆಳಕು ತುಂಬಬೇಕು. ಚಿತ್ ಸೂರ್ಯನು ಜ್ಞಾನ-ಸೂರ್ಯನು ಅಜ್ಞಾನ ಮುಸುಕಿದ ಹೃದಯ ಗುಹೆಯನ್ನೆಲ್ಲ ಬೆಳಗಬಂದವನು. ಗುರುವು ಶಿಷ್ಯರಿಗೆ ನಾಲ್ಕು ನಾಲ್ಕು ದುಡ್ಡು ಕೊಟ್ಟು ಈ ಮನೆ ತುಂಬ ತುಂಬು-ವಷ್ಟು ಸಾಮಾನುಗಳನ್ನು ತರಲು ಹೇಳಿದನಂತೆ. ಕೆಲವರು ಭತ್ತದ ಗೊಳಲಿ ಕೆಲವರು ಹಿಟ್ಟು ಇನ್ನೂ ಕೆಲವರು ಕಸ ಗೊಬ್ಬರ ಇತ್ಯಾದಿಗಳನ್ನು ತಂದು ಇಟ್ಟರೂ ಮನೆಯ ಯಾವ ಒಂದು ಮೂಲೆಯೂ ತುಂಬಲಿಲ್ಲವಂತೆ. ಸೂಜ್ಞನಾದ ಶಿಷ್ಯನು ಮಾತ್ರ ಒಂದು ಮೇಣಬತ್ತಿಯನ್ನು ತಂದು ಅದನ್ನು ಹಚ್ಚಿ ಇಟ್ಟನಂತೆ. ಅದರಿಂದ ಮನೆಯೆಲ್ಲ ಬೆಳಕಿನಿಂದ ತುಂಬಿಹೋಯಿತು. ಪ್ರಕಾಶ ಸ್ವಾನುಭಾವ ಗಳೆರಡೂ ಹೊಂದಿಕೊಂಡೇ ಇರುವವು. ಮಾನವನ ಹೃದಯದಲ್ಲಿದ್ದ ದಿವ್ಯ ಕಲೆಯಿಂದ ಸೂಜ್ಞ ಶಿಷ್ಯನಂತೆ ಅದನ್ನು ಗುರುತಿಸಲು ಅವನಲ್ಲಿ ಅಡಗಿದ ಕತ್ತಲೆ, ಅಜ್ಞಾನ, ತಾಮಸ, ಮಾಯೆಯು ಅಂತರಾಯವಾಗುತ್ತದೆ. ಮೇಣಬತ್ತಿಯ ಬೆಳಕು ಮನೆಯಲ್ಲಿ ತುಂಬಿದ ಕತ್ತಲೆಯನ್ನು ಹೊಡೆದೋಡಿಸಿ ಅದನ್ನೆಲ್ಲ ಬೆಳಗುವಂತೆ ಜ್ಞಾನಜ್ಯೋತಿಯು ಹೊತ್ತಬೇಕು, ಕತ್ತಲೆ ಅಡಗಬೇಕು. ಇಂತಹ ಜ್ಞಾನ ಜ್ಯೋತಿಯನ್ನು ಕುರಿತು ಪ್ರಾರ್ಥಿಸುತ್ತಾನೆ ಕವಿ 'ಕರುಣಾಳು ಬಾ ಬೆಳಕೆ ಮುಸುಗಿದೀ ಮಬ್ಬಿನಲಿ ಕೈ ಹಿಡಿದು ನಡೆಸೆನ್ನನು' ಎಂದು. ಬುದ್ಧನಿಂದ ರತ್ನಾಕರ ವರ್ಣಿಯ ಕಾಲದ ವರೆಗೆ ಪಸರಿಸಿರುವ ಈ ಕಾಲಾವಧಿಯಲ್ಲಿ ಅದೆಷ್ಟೋ ಪ್ರಯತ್ನ ಗಳು ಪ್ರಕಾಶಮಯವಾದ ಈಶ್ವರದ ಮಹತಿಯನ್ನು ಬೆಳಗಿಸಲು ನಡೆದಿರುತ್ತವೆ.

ಇಹಲೋಕ ಜೀವನವು ಶ್ರೇಷ್ಠ, ಲೋಕಕಲ್ಯಾಣಕ್ಕೆ ಕಷ್ಟಪಡುವದು ಜೀವನದ ಸಾರ್ಥಕ್ಯ; ವ್ಯಕ್ತಿಯ ಉನ್ನತಿಯೊಂದರಿಂದ ಮಾತ್ರ ಸಾರ್ಥಕ್ಯದ ಆತ್ಯಂತಿಕ ಗುರಿ ಸಾಧಿಸಿದಂತಲ್ಲ; ವ್ಯಕ್ತಿಯ ಜೊತೆಗೆ ಸಮೂಹ ಜೀವನವು ಎಷ್ಟು ಮಟ್ಟಿಗೆ ಉತ್ತಮಗೊಂಡಿದೆ ಎಂಬದೂ ಮಹತ್ವದ ಸಂಗತಿಯಾಗಿದೆ. ವ್ಯಕ್ತಿ ಸಮಾಜಗಳ ನಡುವಿನ ಸುಮಧುರವಾದ ಬಾಂಧವ್ಯ, ಸಮನ್ವಯ ದೃಷ್ಟಿಕೋನ, ಪ್ರಗತಿಪರ ನಿಲವು, ಇಡಿಬಿಡಿಗಳ ಸಾಧುವಾದ ಹೊಂದಾಣಿಕೆ— ಇದುವೆ ಈಶ್ರಮದಿಂದ ಸಿದ್ಧಿವಡೆವ ಸೌಖ್ಯವು !

---

# ಕದಳಿ

ನಿಜವಾದ ಉತ್ತಮಿಕೆಯ ಒಂದು ಮಾರ್ಗಕ್ಕೆ ಬಾಳಬಟ್ಟೆ ಎಂದು ಕರೆಯಲಾಗುತ್ತದೆ. ಜೀವನವನ್ನು ಹೇಗೆ ಸಾಗಿಸಬೇಕು, ಧ್ಯೇಯವು ಎಂತಹ-ದಿರಬೇಕು, ಅದರ ಸಾಫಲ್ಯ ಯಾವುದರಿಂದ ಸಾಧ್ಯ ಈ ಮುಂತಾದ ವಿಮರ್ಶೆ-ಯನ್ನೊಳಗೊಂಡ ವಿವೇಚನೆಯು ಬಾಳಬಟ್ಟೆ ಎಂಬುದನ್ನು ಸೂಚಿಸುವುದು. ಬಾಳಬಟ್ಟೆಯ ಪರಮಾಗಮವೆಂಬ ಪದವು ಜೀವನ ಮಾರ್ಗವನ್ನು ಕುರಿತು ಪ್ರಯೋಗಿಸಲ್ಪಟ್ಟಿದೆ. ಜೀವನದ ಆದರ್ಶವು ವ್ಯಕ್ತಿ ವ್ಯಕ್ತಿಯಿಂದ ಭಿನ್ನ-ವಾಗಿರುತ್ತದೆ. ತುಲನಾತ್ಮಕ ದೃಷ್ಟಿಯಿಂದ ಅದನ್ನು ಆಲೋಚಿಸುವುದಾದರೆ ಅದರಲ್ಲಿ ಒಂದು ಬಗೆಯ ತರಗತಿಯುಂಟೆಂಬುದು ವ್ಯಕ್ತವಾಗದಿರದು. ಆದರೆ ಜೀವನವು ಪರಮಾದರ್ಶದಿಂದ ಕೂಡಿಕೊಂಡಿರಬೇಕು. ಜೀವನಾವಧಿಯಲ್ಲಿ ತನಗೆ ಅತಿಶಯವಾಗಿ ಅತ್ಯಂತವಾಗಿ ದೊಡ್ಡ ಗುರಿಯಾವುದಿದೆಯೋ ಅದೆಲ್ಲ ಸಾಧ್ಯವಾಗುವದನ್ನು ಗಮನದಲ್ಲಿಟ್ಟುಕೊಂಡಿರಬೇಕು. ಹಾಗಾದರೆ ಅಂತಹ ಪರಮಾದರ್ಶವಾವುದು ? ಪರಮಾದರ್ಶವು ಸಾಹಿತ್ಯ ಸ್ವಾನುಭವಗಳಿಗೆ ಹೊಂದಿಕೆಯಾಗುವ ರೀತಿಯಲ್ಲಿ ವ್ಯಕ್ತವಾಗಿರಬೇಕು. ಶಿವಶರಣರು ಜೀವನದ ಪರಮಾದರ್ಶವನ್ನು, ಆ ಬಾಳಬಟ್ಟೆಯ ಪರಮಾಗಮವನ್ನು 'ಕದಳಿ' ಎಂಬ ಒಂದು ಪದದಿಂದ ಸೂಚಿಸಿರುವರು. ಅಕ್ಕಮಹಾದೇವಿ, ಲಿಂಗಮ್ಮ, ಸಿದ್ಧ-ರಾಮೇಶ್ವರ, ಅಲ್ಲಮ ಪ್ರಭುದೇವರು ಇತ್ಯಾದಿಗಳ ವಚನಗಳಲ್ಲಿ 'ಕದಳಿ' ಎಂಬ ಪದವು ಸಾಕಷ್ಟು ಸಿಗುತ್ತದೆ. ಇದು ಅಲ್ಲದೆ ವಚನಗಳಿಗೆ ಟೀಕೆ ಟಿಪ್ಪಣಿ ಗಳನ್ನು ಬರೆದ ಮಹನೀಯರೂ ಈ ಪದವನ್ನು ತಮ್ಮ ಕೃತಿಗಳಲ್ಲಿ ಅನೇಕ ಸಾರೆ ಬಳಸಿಕೊಂಡಿದ್ದಾರೆ. 'ಕದಳಿ' ಎಂಬ ಪದಕ್ಕೆ ವಿವಿಧ ಸನ್ನಿವೇಶಗಳಲ್ಲಿ ವಿವಿಧ ಅರ್ಥಸಂಪತ್ತಿಯೊದಗಿರುತ್ತದೆ. ಅಕ್ಕಮಹಾದೇವಿಯ ಒಂದು ವಚನದಲ್ಲಿ ಬಳಸಲ್ಪಟ್ಟ ಈ ಶಬ್ದಕ್ಕೆ ಇರುವ ಅರ್ಥ ವೈಚಿತ್ರ್ಯವು ಗಮನಾರ್ಹವಾಗಿರುತ್ತದೆ :

**ಕದಳಿಯೆಂಬುದು ತನು, ಕದಳಿಯೆಂಬುದು ಮನ,**
**ಕದಳಿಯೆಂಬುದು ವಿಷಯಂಗಳು;**
**ಕದಳಿಯೆಂಬುದು ಭವ ಘೋರಾರಣ್ಯ !**

ಕದಳಿಯೆಂಬುದ ಗೆದ್ದು ಬದುಕಿ ಬಂದು
ಕದಳಿಯ ಬನದಲ್ಲಿ ಭವಹರನ ಕಂಡೆನು.
'ಭವಗೆಟ್ಟು ಬಂದೆಯಾ ಮಗಳೆ'— ಎಂದು
ಕರುಣದಿಂದ ತೆಗೆದು ಬಿಗಿದಪ್ಪಿದಡೆ
ಚೆನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗಿದೆನು.

ಸಂಸ್ಕೃತ ಕೋಶದಲ್ಲಿ 'ಕದಲೀ' ಶಬ್ದಕ್ಕೆ 'ಬಾಳೆಯ ಗಿಡ' 'ಒಂದು ಪ್ರಕಾರದ ಜಿಗರೆ' 'ಧ್ವಜ' 'ಆನೆಯು ಒಯ್ಯುತ್ತಿರುವ ಒಂದು ಧ್ವಜ' ಎಂಬ ಬೇರೆ ಅರ್ಥಗಳನ್ನು ಕೊಡಲಾಗಿದೆ. ಕಿಟೆಲ್ ಸಾಹೇಬರು ತಮ್ಮ ಕನ್ನಡ–ಇಂಗ್ಲಿಷ ನಿಘಂಟುವಿನಲ್ಲಿ ಈ ಶಬ್ದಕ್ಕೆ 'ಭೂಜವೃಕ್ಷ, ಶಿವ, ಆಕಾಶ, ಆನೆ, ಮೂಲಿಕೆಗಳನ್ನು ಮಾರುವ, ತಮ, ಕತ್ತಲೆ, ಅರಣ್ಯಮಧ್ಯ' ಎಂಬ ಅರ್ಥಗಳನ್ನು ಕೊಟ್ಟಿದ್ದಾರೆ. 'ಕದಳಿ' ಶಬ್ದವು 'ಕದಲೀ' ಎಂಬ ಸಂಸ್ಕೃತ ಶಬ್ದದ ತದ್ಭವ ರೂಪವೆಂದು ತಿಳಿದು ಇದಕ್ಕೆ 'ಬಾಳೆ' ಎಂಬ ಅರ್ಥವನ್ನೇ ಗ್ರಹಿಸಿದಂತೆ ಕಾಣುತ್ತದೆ.

ವಚನಗಳಿಗೆ ಟೀಕೆಯನ್ನು ಬರೆದವರು 'ಕದಳಿ' ಶಬ್ದಕ್ಕೆ ಸಂದರ್ಭಾನುಸಾರವಾಗಿ ವಿವಿಧ ಅರ್ಥಗಳನ್ನು ಕೊಟ್ಟಿರುತ್ತಾರೆ. ಅವುಗಳಲ್ಲಿ 'ಬಾಳೆ' ಎಂಬ ಅರ್ಥವೂ ಒಂದು, 'ಬಾಳೆ' ಎಂಬ ಈ ಪದವು 'ಬಾಳು' ಕ್ರಿಯಾಪದದಿಂದ ನಿಷ್ಪನ್ನವಾಗುವ 'ಬಾಳುವೆ— ಪ್ರಪಂಚ, ಜೀವನ' 'ಬಾಳಲಾರೆನು ಬದುಕಲಾರೆನು' ಎಂಬ ಅರ್ಥದಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ಇಲ್ಲಿ ಶಬ್ದ ಸಾಮ್ಯದಿಂದ ಬೇರೆ ಅರ್ಥವನ್ನು ಗುರುತಿಸಬಹುದು. ಕೋಲ ಶಾಂತಯ್ಯ ಎಂಬ ಒಬ್ಬ ಶರಣನು 'ಬಾಳೆ ಬಲಿದು ಈಳೆಯ ಮರನಾಯಿತು' ಎಂಬ ಮಾತುಗಳಿಂದ ಒಂದು ವಚನವನ್ನು ಪ್ರಾರಂಭಿಸುತ್ತಾನೆ. ಇಲ್ಲಿ 'ಬಾಳೆ' ಶಬ್ದಕ್ಕೆ ಸಿಂಗಳದ ಸಿದ್ಧಬಸವರಾಜನು 'ಸಂಸಾರ ವಿಷಯ ರಸವನೆ ತುಂಬಿಕೊಂಡಿರುವ ತನುವೆಂಬುದೀಗ ಬಾಳೆ' ಎಂದು ಅರ್ಥೈಸಿದ್ದಾನೆ. ಮಧುವಯ್ಯನೆಂಬ ಇನ್ನೊಬ್ಬ ಶರಣನ ವಚನದಲ್ಲಿ ಬರುವ 'ವನದ ಬಾಳೆಯ ಗೊನೆಯ ಕೊಯ್ದು, ಕಳ್ಳನ ಅಡಿವಜ್ಜೆಯಲ್ಲಿ ಹೋಗಿ, ಹೆಡಗುಡಿಯ ಕಟ್ಟಿ ಬಾಧಿಸಿ ಗೊನೆಯ ತೋರೆಂದ........' ಇತ್ಯಾದಿಯಾದ ಮಾತುಗಳಲ್ಲಿಯ 'ಬಾಳೆ' ಪದಕ್ಕೆ ಅದೇ ಸಿಂಗಳದ ಸಿದ್ಧಬಸವರಾಜದೇವನು, ಷಡಾಧಾರ ಚಕ್ರಂಗಳಿಗೆ ಮಧ್ಯಸ್ಥಲವಾದ

ಹೃದಯಕಮಲವೆಂಬುದೀಗ ಬಾಳೆ' ಎಂಮ ಅರ್ಥವನ್ನು ಕೊಟ್ಟಿದ್ದಾನೆ. ಕಲ್ಲುಮಠದ ಪ್ರಭುದೇವರು 'ಕವಳಿ'ಗೆ 'ಬ್ರಹ್ಮರಂಧ್ರದಲ್ಲಿರುವ ಶಿವಕಲಾವೃಕ್ಷ' ಎಂದೂ, ಇನ್ನೊಬ್ಬ ಟೀಕಾಕಾರನು 'ಬ್ರಹ್ಮರಂಧ್ರದ ನಿಷ್ಕಲ ಲಿಂಗ' ಎಂದೂ, ಮತ್ತೊಬ್ಬ ಟೀಕಾಕಾರನು 'ಭವಾರಣ್ಯ'ವೆಂದೂ ನಿರ್ವಚನ ಮಾಡಿದ್ದಾರೆ. ಇದರಿಂದ 'ಕದಳಿ-ಬಾಳೆ' ಎಂಬ ಪದಗಳಿಗೆ ಶಿವಶರಣರು ತೋರಿಕೆಯ ಅರ್ಥಕ್ಕಿಂತ ಆಧ್ಯಾತ್ಮಿಕ ಹಾಗು ಅನುಭವಾತ್ಮಕ ಅರ್ಥವನ್ನೇ ಕಂಡಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ.

ಅಕ್ಕಮಹಾದೇವಿಯು ಕದಳೀ ಬನದಲ್ಲಿ ಶ್ರೀಚೆನ್ನಮಲ್ಲಿಕಾರ್ಜುನನೊಡನೆ ಸಮರಸವ ಪಡೆದಳೆಂದೂ ಈ ಕದಳೀ ಬನವು ಶ್ರೀಶೈಲವಲ್ಲಿರುತ್ತದೆಂದೂ ಪ್ರತೀತಿಯಿದೆ. ಅಲ್ಲಮ ಪ್ರಭುದೇವರೂ ಆ ಕದಳೀ ಬನದಲ್ಲಿಯೇ ಬಯಲಾದರೆಂದು ಹೇಳುತ್ತಾರೆ. ಶ್ರೀಗುರು ಚರಿತೆಯಲ್ಲಿ ನರಸಿಂಹ ಸರಸ್ವತಿಗಳು ಕದಳಿ ಬನದಲ್ಲಿಯೇ ಐಕ್ಯರಾದರೆಂದು ತಿಳಿಸಲಾಗಿದೆ. ಅಕ್ಕಲಕೋಟೆಯ ಮಹಾರಾಜರು ಮೊದಲು ಕದಳೀ ಬನದಿಂದ ಹೊರಟರೆಂದು ದಂತಕಥೆಯಿದೆ. ಇದಲ್ಲದೆ ರಾಮಾಯಣ ಯುದ್ಧ ಮುಗಿದ ಬಳಿಕ ಹನುಮಂತನು ಕದಳೀ ಬನದಲ್ಲಿ ತಪಸ್ಸು ಮಾಡುತ್ತಿದ್ದನೆಂದು ಒಂದು ಐತಿಹ್ಯವಿದೆ. ಯೋಗತಾರಾವಲಿ ಎಂಬ ಗ್ರಂಥದಲ್ಲಿ ಶ್ರೀ ಶಂಕರಾಚಾರ್ಯರು ಶ್ರೀಶೈಲದಲ್ಲಿ ತಪಸ್ಸನ್ನಾಚರಿಸಿದರೆಂದೂ ಉಲ್ಲೇಖ ಬರುತ್ತದೆ. ಈ ಎಲ್ಲ ಸಂಗತಿಗಳಿಂದ ಬಹು ಪುರಾತನ ಕಾಲದಿಂದ ಶ್ರೀಶೈಲದ ಕದಳೀ ಬನವು ಒಂದು ಪುಣ್ಯಸ್ಥಾನವೆಂದೂ, ಅದೊಂದು ಬಾಳೆಯ ವನವೆಂದೂ, ಅದು ಅನೇಕ ಋಷಿ-ಮುನಿಗಳ, ಸಿದ್ಧ-ಸತ್ಪುರುಷರ ತಪೋಭೂಮಿಯಾಗಿತ್ತೆಂದೂ, ಐಕ್ಯವಾಗಲಿಚ್ಛಿಸುತ್ತಿದ್ದ ಯೋಗಿಗಳು ಅಲ್ಲಿ ತಮ್ಮ ಸ್ಥೂಲ ಕಳೇಬರವನ್ನು ಬಿಟ್ಟು ಪರಂಧಾಮವನ್ನು ಹೊಂದುತ್ತಿದ್ದರೆಂದೂ ಗೊತ್ತಾಗುವದು. ಕದಳೀ ಬನವು ಶ್ರೀಶೈಲದಲ್ಲಿ ಇತ್ತೆಂಬುದನ್ನು ಶೋಧಿಸಲು ಇತ್ತೀಚೆಗೆ ಬಹಳ ಪ್ರಯತ್ನಗಳು ನಡೆದಿರುತ್ತವೆ. ಅನೇಕರು ಹೇಳುತ್ತಿರುವಂತೆ ಕದಳೀ ಬನದ ದಾರಿಯು ಸಿಗುವದು ದುರ್ಲಭ. ಅದೊಂದು "ದುರ್ವಾರಕಾಂತಾರ ಘನ ಬಿಲಾಂತ ಮಹಾಗಹ್ವರಗಲ್ಲಿರುವ ಒಂದಾನೊಂದು 'ಏಕಾಂತವಾಸ' ಪ್ರಾಂತವು". ಪುರಾಣ ಕಾಲದಿಂದಲೂ ಅನೇಕ ಗ್ರಂಥಗಳಲ್ಲಿ ಈ ಕದಳಿಯ ಬನವು ಉಲ್ಲೇಖಗೊಳ್ಳುತ್ತ ಬಂದಿರುತ್ತದೆ. ಶ್ರೀಶೈಲ ಮಲ್ಲಿಕಾರ್ಜುನ ದೇವಾಸ್ಥಾನದಷ್ಟೇ ಈ ಸ್ಥಾನವು ಪುರಾತನವಾದದ್ದಿರುತ್ತದೆ. ಇದರ ದಾರಿಯು ಸಿಕ್ಕರೂ ಅಲ್ಲಿಂದ

ಆ ಬನವಿರುವ ಸ್ಥಾನವನ್ನು ಕಾಣುವದು ಇನ್ನೂ ಪ್ರಯಾಸವುಳ್ಳದ್ದಾಗಿದೆ. ಆದರೆ ಈಚೆಗೆ ನಡೆದಿರುವ ಪ್ರಯತ್ನಗಳಿಂದ ಫಲವನ್ನು ಇನ್ನೂ ನಿರೀಕ್ಷಿಸಬೇಕಾಗಿದೆ.

ಕದಳೀ ಬನದ ಅನುಭವವನ್ನು ಶಿವಶರಣರು ಅಂತರಂಗದಲ್ಲಿ ಕಂಡಿದ್ದಾರೆ. ಅವರ ವಚನವಾಙ್ಮಯದಲ್ಲಿ 'ಕದಳಿ' ಶಬ್ದಕ್ಕೆ ಬಹಳ ಗೂಢವಾದ ಅಧ್ಯಾತ್ಮ-ಪರವಾದ ಅರ್ಥವಿರುತ್ತದೆ. 'ಕದಳಿಯೆಂಬುದು ವಿಷಯಂಗಳು, ಕದಳಿಯೆಂಬುದು ಮನ' ವಿಷಯುಗಳನ್ನು ಗ್ರಹಿಸುವದು ಮನ. ಪಂಚಜ್ಞಾನೇಂದ್ರಿಯಗಳಿಂದ ಪಂಚ ವಿಷಯಗಳನ್ನು ಗ್ರಹಿಸುವದು ಮನವಾದರೆ ಗ್ರಹಿಸಿದ ವಿಷಯಗಳನ್ನು ಭೋಗಿಸುವದು ದೇಹ. ಆದ್ದರಿಂದ ದೇಹಕ್ಕೆ ಭೋಗಭೂಮಿ ಎಂಬ ಹೆಸರು. ಆದರೆ ಈ ಭೋಗವು ಹಿತವಾಗಿ ಮಿತವಾಗಿ ಇದ್ದರೆ ಅದು ಕದಳಿ. ಸುಲಿದ ಬಾಳೆಯಂತೆ ಅದು ಸುಖಕರ. ಅದು ಅತಿಯಾಗಿ ಪರಿಣಮಿಸಿದರೆ ಭೋಗವು ರಾಗವಾಗು-ವದು. ರಾಗದಿಂದಲೆ ಭವಬೀಜ. ವಿಷಯಗಳಲ್ಲಿಯ ಅತಿಯಾದ ಆಸಕ್ತಿಯಿಂದ ಭವರೋಗಕ್ಕೆ ತುತ್ತಾಗಬೇಕಾಗುವದು; ಭವವೆಂಬ ಅರಣ್ಯದಲ್ಲಿ ದಿಕ್ಕುಗಾಣ-ದಂತೆ ತೊಳಲಿ ಬಳಲಬೇಕಾಗುವದು. ಕದಳೀ ಬನವೆಂದರೆ ಭವಾರಣ್ಯವೆಂದು ಅಕ್ಕನು ಸ್ಪಷ್ಟವಾಗಿಯೇ ತಿಳಿಸಿದ್ದಾಳೆ. ಕದಳಿ ಎಂದರೆ ತಮಸ್ಸು, ಮಾಯೆ. 'ಕದಳಿ ಎಂಬುದ ಗೆದ್ದು' ಎಂಬ ಮಾತುಗಳಲ್ಲಿ ಮಾಯೆಯನ್ನು ಪರಿಹರಿಸಿಕೊಳ್ಳ-ಬೇಕೆಂಬ ಅಭಿಮತವಿದೆ.

ಮಾಯೆಯು ಕಾಯಕ್ಕೆ ನೆಳಲಾಗಿ, ಪ್ರಾಣಕ್ಕೆ ಮನವಾಗಿ, ಮನಕ್ಕೆ ನೆನಹಾಗಿ, ನೆನಹಿಗೆ ಅರಿವಾಗಿ, ಜಗದ ಜಂಗುಳಿಗೆ ಬೆಂಗೋಲನೆತ್ತಿ ಕಾಡುವದು. 'ಮಾಯೆ' ಎಂಬ ಶಬ್ದದ ನಿಜವಾದ ವ್ಯುತ್ಪತ್ತಿಯನ್ನು ಮನದಂದರೆ ತಾಯಿ ಎಂದೇ ಅರ್ಥವಾಗುತ್ತದೆ. 'ಮಾ' ಎಂಬುದು ಮೂಲ ಶಬ್ದ. ಇದಕ್ಕೆ ಹೇಗೆ ಪ್ರತ್ಯಯಗಳನ್ನು ಜೋಡಿಸಿದರೂ ತಾಯಿಯೆಂದೇ ಅರ್ಥವಾಗುತ್ತದೆ. ಮಾ— ಮಾತಾ, ಮಾಯಾ, ಉಮಾ, ಅಮ್ಮಾ. ಮಾಯೆ ಎಂದರೆ ಮರಹು, ಸ್ವರೂಪ ವಿಸ್ಮೃತಿ; ಅರುಹು ಚಿತ್ತ ಪ್ರಕಾಶ, ಚಿತ್‌ಶಕ್ತಿ. ತನ್ನ ಸ್ವರೂಪವನ್ನು ಅರಿತು ವ್ಯವಹರಿಸಿದರೆ ಆ ಶಕ್ತಿಯು ತನಗೆ 'ತಾರಕ'ವಾಗುವದು. ತನ್ನ ಮರೆತು ಎಂದರೆ ಸ್ವರೂಪ ವಿಸ್ಮೃತಿಯಿಂದ ಒಡನಾಡಿದರೆ ಅದೇ ಶಕ್ತಿಯು ಬಂಧಕವಾಗುವದು. 'ಶಕ್ತಿದರಿದ್ರಃ ಸಂಸಾರೀ ಉಚ್ಯತೆ' ಎಂದು ಕ್ಷೇಮರಾಜನು

ತನ್ನ 'ಪ್ರತ್ಯಭಿಜ್ಞಾನ ಹೃದಯ'ದಲ್ಲಿ ಬಹು ಸುಂದರವಾಗಿ ವರ್ಣಿಸಿದ್ದಾನೆ. ದೇವನಲ್ಲಿದ್ದ ಪಂಚಶಕ್ತಿಗಳೇ ಜೀವನ ಮಲಾವರಣದಿಂದ ಪಂಚ ಕಂಚುಕ-ಗಳಾಗಿರುವವು. ಸಚ್ಚಿದಾನಂದ ನಿತ್ಯ ಪರಿಪೂರ್ಣತೆಗಳು ಮಲಾವೃತವಾದುದ ರಿಂದ ಆ ಶಕ್ತಿಗಳಿಗೆ ವಿಕಾಸವಾಗುವ ಇಂಬು ದೊರೆಯುತ್ತಿಲ್ಲದು. ಹೀಗೆ ಸಂಕುಚಿತವಾದ ಶಕ್ತಿಗಳನ್ನು ವಿಕಸನಗೊಳಿಸಿ ಮರವೆಯನ್ನು ಗೆದ್ದುಕೊಂಡರೆ ಕದಳೀ ಬನದಲ್ಲಿಯ ಭವಹರನನ್ನು ಕಾಣಲು ಸಾಧ್ಯವಾಗುವದು. ಇಲ್ಲಿ 'ಕದಳೀ ಬನ' ಎಂದರೆ ಬ್ರಹ್ಮರಂಧ್ರವನ್ನು ಸುತ್ತುಗಟ್ಟಿದ ಸಂಸಾರಚಕ್ರ.

ಸರ್ಪಭೂಷಣ ಶಿವಯೋಗಿಗಳು ಪ್ರಸಿದ್ಧವಾದ ಕ್ಷೇತ್ರಗಳನ್ನು ತಮ್ಮ ಅಂತರಂಗದಲ್ಲಿ ಕಂಡುಕೊಂಡಂತೆ 'ಶ್ರೀಗಿರಿಯ ಸುಕ್ಷೇತ್ರ'ವನ್ನು ತಮ್ಮ ಅಂತ-ರಂಗದಲ್ಲಿಯೇ ಕಂಡು ಅದನ್ನುಯೋಗಪರವಾಗಿ ಹಾಡಿಕೊಂಡಿದ್ದಾರೆ. ವೀರಶೈವ ಅನುಭಾವಿಗಳು ಬಾಹ್ಯ ಪ್ರಪಂಚದಲ್ಲಿ ಕಾಣುವ ವಸ್ತು—ಒಡವೆಗಳನ್ನು ಮತ್ತು ಅವುಗಳ ಗುಣಧರ್ಮಗಳನ್ನು ಸಂಪೂರ್ಣವಾಗಿ ಆಕಲನ ಮಾಡಿಕೊಂಡು ಬ್ರಹ್ಮಾಂಡದಲ್ಲಿದ್ದುದು ಪಿಂಡಾಂಡದಲ್ಲಿಯೂ ಇದೆಯೆಂಬುದನ್ನು ಅನುಭವಿಸಿ ದರು. ಆದ್ದರಿಂದ ಅವನ್ನು ಕುರಿತು ತಮ್ಮ ಶಿವಯೋಗ ದೃಷ್ಟಿಯಲ್ಲಿ ಬಣ್ಣಿಸಿ ದ್ದಾರೆ. ಸರ್ಪಭೂಷಣರು ಶ್ರೀಶೈಲವನ್ನು ಕುರಿತು :

ಶ್ರೀಗಿರಿಯ ಸುಕ್ಷೇತ್ರಕಿಂದು
ಹೋಗಿ ಯಾತ್ರೆಯ ಮಾಡಿ ಬಂದೆ ।
ಶ್ರೀಗಿರಿಯು ಶರೀರದೊಳಗುಂಟು । ಓಂ ಶ್ರೀಗುರುಸಿದ್ಧ
ಯೋಗೀ ಜನರಿಗೆ ಮರ್ಮವು ಬೇರುಂಟು ॥

ಎಂದು ಪ್ರಾರಂಭಿಸುತ್ತ ೯ ಪದ್ಯಗಳಿಂದ ಕೂಡಿದ ತಮ್ಮಪದ್ಯದಲ್ಲಿ ಶ್ರೀಶೈಲಕ್ಷೇತ್ರ ಯಾತ್ರೆಗೆ ಹೋಗುವವರು ಅಲ್ಲಿ ಕಾಣಬಹುದಾದ ಎಲ್ಲ ಸ್ಥಾನಗಳನ್ನು ತಮ್ಮ ಪಿಂಡದಲ್ಲಿ ಕಂಡು ಯೋಗದ ನಿಲವಿನಲ್ಲಿ ಬಣ್ಣಿಸಿದ್ದಾರೆ. ಕದಳಿಯ ಬನವನ್ನು ಕುರಿತು ಅವರು,

ಸಪ್ತನದಿಯ ಸಂಗಮದ ದಾಂಟಿ
ಗುಪ್ತ ಕದಳಿಯ ಬನದೊಳಗೆ ಸುಳಿದ ।
ಲಿಪ್ತ ಗುಹೆಯೊಳಗೊಬ್ಬನೆ ಹೊಕ್ಕೆನೊ । ಓಂ ಶ್ರೀಗುರುಸಿದ್ಧ
ಸಪ್ತವರ್ಣದ ಲಿಂಗವ ಕಂಡೆನೊ ॥

ಎಂದು ಹಾಡಿಕೊಂಡಿದ್ದಾರೆ. ಕದಳಿಯ ಬನವು ಹೊರಗಿರಬಹುದು. ಆದರೆ ಅಂತರಂಗದಲ್ಲಿ ಕಾಣುವ ಅದರ ಮಹತಿಯನ್ನು ಯೋಗಿಗಳಾದವರು ಮಾತ್ರ ಅರಿತು ಆನಂದ ಪಡೆಯಬಹುದೆಂಬುದನ್ನು ಅವರು ಇಲ್ಲಿ ಸ್ಪಷ್ಟಗೊಳಿಸಿದ್ದಾರೆ. ಸಪ್ತ ನದಿಗಳು ಆಧಾರದಿಂದ ಆಜ್ಞೆಯದ ಮೇಲಿನ ಸಹಸ್ರಾರದ ವರೆಗಿನ ಏಳು ಚಕ್ರಗಳು. ಗೌಪ್ಯವಾದ ಕದಳಿಯ ಬನವು ಇರುವುದು ಈ ಏಳನೆಯ ಸಹಸ್ರಾರ ಚಕ್ರದಲ್ಲಿ. ಸಹಸ್ರಾರದಲ್ಲಿ ಕೇಂದ್ರವಾದ ಸ್ಥಳಕ್ಕೆ ಮಹಾಕಾಶ, ಚಿದಾಕಾಶ, ಜ್ಞಾನಾಕಾಶ ಎಂದು ಬಗೆ ಬಗೆಯಾಗಿ ಕರೆಯುತ್ತಾರೆ. ಇದೇ ಕದಳೀ ಬನದಲ್ಲಿಯ ಗುಹೆ, ಅಲ್ಲಿ ಪರವಸ್ತುವು ನಾಸಿರದಳ ಪದ್ಮಾಸನನಾಗಿ ವಿರಾಜಿಸುತ್ತಿದ್ದಾನೆ. ಸೂರ್ಯ ಪ್ರಕಾಶದಲ್ಲಿ ಏಳು ಬಣ್ಣಗಳಡಗಿವೆಯಷ್ಟೆ! ಚಿತ್ಸೂರ್ಯನೆನಿಸಿದ ಪರವಸ್ತುವು ಈ ಸಪ್ತವರ್ಣದ ಲಿಂಗವಲ್ಲದೆ ಮತ್ತಿನ್ನೇನು ?

ಹಡಪದ ಅಪ್ಪಣ್ಣನವರ ಪುಣ್ಯಾಂಗನೆ ಲಿಂಗಮ್ಮ ಶಿವಶರಣೆಯರಲ್ಲಿ ಅತಿ ಪ್ರಖರವಾದ ಯೋಗದೃಷ್ಟಿಯನ್ನು ಪಡೆದುಕೊಂಡಿದ್ದ ಮಹಾ ತಾಯಿ. ಆಕೆಯ ೧೦೧ ವಚನಗಳಲ್ಲಿ ಒಂದೊಂದರಲ್ಲಿ ಯೋಗದ ಒಂದೊಂದು ಮಗ್ಗಲು ಸ್ಫುಟವಾಗಿ ವ್ಯಕ್ತವಾಗುತ್ತದೆ. ಯೋಗವನ್ನು ವಿಶೇಷವಾಗಿ ಹಠಯೋಗವನ್ನು ಪುರುಷರು ಮಾತ್ರ ಸಾಧಿಸಬಲ್ಲರು ಎಂಬ ಉಕ್ತಿಯು ನಿರಾಧಾರವಾದುದೆಂಬುದು ಇವುಗಳಿಂದ ಸ್ಪಷ್ಟವಾಗುತ್ತದೆ. ಕುಂಡಲಿನೀ ಜಾಗ್ರುತಿಯಲ್ಲಿ ಆಕೆಗೆ ಇದ್ದ ಸಹಜ ನಿಲವು ಅನ್ಯಾದೃಶವಾಗಿರುತ್ತದೆ. ಯೋಗಸಾಧನೆಗಾಗಲಿ, ಅನುಭವ ಸಾಕ್ಷಾತ್ಕಾರಕ್ಕಾಗಲಿ ದೇಹವು ಅವಶ್ಯವಾಗಿ ಬೇಕು. ಶರೀರಸ್ವಾಸ್ಥ್ಯವಿಲ್ಲದಿದ್ದರೆ ಯಾವ ಕಾರ್ಯವೂ ಸಾಧಿಸುವದಿಲ್ಲ. 'ಆದುದರಿಂದ ಕೂಡಲ ಸಂಗಮ ದೇವರನೊಲಿಸ ಬಂದ ಪ್ರಸಾದಕಾಯವ ಕೆಡಿಸಲಾಗದು' ಎಂದು ಬಸವಣ್ಣನು ಹೇಳುವ ಉಕ್ತಿಯಲ್ಲಿ ಬಹಳ ಅರ್ಥಸಂಪತ್ತಿಯಡಗಿದೆ. ಕಾಯದ ಮಹತಿಯನ್ನು ಕಂಡು ಈ ಕಾರ್ಯಕ್ಕೆ ಕದಳಿ ಎಂದೂ ಕರೆದಿದ್ದಾರೆ. ಶರೀರವೇನೋ ಮಲಾವೃತವಾಗಿದೆ, ಮಲಭರಿತವಾಗಿದೆ. ಅದು ಮಾಂಸದ ಮುದ್ದೆ. ಆದರೆ ಇದ್ದಲಿಯಲ್ಲಿ ಬೆಳಕು ಬೆಂಕಿಗಳು ಅಡಗಿರುವಂತೆ ಈ ದೇಹದಲ್ಲಿ ಜ್ಯೋತಿ ಶಕ್ತಿಗಳು ಅಡಗಿರುತ್ತವೆ. ಅವನ್ನು ಒಡಮೂಡಿಸಿಕೊಳ್ಳುವದು ಸಾಧನೆಯ ಕಾರ್ಯ. ಈ ದೇಹವು ಅಸ್ಥಿರ ಮತ್ತು ಹೇಯ ಎಂದು ಭಾವಿಸಿ ಇದರ ಬಗೆಗೆ ಕ್ಷುದ್ರ ಭಾವನೆ ತಾಳುವವರಿಗೆ ವಿದ್ಯುತ್ತಿನ ಬ್ಯಾಟರಿಯಂತಿದ್ದ ಈ ದೇಹದ ಮಹತ್ವವು ವ್ಯಕ್ತವಾಗದು.

ಲಿಂಗಮ್ಮನು ಹೇಳುತ್ತಾಳೆ ತನ್ನದೊಂದು ಅಮೌಲ್ಯವಾದ ವಚನದಲ್ಲಿ :

ಕಾಯವೆಂಬ ಕದಳಿಯನೆ ಹೊಕ್ಕು
ನೂನ ಕದಳಿಯ ದಾಂಟಿ, ಜೀವ ಪರಮರ ನೆಲೆಯನರಿದು
ಜನನ ಮರಣವ ಗೆದ್ದು ಭವವ ದಾಂಟಿದಲ್ಲದೆ
ಘನವ ಕಾಣಬಾರದೆಂಬರು
ನಮ್ಮ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ.

ಇಲ್ಲಿ ನೂನ ಕದಳಿ ಎಂದರೇನು ? ಸಾಧಕರು ಧ್ಯಾನಕ್ಕೆ ಕುಳಿತುಕೊಂಡಾಗ ಅವರ ಕಣ್ಣಿಗೆ ಮೊಟ್ಟಮೊದಲು ಕತ್ತಲೆಯೇ ತೋರುವದು. ಬಹಳ ದಿನಗಳ ಅವಿರತವಾದ ಸಾಧನೆಯ ತರುವಾಯ ಅವರಿಗೊಂದು ಬೆಳಕು, ಒಂದು ಪ್ರಭೆ ಕಾಣತೊಡಗುವದು. ಈ ಕತ್ತಲೆಯು ಲಿಂಗ ಶರೀರದ ಅಥವಾ ಸೂಕ್ಷ್ಮ ಶರೀರದ ಬಾಹ್ಯ ಆವರಣ. ಸಾಧನೆಯ ಪೂರ್ವದಲ್ಲಿ ಇದು ಗಾಢವಾಗಿ ಆವರಿಸಿಕೊಂಡು ಬಿಟ್ಟಿರುತ್ತದೆ. ಇದಕ್ಕೆ ಆವರಣಶಕ್ತಿ ಇಲ್ಲವೆ ವಿಕ್ಷೇಪಶಕ್ತಿ ಎಂದು ಹೆಸರು. ಪಂಚ ತನ್ಮಾತ್ರೆಗಳು ಹಾಗು ಮನ ಅಹಂಕಾರ ಮಹತ್ತುಗಳು ಕೂಡಿ ಲಿಂಗಶರೀರವೆನಿಸುತ್ತದೆ. 'ಅಷ್ಟಧಾಪ್ರಕೃತಿ'ಯಾದ ಈ ಅಂಧಃಕಾರವೇ ಆ ಕತ್ತಲೆಯ ಆವರಣ. ಇದನ್ನು ಲಿಂಗಮ್ಮ 'ನೂನ ಕದಳಿ' ಎಂದು ಹೆಸರಿಸಿದ್ದಾಳೆ. ಇದನ್ನು ಭೇದಿಸಿ ಮುಂದೆ ಹೋದ ಹೊರತು ಪ್ರಕಾಶವು ಗೋಚರವಾಗುವದಿಲ್ಲ, ಕುಂಡಲಿನಿಯು ಜಾಗ್ರತವಾಗುವದಿಲ್ಲ. ಕುಂಡಲಿನಿಯು ಜಾಗ್ರತವಾದ ಹೊರತು ಕತ್ತಲೆ ಹರಿದು ಬೆಳಕು ಬೀರದು. ಅಷ್ಟಧಾಪ್ರಕೃತಿಯ ಅಂಧಃಕಾರವನ್ನು ಪರಿಹರಿಸಿಕೊಂಡಾಗ ಶರಣನು 'ಬಚ್ಚಬರಿಯ ಬೆಳಗಿನೊಳಗೆ ಓಲಾಡುವನು'. ಷಣ್ಮುಖೀಮುದ್ರೆಯು ಅಷ್ಟಧಾಪ್ರಕೃತಿಯ ಅಂಧಃಕಾರವನ್ನು ನಿವಾರಿಸಿ ಬಚ್ಚಬರಿಯ ಬೆಳಗನ್ನು ಕಾಣಿಸುವ ಕುಂಡಲಿನಿಯನ್ನು ಬಹಳ ಬೇಗನೆ ಜಾಗ್ರತಗೊಳಿಸುವದು. ಲಿಂಗಮ್ಮನು ಸಾಧಿಸಿದ ಈ ಷಣ್ಮುಖೀ-ಮುದ್ರೆಯ ನಿಲವನ್ನು ಈ ಕೆಳಗಿನ ವಚನವು ಕೊರದಿಟ್ಟಂತೆ ವರ್ಣಿಸುತ್ತಿರುವುದು :

ತನುವೆಂಬ ಹುತ್ತದಲ್ಲಿ ಮನವೆಂಬ ಸರ್ಪ
ಹೆಡೆಯನುಡುಗಿಕೊಂಡಿರಲು ಜ್ಞಾನಶಕ್ತಿಯು ಬಂದು ಎಬ್ಬಿಸಲು

ಉರಿ ಭುಗಿಲೆನುತ್ತ ಹೆಡೆಯನೆತ್ತಿ ಊರ್ಧ್ವಕ್ಕೇರಲು
ಅಷ್ಟಮದವೆಲ್ಲ ಹಿಟ್ಟುಗುಟ್ಟಿದುವು; ಕರಣಂಗಳೆಲ್ಲ ಉರಿದುಹೋದವು.
ಇದ್ದ ಶಕ್ತಿಯನೆ ಕಂಡು ಮನ ನಿಶ್ಚಯವಾದುದನೆ ಕಂಡು
ಪಶ್ಚಿಮ ಕದವ ತೆಗೆದು ಬಚ್ಚಬರಿಯ ಬೆಳಗಿನೊಳಗೋಲಾಡಿ
ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ.

ಮಾನವ ದೇಹದಲ್ಲಿ, ಈ ಪಿಂಡದಲ್ಲಿಯೇ ಪರಮಾತ್ಮನು ಅವಿತುಕೊಂಡಿದ್ದಾನೆ. ಸತತವಾದ ಸಾಧನೆಯಿಂದ ಆತನನ್ನು ಒಡಮೂಡಿಸಿಕೊಳ್ಳಬೇಕು. ಅಡಗಿದ ವಸ್ತುವು ಒಡಮೂಡಿದೊಡನೆಯೆ ಅಪಾರವಾದ ಆನಂದವು ಅಕಲ್ಪಿತವಾಗುವದೆಂಬ ಮಾತು ಸತ್ಯವಾಗುವದು. ಲಿಂಗಮ್ಮನು ಬೆಡಗಿನ ಮಾತುಗಳಲ್ಲಿ ಹಾಡಿದ ಕೆಳಗಿನ ವಚನದಲ್ಲಿ ಈ ರಹಸ್ಯವು ಹುದುಗಿಕೊಂಡಿರುತ್ತದೆ :

ಕಾಣಬಾರದ ಕದಳಿಯಲೊಂದು ಮಾಣಿಕ ಹುಟ್ಟಿತು.
ಇದಾರಿಗೂ ಕಾಣಬಾರದು !
ಮಾರೆನೆಂದರೆ ಮಾನವರಿಗೆ ಸಾಧ್ಯವಾಗದು; ಸಾವಿರಕೆ ಬೆಲೆಯಾಯಿತು.
ಆ ಬೆಲೆಯಾದ ಮಾಣಿಕ ನಮ್ಮ ಶರಣರಿಗೆ ಸಾಧ್ಯವಾಯಿತು !
ಆ ಮಾಣಿಕವ ಹೇಗೆ ಬೆಲೆ ಮಾಡಿ ಮಾರಿದರೆಂದರೆ—
ಕಾಣಬಾರದ ಕದಳಿಯ ಹೊಕ್ಕು, ನೂನ ಕದಳಿಯ ದಾಂಟಿ,
ಜಲವ ಶೋಧಿಸಿ, ಮನವ ನಿಲಿಸಿ,
ತನುವಿನೊಳಗಣ ಅನುವ ನೋಡುವನ್ನಕ್ಕ ಮಾಣಿಕ ಸಿಕ್ಕದು !
ಆ ಮಾಣಿಕದ ಬೆಳಗ ನೋಡಿಹೆನೆಂದು ಮನುಜರನೆ ಮರೆದು,
ತಾನು ತಾನಾಗಿ ಜ್ಯೋತಿಯ ಬೆಳಗಿನೊಳಗೋಲಾಡಿ
ಸುಖಿಯಾದೆನಯ್ಯಾ, ಅಪ್ಪಣ್ಣಪ್ರಿಯ ಚೆನ್ನಬಸವಣ್ಣ.

ಈ ವಚನದಲ್ಲಿ ಆತ್ಮನನ್ನು ಒಂದು ಮಾಣಿಕಕ್ಕೆ ಹೋಲಿಸಿ ವರ್ಣಿಸಿದೆ. ಸಹಸ್ರಾರ ಚಕ್ರದಲ್ಲಿ ಅದನ್ನು ಗುರುತಿಸಿ ಸಮರಸವ ಪಡೆಯಬೇಕು. ಅದಕ್ಕಾಗಿ ಅಂತರ್ಮುಖಿಯಾಗಿ ಮನವನ್ನು ಉನ್ಮನಗೊಳಿಸಿ ಶತಕೋಟಿ ಸೂರ್ಯರ ತೇಜದಂದದಿ ಪ್ರಕಾಶಿಸುವ ಆ ಪ್ರಭುವನ್ನು ಜ್ಞಾನದೃಷ್ಟಿಯಿಂದ ಕಂಡು ಪರಮಾನಂದ ಪಯೋಧಿಯೊಳಗೋಲಾಡಬೇಕು ಎಂಬ ಸ್ವಾನುಭಾವ ನಿರೂಪಣೆ ಇಲ್ಲಿ ವ್ಯಕ್ತವಾಗಿದೆ.

ವ್ಯೋಮಕಾಯಸಿದ್ಧಿಯನ್ನು ಪಡೆದಿದ್ದ ಪ್ರಭುದೇವರು ಸಹ ಯೋಗಪರ-ವಾಗಿಯೇ 'ಕದಳಿ' ಪದವನ್ನು ಕಂಡಿದ್ದಾರೆ:

ಕದಳಿಯ ಬನವ ಹೊಕ್ಕು ಹೊಲಬು ತಿಳಿಯದನ್ನಕ್ಕ
ಬಯಲ ಗಾಳಿಯ ಹಿಡಿದು ಗಟ್ಟಿ ಮಾಡದನ್ನಕ್ಕ
ಬರಿದೆ ಬಹುದೇ ಶಿವಜ್ಞಾನ?
ಷಡುವರ್ಣವಳಿಯದನ್ನಕ್ಕ ಬರಿದೆ ಬಹುದೆ?
ಅಷ್ಟಮದವಳಿಯನ್ನಕ್ಕ ಮದ ಮತ್ಸರವ ಬಿಡಲಿಲ್ಲ,
ಹೊದಕುಳಿಗೊಳ್ಳಲಿಲ್ಲ;
ಗುಹೇಶ್ವರ ಲಿಂಗವು ಕಲ್ಪಿತದೊಳಗಲ್ಲ!

ದೇಹವನ್ನು ಪ್ರವೇಶಿಸಿ, ಪಿಂಡವನ್ನು ಪೃಥಕ್ಕರಿಸಿ, ಬಯಲ ಗಾಳಿಯ ಗಟ್ಟಿ ಮಾಡುವ ಕಲೆಯನ್ನು ಎಂದರೆ ವಾಯು ನಿರೋಧಗೊಳಿಸುವ ಸಕೀಲವನ್ನು ಕಂಡು ಸಾಧಿಸಿದ ಹೊರತು ಸ್ವರೂಪ ಸಾಕ್ಷಾತ್ಕಾರವಾಗಲರಿಯದು. ವಾಯು ನಿರೋಧಕ್ಕೆ ಪ್ರಾಣಾಯಾಮವೇ ಸಾಧನ. ಪ್ರಾಣಾಯಾಮವು ಮೂರು ಪ್ರಕಾರದ್ದಿರುತ್ತದೆ. ಪ್ರಾಕೃತಪ್ರಾಣಾಯಾಮವು 'ಹಂಸ' ಮಂತ್ರೋಚ್ಚರಣೆಯೊಡನೆ ಸತತವಾಗಿ ನಡೆದಿರುತ್ತದೆ. ಆದರೆ ವೈಕೃತ ಪ್ರಾಣಾಯಾಮದಲ್ಲಿ 'ಹಂಸ' ಮಂತ್ರವನ್ನು ವಿಕೃತಗೊಳಿಸಿ 'ಸೋಹಂ' ಎಂಬ ಉಚ್ಚರಣೆಯಿಂದ ಪ್ರಾಣಾ-ಯಾಮವನ್ನು ಸಾಗಿಸುವರು. ಮೂರನೆಯ ಪ್ರಕಾರದ ಪ್ರಾಣಾಯಾಮದಲ್ಲಿ 'ಕುಂಭಕ'ವನ್ನಾಚರಿಸುವರು. ಈ ಕುಂಭಕದಲ್ಲಿಯೇ ವಾಯು ನಿರೋಧ-ವಾಗುವದು. ಈ ಕ್ರಮದಿಂದ ಸ್ವರೂಪ ಸಾಕ್ಷಾತ್ಕಾರ ಹೊಂದಿದ ಶರಣನ ಅಥವಾ ಸಿದ್ಧನ ಸ್ಥಿತಿಯನ್ನು ಪ್ರಭುದೇವರು ಬಹಳ ಮಾರ್ಮಿಕವಾಗಿ ವರ್ಣಿಸಿದ್ದಾರೆ. ಆ ಸ್ಥಿತಪ್ರಜ್ಞನ ಸ್ಥಿತಿಗೆ ಅವರು 'ಕದಳಿ' ಎಂದು ಕರೆದಿದ್ದಾರೆ. ಅದು ಸಹಜ ನಿರಾಲಂಬ ಸ್ಥಿತಿಯಾದುದರಿಂದ ಅಲ್ಲಿ ನಾನೆಂಬುದೂ ಇಲ್ಲ, ನೀನೆಂಬುದೂ ಇಲ್ಲ. 'ನೀನು ನಾನೆಂಬ ಉಭಯ ಸಂಗವಳಿದು' ಅಲ್ಲಿ ತಾನೆ ತಾನಾಗಿ ತೋರುವದು. ಕದಳಿಯ ಯಥಾರ್ಥವಾದ ವರ್ಣನೆಯು ಕೆಳಗಿನ ಪದ್ಯದಲ್ಲಿ ಕಂಡುಬರುವಷ್ಟು ಮನೋಹರವಾಗಿ ಇನ್ನೆಲ್ಲಿಯು ಕಾಣಲಿಕ್ಕಿಲ್ಲ:

ಹಾಳ ಮೇಲಣ ಮಣಿಯ ಕಾಣಲಾರಳವಲ್ಲ
ಪೌಳಿ ಪೌಳಿಯ ಕೋಣೆ ಕೋಣೆಯೊಳಗೆ
ಮೇಲುಗಿರಿ ಶಿಖರ ಪಶ್ಚಿಮದ್ವಾರವನು ಪೊಗಲು
ಕಾಣಬಾರದ ಕದಳಿಯುಂಟು ನೋಡಾ !

ಪ್ರಪಂಚ ವಿಷಯಗಳೆಂಬ ಪೈರುಯಿಲ್ಲದ ಸಾಧಕನ ನಿರ್ಮಲವಾದ ಹೃದಯವೇ ಹಾಳು. ಈ ನಿರ್ಮಲ ಹೃದಯದಲ್ಲಿ ಬೆಳಗುವ ಚಿತ್‌ಪ್ರಭೆಯೆ ಮಣಿ (ಮಾಣಿಕ). ಇಂತಹ ಮಣಿ ಅಥವಾ ಮಾಣಿಕ್ಯವು ಬರಿಯ ಕಣ್ಣಿಗೆ ಕಾಣದು. ಆದರೂ ಅದನ್ನು ಕಾಣುವ ವಿಧಾನ ಒಂದುಂಟು. ಜಾಗ್ರ ಸ್ವಪ್ನ ಸುಷುಪ್ತಿ ಎಂಬ ಅವಸ್ಥಾತ್ರಯಂಗಳಲ್ಲಿ (ಪೌಳಿ ಪೌಳಿಯೊಳಗೆ) ಸ್ಥೂಲ ಸೂಕ್ಷ್ಮ ಕಾರಣ ವೆಂಬ ಮೂರು ದೇಹಗಳಲ್ಲಿ (ಕೋಣೆ ಕೋಣೆಯೊಳಗೆ) ಅರುಹು ಕರಿಗೊಂಡು ಬ್ರಹ್ಮರಂಧ್ರ (ಮೇಲುಗಿರಿ), ಶಿಖಾಚಕ್ರ (ಶಿಖರ) ಮತ್ತು ಪಶ್ಚಿಮಚಕ್ರ (ದ್ವಾರ) ಗಳ ಬಾಗಿಲುಗಳನ್ನು ಪ್ರವೇಶಿಸಿದರೆ ಆಗ ಅಗೋಚರವಾದ ಕದಳಿಯು ಎಂದರೆ ಚರ್ಮಚಕ್ಷುಗಳಿಗೆ ಕಾಣದ ಕದಳಿಯು ಅಂತಶ್ಚಕ್ಷುವಿಗೆ ಗೋಚರಿಸು ವದು. ಹಾಗಾದರೆ ಇಲ್ಲಿ 'ಕದಳಿ' ಎಂದರೆ ಯಾವ ಸ್ಥಿತಿಯು ? ಅದು ಅಲು-ಗಾಡದ ಸ್ಥಿತಿ. ಯಾವುದು ಅಚಲವಾಗಿದೆಯೊ, ಯಾವುದು ಕ್ಷರವಾಗಿಲ್ಲವೊ ಇಂತಹ ಅಕ್ಷರವೆನಿಸಿದ ಆತ್ಮತತ್ವವನ್ನು ಅರಿಯುವ ಸ್ಥಿತಿಯು ಮೂಡಿಕೊಳ್ಳ-ಬೇಕು. ಇಂತಹ ಆತ್ಮತತ್ವ ಸಾಕ್ಷಾತ್ಕಾರವನ್ನು ಅಳವಡಿಸಿಕೊಳ್ಳುವುದೇ ಬಾಳಬಟ್ಟೆಯ ಪರಮಾಗಮವು. ಇದುವೆ 'ಕದಳಿ'ಯಲ್ಲಿ ಅಡಗಿದ ದಿವ್ಯಾನು ಭವವು.

# ಎಲ್ಲಿಂದ ಅದೆಲ್ಲಿಗೆ ?

ಯಾವುದಾದರೊಂದು ವಿಷಯವನ್ನು ಶಾಸ್ತ್ರೀಯ ದೃಷ್ಟಿಯಿಂದ ವಿವೇಚಿಸುವದು ಈಗ ವಾಡಿಕೆಯಾಗಿ ಬಂದು ಬಿಟ್ಟಿದೆ. ಶಾಸ್ತ್ರೀಯ ದೃಷ್ಟಿಯೆಂದರೆ ತರ್ಕಪ್ರಧಾನದೃಷ್ಟಿ. ತರ್ಕಪ್ರಧಾನವಾದ ದೃಷ್ಟಿಯಿಂದ ಮಂಡಿಸಿದ ವಿಷಯವೇ ಶಾಸ್ತ್ರವಾಗುವದು. ಯಾವುದು ಕಾರ್ಯಕಾರಣ ತತ್ವವನ್ನು ಅವಲಂಬಿಸಿದೆಯೋ ಮತ್ತು ಯಾವುದು ಸಪ್ರಮಾಣ ಸಿದ್ಧಾಂತಗಳ ಆಧಾರದ ಮೇಲೆ ನಿಂತಿದೆಯೋ ಅದು ಶಾಸ್ತ್ರವೆನಿಸುವದು. ಒಂದು ಶಾಸ್ತ್ರವು ಪ್ರಮಾಣಬದ್ಧವಾಗಬೇಕಾದರೆ ಅದು ಮೂರು ಸಂಗತಿಗಳನ್ನು ಒಳಗೊಂಡಿರಬೇಕು. ಸಿದ್ಧಾಂತ ಸಾಧನೆ ಮತ್ತು ಸಂಪಾದನೆ ಎಂಬವುಗಳೇ ಆ ಮೂರು ಸಂಗತಿಗಳು. ಯಾವುದೇ ಶಾಸ್ತ್ರವಿರಲಿ, ಅದಕ್ಕೆ ಕೆಲವು ಮೂಲತತ್ವಗಳಿರುತ್ತವೆ. ಈ ಮೂಲ ತತ್ವಗಳು ಆ ಶಾಸ್ತ್ರದ ಸಿದ್ಧಾಂತದಲ್ಲಿ ಸಮಾವೇಶವಾಗುತ್ತವೆ. ಪ್ರತಿಯೊಂದು ಶಾಸ್ತ್ರಕ್ಕು ಮೂಲತತ್ವಗಳ ಈ ಸಿದ್ಧಾಂತ ನಿರೂಪಣೆ ಇದ್ದೇ ತೀರುವದು. ಆ ತತ್ವಗಳನ್ನು ಆಚರಣೆಯಲ್ಲಿ ತರುವ ವಿಧಾನವೂ ಒಂದಿರುತ್ತದೆ. ಅದನ್ನು ಆಚರಣೆಯಲ್ಲಿ ತಂದು ಪ್ರಯೋಗಕ್ಕೆ ಅಣಿಗೊಳಿಸಿದಾಗ ಆ ತತ್ವಗಳ ಮಹತಿಯು ವ್ಯಕ್ತವಾಗುತ್ತದೆ. ಹೀಗೆ ಆಚರಣೆಯಲ್ಲಿ ತಂದು ಪ್ರಯೋಗಕ್ಕೆ ಅಣಿಗೊಳಿಸುವದು ಅದರ ಸಾಧನವೆನಿಸುವದು. ಪ್ರಯೋಗ ಮುಖದಿಂದ ಲಭಿಸಿದ ಅನುಭವವು ಅಂಗಕ್ಕೆ ಅಳವಡಬೇಕು. ಅಂಗಕ್ಕೆ ಅಳವಟ್ಟ ಅನುಭವವೇ ಸಂಪಾದನೆ. ಸಿದ್ಧಾಂತವು ಆಯತ ಸ್ವರೂಪವುಳ್ಳದು; ನಮಗಾಗಿ ಅದು ನೀಡಲ್ಪಟ್ಟಿರುತ್ತದೆ; ಈ ದೆಸೆಯಿಂದ ಅದರಲ್ಲಿ ನಮ್ಮ ಅಭಿಲಾಷೆಯಿರುತ್ತದೆ; ಸಾಧನವು ಸ್ವಾಯತ ರೂಪವಾಗಿರುತ್ತದೆ; ಎಂದರೆ ಆಚರಣೆಯ ಕಾಲಕ್ಕೆ ಆ ತತ್ವಗಳು ನಮ್ಮ ಪಾಲಿನವಾಗಿ ಅವು ನಮ್ಮಲ್ಲಿಯೇ ಆತ್ಮೀಯವಾಗಿ ಇರುತ್ತವೆ. ಸಂಪಾದನೆಯು ಸನ್ನಿಹಿತ ಸ್ವರೂಪದ್ದಾಗಿರುತ್ತದೆ; ಅಲ್ಲಿ ತತ್ವಾಚರಣೆಯಿಂದ ಪಡೆದ ಅನುಭವವು ನಮ್ಮಲ್ಲಿ ಅಂಗವಿಸಿಬಿಡುತ್ತದೆ.

ಹಾಗಾದರೆ ಅಧ್ಯಾತ್ಮ ಶಾಸ್ತ್ರವೆಂದರೇನು ? ಜನಸಾಮಾನ್ಯರಲ್ಲಿ ಅಧ್ಯಾತ್ಮದ ವಿಷಯವಾಗಿ ಒಂದು ತಪ್ಪು ತಿಳಿವಳಿಕೆಯಿರುತ್ತದೆ. ಸಂಸಾರಿಗಳಿಗೆ ಅಧ್ಯಾತ್ಮ ಹೊಂದದು, ಸನ್ಯಾಸಿಗಳೇ ಅದನ್ನು ಆಚರಿಸಬೇಕು ಎಂಬುದು ಅವರ ವಾದ.

ಆದರೆ ಆತ್ಮನು ಎಲ್ಲರಲ್ಲಿಯೂ ಇರುವುದರಿಂದ ಹಾಗು ಪರಮಾತ್ಮಸಾಕ್ಷಾತ್ಕಾರವು ಎಲ್ಲರ ಜೀವನದ ಗುರಿಯಾಗಿರುವದರಿಂದ ಆತ್ಮ-ಪರಮಾತ್ಮರ ಗೂಢವನ್ನು ಅರಿತುಕೊಳ್ಳುವದು ಪ್ರತಿಯೊಬ್ಬರ ಜೀವನದ ಗುರಿಯಾಗಿರುತ್ತದೆ. ಈ ಗೂಢ-ವನ್ನು ಕಂಡುಕೊಳ್ಳುವ ವಿಧಾನವೇ ಅಧ್ಯಾತ್ಮ. ಹೀಗಿರುವಾಗ ಅಧ್ಯಾತ್ಮ ಯಾರಿಗೆ ತಾನೇ ಬೇಡ ? ಅಧ್ಯಾತ್ಮವನ್ನು ಪಡೆಯುವದು, ಸಂಸಾರಿಕರಿರಲಿ ಆ ಭಾವವನ್ನು ಮೀರಿ ಸನ್ಯಾಸ ವೃತ್ತಿಯಲ್ಲಿರಲಿ, ಪ್ರತಿಯೊಬ್ಬನ ಅಧಿಕಾರವಾಗಿ ರುತ್ತದೆ. ಈ ಅಧ್ಯಾತ್ಮಶಾಸ್ತ್ರದ ಸಿದ್ಧಾಂತದ ಸ್ವರೂಪವೆಂತಹದು ? ಈಶಾವಾ-ಸ್ಯೋಪನಿಷತ್ತಿನ ಶಾಂತಿಮಂತ್ರದಲ್ಲಿ ಅಧ್ಯಾತ್ಮಶಾಸ್ತ್ರದ ಸಿದ್ಧಾಂತದ ಸೂಚನೆಯು ವ್ಯಕ್ತವಾಗಿರುತ್ತದೆ. ಅದು ಹೇಳುವದು :

‘ ಓಂ ಪೂರ್ಣಮದಃ ಪೂರ್ಣಮಿದಂ ।
ಪೂರ್ಣಾತ್ ಪೂರ್ಣಮುದಚ್ಯತೆ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೆ ॥

‘ ಅದು ಪೂರ್ಣವದೆ ಇದು ಪೂರ್ಣವದೆ. ಪೂರ್ಣದಿಂದ ಪೂರ್ಣವು ಹುಟ್ಟು-ತ್ತದೆ. ಪೂರ್ಣದಿಂದ ಪೂರ್ಣವು ಹೊರಹೊಮ್ಮಿದರೂ ಪೂರ್ಣವು ಪೂರ್ಣ-ವಾಗಿಯೇ ಉಳಿಯುತ್ತದೆ. ’

‘ಇದು’ ಎಂದರೆ ಈ ದೃಶ್ಯ ಸೃಷ್ಟಿಯು; ವ್ಯಕ್ತವು. ಬರಿಯ ಕಣ್ಣಿಗೆ ಕಾಣುವ ಸ್ಥೂಲ ಸೃಷ್ಟಿಯಷ್ಟೇ ಅಲ್ಲ, ಉಳಿದ ಇಂದ್ರಿಯಗಳಿಗೆ ಗೋಚರವಾಗುವ ಸೃಷ್ಟಿಯೂ ಹಾಗೆಯೇ ವೈಜ್ಞಾನಿಕ ಸೂಕ್ಷ್ಮಾತ್ ಸೂಕ್ಷ್ಮತರವಾದ ಉಪಕರಣ ಗಳಿಗೆ ಗೋಚರವಾಗುವ ಸೂಕ್ಷ್ಮತಮ ಸೃಷ್ಟಿಯೂ ದೃಶ್ಯಸೃಷ್ಟಿಯು. ಇದಕ್ಕೆ ಕ್ಷರವೆಂದು ಇನ್ನೊಂದು ಹೆಸರು. ಇದು ಪೂರ್ಣವಿರುತ್ತದೆ. ಇದು ಒಂದು ಕಾರ್ಯ. ಈ ಕಾರ್ಯಕ್ಕೆ ಕಾರಣವೊಂದು ಬೇಕಷ್ಟೆ ! ಅದು ಯಾವುದು ? ಅದು ಅವ್ಯಕ್ತವು, ಪರಾತ್ಪರ ಸತ್ಯವು. ಅಕ್ಷರವೆನಿಸಿದ ಅದೂ ಪೂರ್ಣವಾಗಿರುವುದ ರಿಂದ ಅಕ್ಷರದಿಂದ ಹುಟ್ಟಿದ, ಹುಟ್ಟಿ ಹೊರಹೊಮ್ಮಿದ ಕ್ಷರವಾದರೂ ಪೂರ್ಣ ವಾಗಿಯೇ ಇರಬೇಕು. ಯಾಕಂದರೆ ಪೂರ್ಣದೊಳಗಿಂದ ಪೂರ್ಣವನ್ನು ಕಳೆದರೂ ಪೂರ್ಣವೇ ಉಳಿಯುವದು. ಎಂದರೆ ಆ ಪರಾತ್ಪರ ಸತ್ಯದಲ್ಲಿ ಇಂತಹ ದೃಶ್ಯ ಸೃಷ್ಟಿಗಳು ಅದೆಷ್ಟೋ ತೋರಿದರೂ, ತೋರಿ ಅಡಗಿದರೂ ಅದಕ್ಕೆ ಚ್ಯುತಿಯು ಎಷ್ಟೂ ಉಂಟಾಗುವದಿಲ್ಲ. ಆಕಾಶದಲ್ಲಿ ಶಬ್ದವು ಹುಟ್ಟಿದರೆ ಅದರ ವಿಸ್ತಾರವು

ಕಡಿಮೆಯಾಗದಂತೆ, ಬಯಲಲ್ಲಿ ಮಳೆಬಿಲ್ಲು ಮೂಡಿದರೆ ಆ ಬಯಲು ಸಂಕುಚಿತ ವಾಗದಂತೆ, ಆ ಅಕ್ಷರದಲ್ಲಿ ಅಥವಾ ಇರುವಿನಲ್ಲಿ ಅನೇಕಾನೇಕ ವಿಶ್ವಗಳು ಅಥವಾ ಕುರುಹುಗಳು ತೋರಿದರೂ ಆ ಇರುವಿಗೆ ಬಾಧೆ ಒದಗಲಾರದು. 'ಇದು' ಎಂಬ ಸಂಜ್ಞೆವಡೆದ ಈ ವಿಶ್ವವು ಇಡಿಯಾಗಿಯೂ ಬಿಡಿಯಾಗಿಯೂ ಒಂದು ಕುರುಹು (Symbol) ಅಷ್ಟೆ! ಕುರುಹು ಶಬ್ದವು 'ಕುರಿ– ಲಕ್ಷೀ-ಕರಿಸು' ಎಂಬ ಧಾತುವಿನಿಂದ ಉತ್ಪನ್ನವಾಗಿದೆ. ಈ ಕುರುಹು ಇರುವನ್ನು ಲಕ್ಷೀಕರಿಸುವದು. ಎಂದರೆ ಕುರುಹು ಇರುವಿನ ಕಂದೆರವೆ ಅಥವಾ ಕಣಸು (Vision). ವಿಶ್ವವು ಇಡಿಯಾಗಿಯೂ ಬಿಡಿಯಾಗಿಯೂ ಕುರುಹು ಆಗಿರು-ವುದರಿಂದ ವಿಶ್ವದ ವ್ಯವಹಾರಗಳಲ್ಲಿ ಹೆಜ್ಜೆಹೆಜ್ಜೆಗೂ ನಾವು ಕುರುಹುಗಳನ್ನೇ ಕಾಣುವೆವು. ಸ್ನಾನ ಮಾಡುವದು ಮಡಿಯ ಕುರುಹು, ಕೈ ಮುಗಿಯುವುದು ಎರಡು ಆತ್ಮರು ಒಂದೆಂಬ ಕುರುಹು, ಐರದಾಳಿಯು ಸೌಭಾಗ್ಯದ ಕುರುಹು, ನಾಡಗುಡಿಯು ಸ್ವಾತಂತ್ರ್ಯದ ಕುರುಹು, ದೇಹವು ಜೀವನ ಕುರುಹು. ಜೀವವು ಚೈತನ್ಯದ ಕುರುಹು, (ಚೈತನ್ಯವು ಎಣಿಕೆಗೆ ನಿಲುಕದಿದ್ದರೂ ಅನಿಸಿಕೆಗೆ ಒಳ ಗಾಗುವದು); ಹಾಗೆಯೇ ಜಗವು ದೇವನ ಕುರುಹು. ಜೀವನ ಅಸ್ತಿತ್ವಕ್ಕೆ ದೇಹವೇ ಸಾಕ್ಷಿ; ದೇವನ ಅಸ್ತಿತ್ವಕ್ಕೆ ಜಗವೇ ಸಾಕ್ಷಿ. ಜೀವನು ದೇವನ ಅರುಹು; ದೇವನು ಜೀವನ ಇರುಹು. ಅರುಹು ಇರುಹುಗಳೆರಡು ಕರಗತ ವಾಗುವವು ಕುರುಹಿನಲ್ಲಿ. ಅಲ್ಲಮಪ್ರಭುದೇವರು ಈ ಮಾತನ್ನು ತಮ್ಮ ಒಂದು ವಚನದಲ್ಲಿ ಸ್ಪಷ್ಟಗೊಳಿಸಿದ್ದಾರೆ:

ಪ್ರಾಣಲಿಂಗದ ಪ್ರಸನ್ನ ಮುಖವ ನೋಡಿ ಪರಿಣಾಮಿಸಲೋಸುಗ
    ಕರ ತೇಜವೆಂಬ ದರ್ಪಣವ ಹಿಡಿದಿರ್ಪನು ನೋಡಾ !
ಗುಹೇಶ್ವರ ಲಿಂಗದಲ್ಲಿ ನಿಜವನೈದಿಹೆನೆಂದರೆ
    ಕುರುಹುವಿಡಿದು ಕುರುಹುಗೆಡಬೇಕು ಸಿದ್ಧರಾಮಯ್ಯಾ !

'ಅದು', ಆ ಅಕ್ಷರವು, ಆ ಆತ್ಮತತ್ವವು ಪೂರ್ಣವಾಗಿದೆ; ಎಂದರೆ ಅದು ಅನಂತ ಜ್ಞಾನ; ಅನಂತ ಬಲ, ಅನಂತ ಕ್ರಿಯೆಗಳಿಂದ ಕೂಡಿದೆ; 'ಸ್ವಭಾವಕೀ ಜ್ಞಾನ ಬಲ ಕ್ರಿಯಾ ಚ'; ಈ ಕ್ರಿಯಾ ಬಲ ಜ್ಞಾನಗಳು ಅದಕ್ಕೆ ಸ್ವಾಭಾವಿಕ ವಾಗಿವೆ, ಸಹಜವಾಗಿವೆ. ಇದನ್ನೇ ಪರ್ಯಾಯವಾಗಿ ಹೇಳುವುದಾದರೆ, ಆತ್ಮನು ಸಚ್ಚಿದಾನಂದ ಸ್ವರೂಪನಾಗಿರುವನು. ಕ್ರಿಯೆಯು ಆನಂದಸ್ವರೂಪ

ವಾಗಿದೆ, ಅದೇಕೆ ಆತ್ಮನ ಕ್ರಿಯೆಯೇ ಆನಂದವಾಗಿ ತೋರುವದು. ಬಲವು ಚಿತ್ ಸ್ವರೂಪವಾಗಿರುವುದು; ಆತ್ಮನ ಬಲವೇ ಚಿತ್ ಶಕ್ತಿಯಾಗಿ ಕಾರ್ಯಗೆಯ್ಯುತ್ತಿದೆ. ಸತ್ ಜ್ಞಾನ ಸ್ವರೂಪವಾಗಿರುವದು; ಆತ್ಮನ ಸತ್ತೆಯು ಸರ್ವದಾ ಜ್ಞಾನರೂಪದಿಂದ ಪ್ರಜ್ವಲಿಸುವದು. ಸಚ್ಚಿದಾನಂದ ಸ್ವರೂಪನಾದ ಆತ್ಮನಿಂದ ಪ್ರಕಟವಾದ ವಿಶ್ವವಾದರೂ ಜ್ಞಾನ ಬಲ ಕ್ರಿಯೆಗಳಿಂದ ಕೂಡಿರಬೇಕಲ್ಲವೆ ? ಎಂದರೆ ವಿಶ್ವದ ವ್ಯವಹಾರಗಳಲ್ಲಿ ಕ್ರಮಬದ್ಧವಾದ ಕಟ್ಟಳೆಗಳನ್ನು ಕಾಣಬೇಕಲ್ಲವೆ ? ಅಹುದು. 'ಈ ಸೃಷ್ಟಿಯ ಆಗುಹೋಗುಗಳು ಪರಿವರ್ತನಶೀಲವಾದರೂ ಆ ಪರಿವರ್ತನೆಯು ಒಂದು ನಿಯಮದಿಂದ ಬದ್ಧವಾಗಿರುವದು. ಅದು ಒಂದು ಉದ್ದೇಶಪೂರ್ವಕವಾಗಿರುವದು. ಈ ಸೃಷ್ಟಿಯು ಒಂದು ಸ್ಪಷ್ಟವಾದ ಸೂತ್ರಕ್ಕೆ ಒಳಪಟ್ಟಿರುವದು. ಸೃಷ್ಟಿಯ ಸೂತ್ರಗಳನ್ನು ಅರಿಯುವುದಾದರೆ ಸೂತ್ರಾತ್ಮನನ್ನು ಅರಿತ ಹಾಗೆಯೇ. ಇಂದು ಪಡುವಣದವರು ಸೃಷ್ಟಿಯ ನಿಯಮಗಳನ್ನರಿತು ಪಂಚಭೂತಗಳ ಮೇಲೆ ಪ್ರಭುತ್ವವನ್ನು ಪಡೆಯಲೆತ್ನಿಸುತ್ತಿರುವದೇನೊ ನಿಜ. ಇದರಿಂದ ಶಕ್ತಿಯು ಕೈವಶವಾಗುವದಾದರೂ ಶಾಂತಿಯು ಕೊಸರಿಕೊಂಡು ಹೋಗಹತ್ತಿದೆ, ಹೋಗಿದೆ. ಬರಿಯ ವ್ಯಕ್ತಸೃಷ್ಟಿಯ ಜ್ಞಾನ ಪಡೆದು ಅದರ ಮೇಲೆ ಪ್ರಭುತ್ವ ನಡಿಸಿದರೆ ತೀರಲಿಲ್ಲ; ಯಾಕೆಂದರೆ ಆತ್ಮನ ಅನಂತವಾದ ಅಪಾರವಾದ ಇರುಹಿನಲ್ಲಿ ಈ ದೃಶ್ಯವಿಶ್ವವು ಒಂದು ಅಣು ಮಾತ್ರ. ಆದ್ದರಿಂದ ಅವ್ಯಕ್ತ ಅಕ್ಷರವಾದ ಆತ್ಮನ ಜ್ಞಾನವು ದೃಶ್ಯ ಸೃಷ್ಟಿಯ ಜ್ಞಾನದಷ್ಟೇ, ಅದೇಕೆ, ಅದಕ್ಕಿಂತಲೂ ಮಹತ್ವದ್ದಾಗಿದೆ, ಮಿಗಿಲಾಗಿದೆ. ಈ ಆತ್ಮಾನಂದದಿಂದಲೇ ನಿತ್ಯಾನಂದವು ನಿಜಶಾಂತಿಯು ದೊರೆಯುವದು.' ಆದರೆ ಈ ಆತ್ಮಜ್ಞಾನವು ವ್ಯಕ್ತ ಸೃಷ್ಟಿಯ ಜ್ಞಾನದಂತೆ ಪ್ರಯೋಗಕ್ಕೆ ನಿಲುಕುವದಿಲ್ಲ; ಅದು ಪ್ರತಿಭೆಗೆ ಒಳಗಾಗುವದು. ಅದು ತರ್ಕಾತ್ಮಕವಲ್ಲ; ಸ್ಫುರಣಾತ್ಮಕವಾಗಿದೆ ಎಂಬ ಮಾತನ್ನು ಗಮನಿಸಬೇಕು.

ಈ ಸಿದ್ಧಾಂತವನ್ನು ಅಂಗಕ್ಕೆ ಅಳವಡಿಸಿಕೊಳ್ಳುವ ಸಾಧನವಾವುದು ? ಸಾಧನವು ತನ್ನಿಂದಲೇ ಆರಂಭವಾಗಬೇಕು. ತಾನು ಎಂದರೆ ಇಲ್ಲಿ ಮಾನವ ಪ್ರಕೃತಿ, ಮಾನವ ಪಿಂಡ. ಪ್ರಕೃತಿಯು ಸತ್ವ–ರಜ–ತಮೋಗುಣಗಳ ಅನ್ಯೋನ್ಯ ಭಾವ ಸಂಸರ್ಗ, ರಾಗ-ದ್ವೇಷ-ಮೋಹಗಳೆಂಬ ಮೂರು ವೃತ್ತಿಗಳ ಮೊತ್ತ. ಸುಖ ದುಃಖ ಭ್ರಾಂತಿಗಳೇ ಆ ತ್ರಿಗುಣಾತ್ಮಕ ಪ್ರಕೃತಿಯ ವಿಕೃತಿಗಳು. ಎಲ್ಲ ಜೀವರಲ್ಲಿ ಸುಖಾಪೇಕ್ಷೆಯೂ ದುಃಖನಿವೃತ್ತಿಯೂ ಎಂದರೆ ಸುಖವನ್ನು ಹೊಂದುವ

ಅಪೇಕ್ಷೆಯೂ ಪುರುಷನನ್ನು ಮೋಹಮಾಡುವ ಸ್ತ್ರೀಯ ಯತ್ನವೂ ಕಂಡುಬರುವವು. ಈ ಎರಡೂ ಕ್ರಮವಾಗಿ ಸತ್ತ್ವರಜೋಗುಣಗಳ ಪರಿಣಾಮವಾಗಿವೆ. ಹಗ್ಗದಲ್ಲಿ ಹಾವಿನ ಭ್ರಾಂತಿಯನ್ನು ಹುಟ್ಟಿಸುವದೇ ಮೋಹ, ಅದೇ ತಮೋಗುಣ. ಇದ್ದದ್ದನ್ನು ಇದ್ದಹಾಗೆ ಅರಿಯದೆ ವಿಪರೀತವಾಗಿ ತಿಳಿಯುವದೂ, ಇಲ್ಲದ ರೂಪದಲ್ಲಿ ಅರಿಯುವದೂ ಭ್ರಾಂತಿಯೇ ! ಈ ತ್ರಿಗುಣಾತ್ಮಕ ಪ್ರಕೃತಿಯು ಪ್ರೇಯವು. ಇದು ಪ್ರತ್ಯೇಕವಾಗಿದೆ (Particular). ಹೇಯವಾಗಿದೆ ಎಂದು ಒಮ್ಮೆ ಅನಿಸಿದರೂ ಇದನ್ನು ಸಂಪೂರ್ಣವಾಗಿ ತ್ಯಜಿಸಲಿಕ್ಕೆ ಬರುವಂತಿಲ್ಲ. ಆದರೂ ಇದನ್ನು ಇದ್ದಕ್ಕಿದ್ದಂತೆ ವಿನಿಯೋಗಿಸಲೂ ಬರುವಹಾಗಿಲ್ಲ. ಪ್ರಕೃತಿಯ ಈ ಅಶುದ್ಧ ಸ್ವರೂಪವು ಅದರ ಪ್ರತ್ಯೇಕವು. ಅದರ ಶುದ್ಧ ಸ್ವರೂಪವೂ ಒಂದು ಉಂಟು; ಅದುವೆ ಸಾಮಾನ್ಯವು (Universal). ಸತ್ತ್ವರಜತಮಗಳ ಸಾಮಾನ್ಯವೆಂದರೆ, ಅವುಗಳ ಶುದ್ಧ ಸ್ವರೂಪವೆನಿಸಿದ ಜ್ಯೋತಿ ಶಕ್ತಿ ಶಾಂತಿಗಳು. ಈ ತ್ರಿವಿಧದ ಮೂಲಕವಾಗಿ ಇದು ಶ್ರೇಯವು. ಈ ಶ್ರೇಯವನ್ನು ಅಥವಾ ಸಾಮಾನ್ಯವನ್ನು ಸೂರ್ಯನಿಗೆ ಹೋಲಿಸುತ್ತಾರೆ. ಸೂರ್ಯನು ಹೇಗೆ ಸಮಸ್ತ ಭೌತಿಕ ಪದಾರ್ಥಗಳ ಹುಟ್ಟು ಮತ್ತು ಬೆಳವಣಿಗೆಗೆ ಮೂಲ ಕಾರಣನಾಗಿಯೂ, ತನ್ನ ಪ್ರಕಾಶದಿಂದ ಅವನ್ನು ಬೆಳಗುವವನಾಗಿಯೂ ಇರುವನೋ ಹಾಗೆಯೇ ಶ್ರೇಯವು ಎಂದರೆ ಪರಾ ಪ್ರಕೃತಿಯು ಸ್ವಯಂಪ್ರಭೆಯುಳ್ಳದ್ದಾಗಿ ವಿಶ್ವ ಸಾಮಾನ್ಯಗಳೆಲ್ಲವಕ್ಕೂ ಮೂಲವಾಗಿದೆ.

ಪ್ರತ್ಯೇಕಗಳನ್ನು ನಾವು ಕಾಣುತ್ತೇವೆ, ಸುಖ—ದುಃಖ—ಭ್ರಾಂತಿಯೆಂಬ ಮೂರು ಬಗೆಯ ಅನುಭವಗಳನ್ನು ಹೊಂದುತ್ತೇವೆ. ಆದರೆ ಸಾಮಾನ್ಯಗಳನ್ನು ಇಲ್ಲವೆ ಗುಣತ್ರಯಗಳ ಶುದ್ಧ ಸ್ವರೂಪಗಳಾದ ಜ್ಯೋತಿ ಶಕ್ತಿ ಶಾಂತಿಗಳನ್ನು ನೋಡಿರುವವರು ಯಾರು ? ಅವುಗಳನ್ನು ಅನುಭವಿಸುವವರು ಯಾರು ? ಸತ್ಯ ಶಾಂತಿ ಸೌಂದರ್ಯಾದಿಗಳೂ ಕೇವಲ ಭಾವನಾಮಗಳಲ್ಲದೆ (Abstractions) ಮತ್ತೇನು ? — ಎಂದು ಪ್ರಶ್ನಿಸಬಹುದು. ಹಾಗಲ್ಲ, ಸಾಮಾನ್ಯಗಳು ಅಥವಾ ಶುದ್ಧ ಸ್ವರೂಪಗಳು ಕೇವಲ ಭಾವವಾಚಿಕವಾಗಿರದೆ ಅವಕ್ಕೆ ಭಾವಸತ್ತೆಗಿಂತಲೂ ಪಾರಮಾರ್ಥಿಕ ಸತ್ತೆಯು ಒಂದುಂಟು— ಎಂಬುದನ್ನು ಮರೆಯಲಾಗದು. ನ್ಯೂಟನ್ನನು ಗಿಡದಿಂದ ಹಣ್ಣು ಬಿದ್ದದ್ದನ್ನು ನೋಡಿದನು. ಗಿಡದಿಂದ ಹಣ್ಣು ಬೀಳುವದೇನೋ ಒಂದು ಸಂಗತಿ, ಕೇವಲ ಒಂದು ಸಣ್ಣ ಸಂಗತಿ; ಇಂತಹ ಹಲವಾರು ಸಂಗತಿಗಳು ಅಥವಾ ಪ್ರತ್ಯೇಕಗಳು ದಿನಾಲು

ಆಕುಂಚನ, ಗಮನಾಗಮನ ಇತ್ಯಾದಿಗಳನ್ನು ಆ ದೇಹದ ಯಾಂತ್ರಿಕ ಕ್ರಿಯೆಗಳೆಂದು ಹೇಳಬಹುದು. ದೇಹಕ್ಕೆ ಸಂಬಂಧಪಟ್ಟ ಈ ಯಾಂತ್ರಿಕ ಕ್ರಿಯೆಗಳನ್ನು ಅಂಕಿತದಲ್ಲಿಟ್ಟುಕೊಳ್ಳುವದೂ ಒಂದು ಸಾಧನ. ಅದಕ್ಕೆ ಹಠಯೋಗ ಸಾಧನವೆಂದು ಯೋಗಶಾಸ್ತ್ರದಲ್ಲಿ ಹೇಳಲಾಗಿದೆ.

ಮಾನವನು ಸಾಮಾಜಿಕ ಪ್ರಾಣಿ; ಅದಕ್ಕೋಸುಗ ಅವನು ಸಮಾಜದಲ್ಲಿ ಇರಬೇಕಾಗುವದು. ಆದ್ದರಿಂದ ಅವನ ಕಾರ್ಯಗಳೆಲ್ಲ ಉದ್ದೇಶಪೂರ್ವಕವಾಗಿ ಇರುವವವು. ಉದ್ದೇಶಪೂರ್ವಕವಾದ ಕರ್ಮವು ಕರ್ತಾರನ ಬುದ್ಧಿಯನ್ನು ಅವಲಂಬಿಸಿರುತ್ತದೆ. ಆದ್ದರಿಂದ ಕರ್ತನು ಸಮಬುದ್ಧಿಯನ್ನಿಟ್ಟುಕೊಂಡು ಕರ್ಮಗಳನ್ನು ಮಾಡಲಿಕ್ಕೆ ಕಲಿಯುವದೇ ಕರ್ಮಯೋಗವು. ಈ ಬುದ್ಧಿಯು ಎಲ್ಲರಲ್ಲಿ ಇರುವುದಾದರೂ ಎಲ್ಲರಲ್ಲಿ ಅದು ಸಮಪ್ರಮಾಣದಲ್ಲಿ ಇರುವುದಿಲ್ಲ. ಗುಣತ್ರಯಗಳನ್ನು ಅವಲಂಬಿಸಿ ಅದು ಸಾತ್ವಿಕ ರಾಜಸಿಕ ತಾಮಸಿಕವಾಗಿರಬಹುದು. ಸನ್ನಿವೇಶಗಳ ಪ್ರಭಾವದಿಂದಲೂ ಶಿಕ್ಷಣದ ಪ್ರಭಾವದಿಂದಲೂ ಇದರಲ್ಲಿ ವ್ಯತ್ಯಾಸಗಳು ತೋರುವವು. ಈ ಬುದ್ಧಿಯನ್ನು ಸುಸಂಸ್ಕೃತಗೊಳಿಸುವದು ಶಿಕ್ಷಣದ ಕಾರ್ಯ. ಆದ್ದರಿಂದ ಶಿಕ್ಷಣವು ಉದ್ದೇಶಪೂರ್ವಕವಾಗಿದೆ. ಕರ್ಮದ ಒಳಿತು ಕೆಡಕುಗಳು ಕೇವಲ ಬಾಹ್ಯ ಆಚರಣೆಯನ್ನು ಅವಲಂಬಿಸದೆ ಆಂತರಿಕ ಉದ್ದೇಶವನ್ನು ಆಶ್ರಯಿಸಿರುವವು. ಕಾಲಿನ ಬೇನೆಯಿಂದ ಬಳಲುತ್ತಿರುವ ಒಂದು ಎತ್ತಿಗೆ ಕಬ್ಬಿಣದ ಕುಡವನ್ನು ಕೆಂಪಗೆ ಕಾಯಿಸಿ ಬರೆಕೊಡುತ್ತಾರೆ. ತೋರಿಕೆಗೆ ಇದು ಬಹಳ ಕಠೋರವಾದ ಕಾರ್ಯವಾಗಿದೆ. ಆದರೆ ಅದರಿಂದ ಕಾಲಿನ ಬೇನೆ ವಾಸಿಯಾಗುತ್ತದೆ. ಅದಕ್ಕಾಗಿ ಬರೆಕೊಡಬೇಕೆಂಬ ಉದ್ದೇಶವು ಸದ್ಭಾವನೆಯಿಂದ ಕೂಡಿಕೊಂಡಿದ್ದಾಗಿರುತ್ತದೆ. ಹಾಗೆಯೇ ಬಡವನಿರುವನೆಂದು ಒಬ್ಬನಿಗೆ ಹಣವನ್ನು ದಾನವಾಗಿ ಕೊಡುತ್ತಾರೆ. ಅದರಿಂದ ಅವನ ಕುಟುಂಬ ಸಂರಕ್ಷಣೆಯಾಗಬೇಕೆಂದು ಇಚ್ಛೆಯಿರುತ್ತದೆ. ಆದರೆ ಆ ಹಣದಿಂದ ಮಾದಕಪದಾರ್ಥಗಳನ್ನು ಸೇವಿಸಿದ ಅವನು ಅಮಲೇರಿ ಮನೆಯ ಹೆಂಡತಿಯನ್ನು ಬಡಿಯುತ್ತಾನೆ, ತಲೆಯೊಡೆಯುತ್ತಾನೆ. ಹೀಗೆ ದಾನವಾಗಿ ನೀಡಿದ ಹಣದ ದುರುಪಯೋಗವಾಗುತ್ತದೆ. ದಾನವಾಗಿ ನೀಡುವ ಉದ್ದೇಶ ಒಳ್ಳೆಯದು, ಆದರೆ ಅದರ ಪರಿಣಾಮ ಮಾತ್ರ ಕೆಡುಕಾಗುತ್ತದೆ. ಇದರಿಂದ ಕಾರ್ಯಗಳ ಉದ್ದೇಶ ಫಲಗಳಲ್ಲಿ ವ್ಯಕ್ತವಾಗುವ ಫಲಗಳಲ್ಲಿ ಒಳಿತು-ಹಾನಿಗಳ ಗುಣದೋಷ

ಗಳನ್ನು ಅರಿಯಬಹುದು. ಒಳಿತು–ಕೆಡುಕುಗಳ ಕಡೆಗೆ ದೃಷ್ಟಿಯನ್ನಿಟ್ಟು ಮಾಡುವ ಮಾಟದಿಂದ ನೀತಿಯ ರಹಸ್ಯವನ್ನು ಅರಿತುಕೊಳ್ಳಲಾಗುತ್ತದೆ. ಈ ದೆಸೆಯಿಂದ ಯಾಂತ್ರಿಕ ಕ್ರಿಯೆಯು ನೈತಿಕ ಕ್ರಿಯೆಯೆನಿಸಲಾರದು.

ಪಶುಪಕ್ಷಿಗಳ ಜೀವನದಲ್ಲಿ ಪ್ರಕೃತಿಯೇ ಕಾರ್ಯನಿರ್ವಹಣೆ ಮಾಡುತ್ತಿರುವದು. ಅವುಗಳ ಆ ಜೀವನವು ನಿಸರ್ಗನಿಯತವಾಗಿರುವದು. ಅವಕ್ಕೆ ಸಹಜ ಬುದ್ಧಿಯಿರುವುದಾದರೂ ನೈತಿಕ ಭಾವನೆಯಿರುವದಿಲ್ಲ. ಆದ್ದರಿಂದ ಕಾರ್ಯ ಮಾಡುವಾಗ ಅವುಗಳಲ್ಲಿ ಒಳಿತು-ಕೆಡುಕುಗಳ ಕಲ್ಪನೆಯಿರುವುದಿಲ್ಲ. ಪಾಪ-ಪುಣ್ಯಗಳ ಕಲ್ಪನೆ ಮೂಡಿಕೊಳ್ಳುವದು ಜಾಗ್ರತ ಜೀವಿಯಲ್ಲಿ. ಹಾಗೆ ಮೂಡಿಕೊಳ್ಳುವದು ಜಾಗ್ರತಜೀವಿಯ ಲಕ್ಷಣವಾಗಿರುತ್ತದೆ. ಆದ್ದರಿಂದ ನೈತಿಕ ಜೀವನವು ಧಾರ್ಮಿಕ ಜೀವನದ ಮುಂಗುರುತು. ಅದೇಕೆ ಧಾರ್ಮಿಕ ಜೀವನದ ಭದ್ರವಾದ ಮಂದಿರಕ್ಕೆ ನೈತಿಕ ಜೀವನವು ನೆಲೆಗಟ್ಟಾಗಿರುತ್ತದೆ. ಪ್ರಕೃತಿಯು ಮಾನವನಿಗೂ ಪಶುಪಕ್ಷಿಗಳಿಗೂ ಸಮವಾಗಿಯೇ ಸಹಜ ಪ್ರವೃತ್ತಿಗಳನ್ನು ಒದಗಿಸಿಕೊಟ್ಟಿರುತ್ತದೆ. ಮಾನವನು ತನ್ನ ಬುದ್ಧಿಬಲದಿಂದ ಸಹಜ ಪ್ರವೃತ್ತಿಗಳಿಗೆ ಸರಿಯಾದ ನಿರ್ಗಮನ ಮಾರ್ಗವನ್ನು ಯೋಜಿಸುವನು. ಈ ಯೋಜನೆಯೇ ಸಂಸ್ಕೃತಿ. ಪ್ರಕೃತಿಯು ಕಚ್ಚಾ ಮಾಲನ್ನು ಒದಗಿಸುವದು; ಅದರಿಂದ ನಯವಾದ ಸುಂದರವಾದ ವಸ್ತುಗಳನ್ನು ಸಿದ್ಧಗೊಳಿಸುವದು ಮಾನವನ ಬುದ್ಧಿ ಸಾಮರ್ಥ್ಯ. ಬುದ್ಧಿಬಲದಿಂದ ಸದಸದ್ವಿವೇಕಪೂರ್ವಕವಾಗಿ ಮಾಡಿದ ಪ್ರಯತ್ನದ ಫಲವೇ ಸಂಸ್ಕೃತಿ. ಮಾನವನು ತನ್ನ ಹಾಗು ಇನ್ನುಳಿದವರ ಹಿತಕ್ಕಾಗಿ ನಡೆಯುವ, ನುಡಿಯುವ, ಬಗೆಯುವ, ಭಾವಿಸುವ, ಬದಲಿಸುವ ಕೃತಿಯೇ ಸಂಸ್ಕೃತಿ. ಸಂಸ್ಕೃತಿಯೆಂದರೆ ಅಕ್ಷರಜ್ಞಾನವಲ್ಲ. ಅಕ್ಷರಜ್ಞಾನದಿಂದ ಮಾನವನು ಸುಶಿಕ್ಷಿತನಾಗಬಹುದು. ಆದರೆ ಸುಶಿಕ್ಷಿತನಾದ ಪ್ರತಿಯೊಬ್ಬನು ಸುಸಂಸ್ಕೃತನಿರುವನೆಂದು ಹೇಳಲಿಕ್ಕಾಗದು. ಎಷ್ಟೋ ಸಾರೆ ಸುಶಿಕ್ಷಿತರೆನಿಸಿಕೊಳ್ಳುವವರೇ ತೀರಾ ಅಸಂಸ್ಕೃತ ಕಾರ್ಯಗಳನ್ನು ಮಾಡುವದುಂಟು. ಆದ್ದರಿಂದ ಕೇವಲ ಅಕ್ಷರಜ್ಞಾನವೇ ಸಂಸ್ಕೃತಿಯಲ್ಲ. ಸಂಸ್ಕೃತಿಯೆಂದರೆ ಮನಸ್ಸಿನ ಪರಿಪಾಕ. ಮನಸ್ಸು ಪರಿಪಕ್ವವಾಗಿ ತನ್ನ ಸಾಸಿರದಳಗಳನ್ನು ಸರ್ವತ್ರ ಹರಡಿ ಸೃಷ್ಟಿಯಲ್ಲಿ ಸತ್ಯವನ್ನು ಸೌಂದರ್ಯವನ್ನು ಶಾಂತಿಯನ್ನು ಕಾಂತಿಯನ್ನು ನಿಯಮವನ್ನು ನ್ಯಾಯವನ್ನು ಕಾಣುವದು; ಅಲ್ಲದೆ ಅವನ್ನು ನೆಲೆಗೊಳಿಸಲು ಹೆಣಗುವದು. ಈ ಶಾಂತಿ ಸೌಂದರ್ಯ ಮುಂತಾದವುಗಳು

ಆಕುಂಚನ, ಗಮನಾಗಮನ ಇತ್ಯಾದಿಗಳನ್ನು ಆ ದೇಹದ ಯಾಂತ್ರಿಕ ಕ್ರಿಯೆಗಳೆಂದು ಹೇಳಬಹುದು. ದೇಹಕ್ಕೆ ಸಂಬಂಧಪಟ್ಟ ಈ ಯಾಂತ್ರಿಕ ಕ್ರಿಯೆಗಳನ್ನು ಅಂಕಿತದಲ್ಲಿಟ್ಟುಕೊಳ್ಳುವದೂ ಒಂದು ಸಾಧನ. ಅದಕ್ಕೆ ಹಠಯೋಗ ಸಾಧನವೆಂದು ಯೋಗಶಾಸ್ತ್ರದಲ್ಲಿ ಹೇಳಲಾಗಿದೆ.

ಮಾನವನು ಸಾಮಾಜಿಕ ಪ್ರಾಣಿ; ಅದಕ್ಕೋಸುಗ ಅವನು ಸಮಾಜದಲ್ಲಿ ಇರಬೇಕಾಗುವದು. ಆದ್ದರಿಂದ ಅವನ ಕಾರ್ಯಗಳೆಲ್ಲ ಉದ್ದೇಶಪೂರ್ವಕವಾಗಿ ಇರುವವವು. ಉದ್ದೇಶಪೂರ್ವಕವಾದ ಕರ್ಮವು ಕರ್ತಾರನ ಬುದ್ಧಿಯನ್ನು ಅವಲಂಬಿಸಿರುತ್ತದೆ. ಆದ್ದರಿಂದ ಕರ್ತನು ಸಮಬುದ್ಧಿಯನ್ನಿಟ್ಟುಕೊಂಡು ಕರ್ಮಗಳನ್ನು ಮಾಡಲಿಕ್ಕೆ ಕಲಿಯುವದೇ ಕರ್ಮಯೋಗವು. ಈ ಬುದ್ಧಿಯು ಎಲ್ಲರಲ್ಲಿ ಇರುವುದಾದರೂ ಎಲ್ಲರಲ್ಲಿ ಅದು ಸಮಪ್ರಮಾಣದಲ್ಲಿ ಇರುವುದಿಲ್ಲ. ಗುಣತ್ರಯಗಳನ್ನು ಅವಲಂಬಿಸಿ ಅದು ಸಾತ್ವಿಕ ರಾಜಸಿಕ ತಾಮಸಿಕವಾಗಿರಬಹುದು. ಸನ್ನಿವೇಶಗಳ ಪ್ರಭಾವದಿಂದಲೂ ಶಿಕ್ಷಣದ ಪ್ರಭಾವದಿಂದಲೂ ಇದರಲ್ಲಿ ವ್ಯತ್ಯಾಸಗಳು ತೋರುವವು. ಈ ಬುದ್ಧಿಯನ್ನು ಸುಸಂಸ್ಕೃತಗೊಳಿಸುವದು ಶಿಕ್ಷಣದ ಕಾರ್ಯ. ಆದ್ದರಿಂದ ಶಿಕ್ಷಣವು ಉದ್ದೇಶಪೂರ್ವಕವಾಗಿದೆ. ಕರ್ಮದ ಒಳಿತು ಕೆಡಕುಗಳು ಕೇವಲ ಬಾಹ್ಯ ಆಚರಣೆಯನ್ನು ಅವಲಂಬಿಸದೆ ಆಂತರಿಕ ಉದ್ದೇಶವನ್ನು ಆಶ್ರಯಿಸಿರುವವು. ಕಾಲಿನ ಬೇನೆಯಿಂದ ಬಳಲುತ್ತಿರುವ ಒಂದು ಎತ್ತಿಗೆ ಕಬ್ಬಿಣದ ಕುಡವನ್ನು ಕೆಂಪಗೆ ಕಾಯಿಸಿ ಬರೆಕೊಡುತ್ತಾರೆ. ತೋರಿಕೆಗೆ ಇದು ಬಹಳ ಕಠೋರವಾದ ಕಾರ್ಯವಾಗಿದೆ. ಆದರೆ ಅದರಿಂದ ಕಾಲಿನ ಬೇನೆ ವಾಸಿಯಾಗುತ್ತದೆ. ಅದಕ್ಕಾಗಿ ಬರೆಕೊಡಬೇಕೆಂಬ ಉದ್ದೇಶವು ಸದ್ಭಾವನೆಯಿಂದ ಕೂಡಿಕೊಂಡಿದ್ದಾಗಿರುತ್ತದೆ. ಹಾಗೆಯೇ ಬಡವನಿರುವನೆಂದು ಒಬ್ಬನಿಗೆ ಹಣವನ್ನು ದಾನವಾಗಿ ಕೊಡುತ್ತಾರೆ. ಅದರಿಂದ ಅವನ ಕುಟುಂಬ ಸಂರಕ್ಷಣೆಯಾಗಬೇಕೆಂದು ಇಚ್ಛೆಯಿರುತ್ತದೆ. ಆದರೆ ಆ ಹಣದಿಂದ ಮಾದಕಪದಾರ್ಥಗಳನ್ನು ಸೇವಿಸಿದ ಅವನು ಅಮಲೇರಿ ಮನೆಯ ಹೆಂಡತಿಯನ್ನು ಬಡಿಯುತ್ತಾನೆ, ತಲೆಯೊಡೆಯುತ್ತಾನೆ. ಹೀಗೆ ದಾನವಾಗಿ ನೀಡಿದ ಹಣದ ದುರುಪಯೋಗವಾಗುತ್ತದೆ. ದಾನವಾಗಿ ನೀಡುವ ಉದ್ದೇಶ ಒಳ್ಳೆಯದು, ಆದರೆ ಅದರ ಪರಿಣಾಮ ಮಾತ್ರ ಕೆಡುಕಾಗುತ್ತದೆ. ಇದರಿಂದ ಕಾರ್ಯಗಳ ಉದ್ದೇಶ ಫಲಗಳಲ್ಲಿ ವ್ಯಕ್ತವಾಗುವ ಫಲಗಳಲ್ಲಿ ಒಳಿತು–ಹಾನಿಗಳ ಗುಣದೋಷ

ಗಳನ್ನು ಅರಿಯಬಹುದು. ಒಳಿತು-ಕೆಡುಕುಗಳ ಕಡೆಗೆ ದೃಷ್ಟಿಯನ್ನಿಟ್ಟು ಮಾಡುವ ಮಾಟದಿಂದ ನೀತಿಯ ರಹಸ್ಯವನ್ನು ಅರಿತುಕೊಳ್ಳಲಾಗುತ್ತದೆ. ಈ ದೆಸೆಯಿಂದ ಯಾಂತ್ರಿಕ ಕ್ರಿಯೆಯು ನೈತಿಕ ಕ್ರಿಯೆಯೆನಿಸಲಾರದು.

ಪಶುಪಕ್ಷಿಗಳ ಜೀವನದಲ್ಲಿ ಪ್ರಕೃತಿಯೇ ಕಾರ್ಯನಿರ್ವಹಣೆ ಮಾಡುತ್ತಿರುವದು. ಅವುಗಳ ಆ ಜೀವನವು ನಿಸರ್ಗನಿಯತವಾಗಿರುವದು. ಅವಕ್ಕೆ ಸಹಜ ಬುದ್ಧಿಯಿರುವುದಾದರೂ ನೈತಿಕ ಭಾವನೆಯಿರುವುದಿಲ್ಲ. ಆದ್ದರಿಂದ ಕಾರ್ಯ ಮಾಡುವಾಗ ಅವುಗಳಲ್ಲಿ ಒಳಿತು-ಕೆಡುಕುಗಳ ಕಲ್ಪನೆಯಿರುವುದಿಲ್ಲ. ಪಾಪ-ಪುಣ್ಯಗಳ ಕಲ್ಪನೆ ಮೂಡಿಕೊಳ್ಳುವದು ಜಾಗ್ರತ ಜೀವಿಯಲ್ಲಿ. ಹಾಗೆ ಮೂಡಿಕೊಳ್ಳುವದು ಜಾಗ್ರತಜೀವಿಯ ಲಕ್ಷಣವಾಗಿರುತ್ತದೆ. ಆದ್ದರಿಂದ ನೈತಿಕ ಜೀವನವು ಧಾರ್ಮಿಕ ಜೀವನದ ಮುಂಗುರುತು. ಅದೇಕೆ ಧಾರ್ಮಿಕ ಜೀವನದ ಭದ್ರವಾದ ಮಂದಿರಕ್ಕೆ ನೈತಿಕ ಜೀವನವು ನೆಲೆಗಟ್ಟಾಗಿರುತ್ತದೆ. ಪ್ರಕೃತಿಯು ಮಾನವನಿಗೂ ಪಶುಪಕ್ಷಿಗಳಿಗೂ ಸಮವಾಗಿಯೇ ಸಹಜ ಪ್ರವೃತ್ತಿಗಳನ್ನು ಒದಗಿಸಿಕೊಟ್ಟಿರುತ್ತದೆ. ಮಾನವನು ತನ್ನ ಬುದ್ಧಿಬಲದಿಂದ ಸಹಜ ಪ್ರವೃತ್ತಿಗಳಿಗೆ ಸರಿಯಾದ ನಿರ್ಗಮನ ಮಾರ್ಗವನ್ನು ಯೋಜಿಸುವನು. ಈ ಯೋಜನೆಯೇ ಸಂಸ್ಕೃತಿ. ಪ್ರಕೃತಿಯು ಕಚ್ಚಾ ಮಾಲನ್ನು ಒದಗಿಸುವದು; ಅದರಿಂದ ನಯವಾದ ಸುಂದರವಾದ ವಸ್ತುಗಳನ್ನು ಸಿದ್ಧಗೊಳಿಸುವದು ಮಾನವನ ಬುದ್ಧಿಸಾಮರ್ಥ್ಯ. ಬುದ್ಧಿಬಲದಿಂದ ಸದಸದ್ವಿವೇಕಪೂರ್ವಕವಾಗಿ ಮಾಡಿದ ಪ್ರಯತ್ನದ ಫಲವೇ ಸಂಸ್ಕೃತಿ. ಮಾನವನು ತನ್ನ ಹಾಗು ಇನ್ನುಳಿದವರ ಹಿತಕ್ಕಾಗಿ ನಡೆಯುವ, ನುಡಿಯುವ, ಬಗೆಯುವ, ಭಾವಿಸುವ, ಬದಲಿಸುವ ಕೃತಿಯೇ ಸಂಸ್ಕೃತಿ. ಸಂಸ್ಕೃತಿಯೆಂದರೆ ಅಕ್ಷರಜ್ಞಾನವಲ್ಲ. ಅಕ್ಷರಜ್ಞಾನದಿಂದ ಮಾನವನು ಸುಶಿಕ್ಷಿತನಾಗಬಹುದು. ಆದರೆ ಸುಶಿಕ್ಷಿತನಾದ ಪ್ರತಿಯೊಬ್ಬನು ಸುಸಂಸ್ಕೃತನಿರುವನೆಂದು ಹೇಳಲಿಕ್ಕಾಗದು. ಎಷ್ಟೋ ಸಾರೆ ಸುಶಿಕ್ಷಿತರೆನಿಸಿಕೊಳ್ಳುವವರೇ ತೀರಾ ಅಸಂಸ್ಕೃತ ಕಾರ್ಯಗಳನ್ನು ಮಾಡುವದುಂಟು. ಆದ್ದರಿಂದ ಕೇವಲ ಅಕ್ಷರಜ್ಞಾನವೇ ಸಂಸ್ಕೃತಿಯಲ್ಲ. ಸಂಸ್ಕೃತಿಯೆಂದರೆ ಮನಸ್ಸಿನ ಪರಿಪಾಕ. ಮನಸ್ಸು ಪರಿಪಕ್ವವಾಗಿ ತನ್ನ ಸಾಸಿರದಳಗಳನ್ನು ಸರ್ವತ್ರ ಹರಡಿ ಸೃಷ್ಟಿಯಲ್ಲಿ ಸತ್ಯವನ್ನು ಸೌಂದರ್ಯವನ್ನು ಶಾಂತಿಯನ್ನು ಕಾಂತಿಯನ್ನು ನಿಯಮವನ್ನು ನ್ಯಾಯವನ್ನು ಕಾಣುವದು; ಅಲ್ಲದೆ ಅವನ್ನು ನೆಲೆಗೊಳಿಸಲು ಹೆಣಗುವದು. ಈ ಶಾಂತಿ ಸೌಂದರ್ಯ ಮುಂತಾದವುಗಳು

ಒಂದೊಂದು ರೂಪ ತಳೆದು ಶಾಸ್ತ್ರಕಲೆಗಳಾಗಿ ಮಾರ್ಪಡುವವು. ಬಹುಮುಖವಾದ ಮನವು ಬಹುಸ್ವರೂಪಗಳಲ್ಲಿ ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳುವದೇ ಸಂಸ್ಕೃತಿ. ತೋರಿಕೆಗೆ ಹಲವು ಶಾಸ್ತ್ರಗಳು ಹಲವು ಕಲೆಗಳು ಎಂದು ತೋರಿದರೂ ಅವೆಲ್ಲವುಗಳ ಗುರಿ ಒಂದೇ. ಅದುವೆ ಸತ್ಯಾನ್ವೇಷಣೆ, ಸತ್ಯದ ಸಾಕ್ಷಾತ್ಕಾರ. ಈ ದೃಷ್ಟಿಯಿಂದ ನೋಡಿದರೆ ಸಾಹಿತ್ಯ–ಕಲೆ, ವಿಜ್ಞಾನ–ತತ್ವಜ್ಞಾನ, ಆಚಾರ–ವಿಚಾರ, ವೇಷ–ಭೂಷಣ, ಆಹಾರ–ವಿಹಾರ, ಆಮೋದ–ಪ್ರಮೋದ ಇವೆಲ್ಲ ಸಂಸ್ಕೃತಿಯ ಕಕ್ಷೆಯಲ್ಲಿ ಬರುವವು.

ಇನ್ನು ನಿರುಪಾಧಿಕ ಮಾಟವೆಂದರೇನು ? ಉಪಾಧಿರಹಿತವಾದ ಕ್ರಿಯೆಯೇ ನಿರುಪಾಧಿಕ ಮಾಟವೆನಿಸುವದು. ನಾವು ಮಾಡುವ ಕಾರ್ಯಗಳಲ್ಲಿ ಉಪಕರಣಗಳೂ ಉದ್ದೇಶಗಳೂ ಇರುತ್ತವೆ. ಯಾವುದಾದರೊಂದು ಕಾರ್ಯದ ಬಗೆಗೆ ಬಯಸಿ, ಅದರ ಸಾಧನೆ ಸಫಲತೆಗಳಿಗಾಗಿ ಹೋರಾಡಬೇಕಾಗುತ್ತದೆ, ಹೆಣಗಾಡಬೇಕಾಗುತ್ತದೆ. ಆದರೆ ಸಂಕಲ್ಪ ಮಾತ್ರದಿಂದ ಕಾರ್ಯಗೈಯುವದೇ ನಿರುಪಾಧಿಕ ಮಾಟವೆನಿಸುವದು. ಇಲ್ಲಿ ಉದ್ದೇಶವಿಲ್ಲವೆಂತಲ್ಲ, ಉಪಕರಣಗಳೂ ಇಲ್ಲವೆಂತಲ್ಲ. ಕೆಡುಕನ್ನು ನಿರೋಧಿಸಿ ಒಳಿತನ್ನು ಬಿತ್ತರಿಸುವ ಮತ್ತು ಮನುಕುಲದ ಕಲ್ಯಾಣವನ್ನು ಚಿಂತಿಸುವ ನೆವದಿಂದಲೇ ಕಾರ್ಯಪ್ರವೃತ್ತಿಯಿರುತ್ತದೆ ಈ ನಿರುಪಾಧಿಕ ಮಾಟದಲ್ಲಿ. ಇಲ್ಲಿ ಕಾರ್ಯಗತಿಯು ಪ್ರಖರವಾಗಿರುವುದಲ್ಲದೆ ಪವಿತ್ರವೂ ಆಗಿರುವದು. ಪತನ ಪ್ರಯತ್ನಗಳ ಮುಖಾಂತರ ಹೊಂದುವ ಪ್ರಗತಿಯ ಪರಿವಿಡಿಯಿಲ್ಲ, ಸಂಕಲ್ಪವೇ ಶಕ್ತಿಯಾಗುವ ಸಿದ್ಧತೆಯಿದೆ ಇಲ್ಲಿ. ಇದುವೆ ಸಂಪತ್ತಿ, ಇದುವೆ ಸಂಪಾದನೆ.

ಈಶ್ವರನು ಪ್ರಪಂಚದ ಪರಮೋತ್ಕೃಷ್ಟವಾದ ನಿಃಶ್ರೇಯಸ್ಸಿನ, ಸರ್ವಭೂತಗಳ ಕಲ್ಯಾಣದ ಧ್ಯೇಯನು. ಅವನು ಪ್ರಪಂಚದ ಸರ್ವಪರಿಣಾಮ ಚಲನೆಗೆ ಮೂಲ ಕಾರಣನಾದರೂ ತನ್ನ ಶಕ್ತಿಯನ್ನು ಮೀರುವ ಅವನ ವಿಧಾನ ವಿಚಿತ್ರವಾಗಿರುತ್ತದೆ. ಸುಂದರವಾದ ಒಂದು ಚಿತ್ರ ನಮ್ಮ ಹೃದಯವನ್ನು ಹೇಗೆ ಆಕರ್ಷಿಸುವದೋ, ಉತ್ಕೃಷ್ಟವಾದ ಒಂದು ಧ್ಯೇಯ ನಮ್ಮ ಆತ್ಮವನ್ನು ಹೇಗೆ ಸೆಳೆಯುವದೋ ಹಾಗೆಯೇ ಪರಮ ಸೌಂದರ್ಯ ಶ್ರೇಯ–ಧ್ಯೇಯಗಳ ತವರು ಆಗಿರುವ ಪರಮಾತ್ಮನು ತನ್ನ ಆಕರ್ಷಣ ಶಕ್ತಿಯಿಂದಲೇ ಸಮಸ್ತ ಪ್ರಾಣಿಗಳು ತಮ್ಮ ತಮ್ಮ ಶ್ರೇಯಸ್ಸನ್ನು ಪಡೆಯಲು ಪ್ರಯತ್ನಿಸುವಂತೆ ಮಾಡುವನು.

ಪ್ರಾಣಿಗಳ ಜೀವದಾಸೆಗೆ ಪರಮಾತ್ಮನ ಅಸ್ತಿತ್ವವೇ ಮೂಲ ಕಾರಣ. ಈ ಕಾರಣದಿಂದ ಈಶ್ವರನು ಸಮಸ್ತ ಭೂತಗಳಿಗೆ ಆಧಾರ, ಕೇಂದ್ರಸ್ಥಾನ ಮತ್ತು ಏಕೀಕರಣ ತತ್ವ ಎಂದು ಹೇಳಬಹುದು. ಪ್ರಪಂಚದಲ್ಲಿರತಕ್ಕ ಸರ್ವ ವಿಧವಾದ ಕ್ರಮ ಶಾಂತಿ ಚೈತನ್ಯಗಳಿಗೂ ಆತನೇ ಮೂಲ ಕಾರಣನು. ಆತನು ಸಂಪೂರ್ಣವಾಗಿ ಚೈತನ್ಯ ಸ್ವರೂಪನು. ವಸ್ತುಗಳ ಮುಖ್ಯ ತತ್ವಗಳಾದ ಸೌಂದರ್ಯ ರೂಪಗಳನ್ನು ಚಿಂತಿಸುತ್ತಿರುವುದೇ ಆತನ ಕಾರ್ಯ. ಆತನು ಪೂರ್ಣ ಸಿದ್ಧಿ ರೂಪನು. ಸಮಸ್ತವಿಧವಾದ ಶಕ್ತಿ ಸ್ಥಿತಿಗಳೆಲ್ಲವೂ ಆತನಲ್ಲಿ ಸಿದ್ಧಿ ಹೊಂದಿರುತ್ತವೆ. ಆತನಲ್ಲಿ ಇಂದ್ರಿಯವ್ಯಾಪಾರವೆಂಬುದೂ ಅವಗ್ರಹವೆಂಬುದೂ ಇರುವದಿಲ್ಲ; ಆಶಾರೂಪದಲ್ಲಿ ಪರಿಣಮಿಸುವ ಚಿತ್ತಸಂಕಲ್ಪವಿಲ್ಲ, ಕಾಮರೂಪದ ಭಾವನೆಗಳೂ ಇಲ್ಲ. ಆತನು ಶುದ್ಧ ಚಿದ್ರೂಪನು. ಮಾನವನ ಬುದ್ಧಿಯು ವಿಜ್ಞಾನರೂಪವಾದುದು; ಆದ್ದರಿಂದ ಅವನ ಈ ಜ್ಞಾನವೆಲ್ಲ ಭಿನ್ನಮಯವಾದುದು. ಪರಮಾತ್ಮನ ಚಿತ್ತವಾದರೋ ಜ್ಞಾನರೂಪವಾಗಿರುತ್ತದೆ. ಪ್ರಜ್ಞಾನ (Intuitive knowledge) ವಿಜ್ಞಾನ (Discursive knowledge) ಗಳೆರಡೂ ಅವನಲ್ಲಿ ಏಕೀಭವಿಸಿರುವರಿಂದ ಸಮಸ್ತ ವಸ್ತುಗಳನ್ನು ಅವನು ಏಕಕಾಲದಲ್ಲಿಯೇ ಗ್ರಹಿಸಬಲ್ಲನು. ಸರ್ವಕಾಮ ಬಾಧಾರಹಿತನಾಗಿ ಪರಮಾತ್ಮನು ಆನಂದಮಯನಾಗಿ ಮಾನವನಿಗೆ ವ್ಯಕ್ತನಾಗುತ್ತಾನೆ. ಇಂಥ ಪರಮಾತ್ಮನ ನಿಲವನ್ನರಿತು ಶಿವಶರಣರು ಹಾಡಿಕೊಂಡಿರುವದನ್ನು ಗಮನಿಸಬೇಕು:

ಹೃದಯಕಮಲ ಕರ್ಣಿಕಾವಾಸದಲ್ಲಿ
 ದಿಟ ಪುಟ ಜ್ಞಾನ ಉದಯವಾಗಿ ಸಟೆ ದೂರವಾಗಿ
 ವಿವರ್ಜಿತವಾದುದು, ನೋಡಾ.
ಆ ಕುಟಿಲ ಕುಹಕ ಅಟಮಟ ಅಭ್ರಚ್ಛಾಯೆಯಳಿದು
 ಸ್ಫಟಿಕ ಪ್ರಜ್ವಲಾಕಾರವಾಯಿತ್ತು, ನೋಡಾ.
ಆ ದಿವ್ಯ ಪ್ರಭೆಯೊಳಗೆ ನಿಟಿಲಲೋಚನನೆಂಬ ನಿತ್ಯನನು ಕಂಡು
 ಅದೇ ಎನ್ನ ನಿಜವೆಂದು ಬೆರಸಿ ಭಿನ್ನ ಸುಖಿಯಾದೆನಯ್ಯ,
 ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ!

ದೃಷ್ಟಿ ದಿಟವಾಯ್ತು, ಸೃಷ್ಟಿ ಸಟೆಯಾಯ್ತು ಕನ್ನಡದಲ್ಲಿ. ದಿಟವೆಂದರೆ ಒಂದು, ಸಟೆಯೆಂದರೆ ಹಲವು. ಒಂದರೊಳಗೆ ಹಲವಾಗಿ ಹಲವರೊಳಗೆ

ಒಂದಾಗಿಪ್ಪ ಸಂದಿಲ್ಲದ ನೇರುವೆಯೇ ಸತ್ಯ. ಈ ಸತ್ಯವೇ ಇಷ್ಟ. ಇಷ್ಟಿಯೆಂದರೆ ಪೂಜೆ. ಪೂಜೆಗೆ ಅರ್ಹವಾದುದು ಇಷ್ಟವಲ್ಲದೆ, ಶಾಶ್ವತವಾದ ಸತ್ಯವಲ್ಲದೆ ಮತ್ತಾವುದುಂಟು ? ಆದುದರಿಂದ ದೃಷ್ಟಿ–ಸೃಷ್ಟಿಗಳೆರಡು ಇಷ್ಟದ ಕವಲುಗಳು. ದೃಷ್ಟಿಯು ಅಂತರಂಗ, ಸೃಷ್ಟಿಯು ಬಹಿರಂಗ, ಇಷ್ಟವು ಆತ್ಮಸಂಗ. ಇಲ್ಲವೆ ದೃಷ್ಟಿ ಸೃಷ್ಟಿಗಳೆರಡು ಇಷ್ಟದ ಅಂತರ್‌ಬಾಹ್ಯ ಸ್ವರೂಪಗಳು. ಈ ವಿಷಯದಲ್ಲಿ ಅಲ್ಲಮ ಪ್ರಭುದೇವರು ಹೀಗೆ ನುಡಿದಿರುವರು:

ಅಂತರಂಗದಲ್ಲಿ ಭವಿಯನೊಳಕೊಂಡು,
ಬಹಿರಂಗದಲ್ಲಿ ಭಕ್ತಿಯನ್ನೊಳಕೊಂಡು,
ಆತ್ಮ ಸಂಗದಲ್ಲಿ ಪ್ರಸಾದವನೊಳಕೊಂಡು
ಇಪ್ಪ ಭಕ್ತರನಾರನೂ ಕಾಣೆನಯ್ಯಾ ನಾನು.
ಇಂತಪ್ಪ ಲಿಂಗೈಕ್ಯರ ನಾ ಕಾಣೆನಯ್ಯಾ !
ಅಂತರಂಗದಲ್ಲಿ ಸುಳಿದಾಡುವ ತನುಗುಣಾದಿಗಳ
ಮನಗುಣಾದಿಗಳ ಕಳೆದಲ್ಲದೆ ಶರಣರಹರೆ ?
ತನು ಮನ ಧನವ ಕೊಟ್ಟಲ್ಲಿ ಭಕ್ತರಹರೆ ?
ಉಂಬವರ ಕಂಡು ಕೈನೀಡಿದರೆ ಪ್ರಸಾದಿಗಳಹರೆ ?
ಅಂತರಂಗ ಬಹಿರಂಗ ಆತ್ಮಸಂಗ ಈ ತ್ರಿವಿಧಭೇದವ
ಗುಹೇಶ್ವರಾ, ನಿಮ್ಮ ಶರಣ ಬಲ್ಲ.

ಸೃಷ್ಟಿ–ದೃಷ್ಟಿ–ಇಷ್ಟ ಇವನ್ನೇ ಕ್ಷರ, ಅಕ್ಷರ, ದೇವ ಅಥವಾ ಪುರುಷೋತ್ತಮನೆಂದು ಕರೆಯುವರು. ವೀರಶೈವ ಪ್ರಕ್ರಿಯೆಯಲ್ಲಿ ಇದಕ್ಕೆ ಚರ–ಸ್ಥಿರ–ಪರ ಎನ್ನುವರು. ಚರ ಅಥವಾ ಸೃಷ್ಟಿಯು ಹಲವಾಗಿದ್ದರೆ ಸ್ಥಿರ ಅಥವಾ ದೃಷ್ಟಿಯು ಒಂದಾಗಿದೆ. ಆದರೆ ಒಂದು ಹಲವನ್ನು ಸಂದಿಲ್ಲದೆ ವ್ಯಾಪಿಸಿ ಹೆಚ್ಚಾದ ಪರವು ಶೂನ್ಯವಾಗಿದೆ. ಒಂದರಿಂದಾಗಲಿ ಹಲವರಿಂದಾಗಲಿ ವಿವರಿಸಲಿಕ್ಕೆ ಬರುವುದಿಲ್ಲವಾದ್ದರಿಂದ ಆ ಪರವಸ್ತುವನ್ನು ಶೂನ್ಯದಿಂದಲೇ ತಿಳಿಸಬೇಕಾಗುವದು. ದಿಟ ಪುಟ ಭಕುತಿ ಸಂಪುಟವೆಂದರೆ– ಮಾನವನ(ದಿಟ) ಅಂತರಂಗದಲ್ಲಿ ಹುದುಗಿದ ಸತ್ಯವೂ, ಸೃಷ್ಟಿ ಇಲ್ಲವೆ ವಿಶ್ವದ (ಸಟೆ) ಅಂತರಂಗದಲ್ಲಿ ಹುದುಗಿದ ಸತ್ಯವೂ ಒಡಮೂಡಿ ಒಂದಾದುದೇ ಸಂಪುಟ. ಹಾಲು ಹಾಲಿನಲ್ಲಿ, ನೀರು ನೀರಿನಲ್ಲಿ ಬೆರೆತಂತೆ ಒಂದಾಗುವ ಸ್ಥಿತಿಗೆ ಸಂಪುಟ ಅಥವಾ ಸಾಮರಸ್ಯ ಎಂದು ಹೆಸರು. ವ್ಯಕ್ತಿಯ

ಅಂತರಂಗವೂ ವಸ್ತುವಿನ ಅಂತರಂಗವೂ ಮೂಲದಲ್ಲಿ ಒಂದೇ ತತ್ವದಿಂದ ಘಟಿತ ವಾದವುಗಳೆಂಬುದನ್ನರಿತು ಅವುಗಳ ಹೊಂದಿಕೆಯನ್ನು ಆತ್ಯಂತಿಕವಾಗಿ ಅನುಭ ವಿಸುವುದರಿಂದ ಸಮ್ಯಕ್‌ಜ್ಞಾನವು ಅಥವಾ ಸಾಮರಸ್ಯಜ್ಞಾನವು ಸಮನಿಸು ವುದು. ಇಂತಹ ಸಮ್ಯಕ್‌ಜ್ಞಾನದಿಂದಲೇ ಮಾಯೆಯು ಅಥವಾ ಮರವೆಯು ಪರಿಹಾರವಾಗುವದು:

ದಿಟ ಪುಟ ಭಕುತಿ ಸಂಪುಟ ನೆಲೆಗೊಳ್ಳದಾಗಿ
ಟೆಂಬಕನನಾಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ,
ಟೀವಕ ಟೆಂಬಕನಾಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ,
ಕೂಡಲ ಸಂಗಮದೇವಯ್ಯಾ,
ಹೊನ್ನು ಹೆಣ್ಣು ಮಣ್ಣು ತೋರಿ !

ಆದರೆ ಸಮರಸ ಜ್ಞಾನವು ನಾಸ್ತಿಕವಾದಿಗಳ ಐಂದ್ರಿಕ ಜ್ಞಾನವಲ್ಲ, ಅಜ್ಞೇಯ-ವಾದಿಗಳ ಅತಂತ್ರ ಜ್ಞಾನವಲ್ಲ, 'ಯತ್ರ ಯತ್ರ ವಹ್ನಿಃ ತತ್ರ ತತ್ರ ಧೂಮಃ' ಎಂಬ ಅನುಮಾನ ಜ್ಞಾನವಲ್ಲ. ಶಬ್ದ ಪ್ರಮಾಣವೆನಿಸಿದ ಆಗಮ ಜ್ಞಾನವೂ ಅಲ್ಲ. ಇದು ಕೇವಲ ಸ್ವಾತ್ಮಜ್ಞಾನ, ಸಮ್ಯಕ್ ಜ್ಞಾನ, ಸುಜ್ಞಾನ.

ಈ ಸಮರಸ ಜ್ಞಾನದಿಂದ ದುಗುಡ ದುಮ್ಮಾನಗಳಳಿದು ಶಾಂತಿಯು ದಳ-ವೇರುವದು. ಇದೇ ಶಾಂತಿಮಂತ್ರದ ಸೊಲ್ಲು. ಆದರೆ ಒಂದು ಹಲವುಗಳನ್ನು ಮೀರಿ ನಿಂದ ಶೂನ್ಯವು, ಸರ್ವಶಕ್ತಿಮಾನ್ ಪರತತ್ವವು ಅನಂತವೂ ಅಚಿಂತ್ಯವೂ ಅಗಾಧವೂ ಆಗಿಯೇ ಉಳಿಯುವದು. ಅದರ ಸಂಪೂರ್ಣ ಶಕ್ತಿಯನ್ನು ಆಕಲನ ಮಾಡುವ ಯೋಗಕುಶಲದೃಷ್ಟಿಯಾಗಲಿ, ಶೃತಿಯಾಗಲಿ ಎಲ್ಲಿರುವದು ? ಆಕಾಶ ಗಂಗೆಯ ಗರ್ಭದೊಳಗಿನ ದೂರತರವಾದ ನಕ್ಷತ್ರ ಬಿಂದುವೂ ಆ ಅನಂತವನ್ನು ಬೆಳಗಲರಿಯದು. ಶತಮಾನಗಳ ಸಹಸ್ರಾವಧಿ ಕಾಲವೂ ಆ ಅನಂತದ ಅಂಚನ್ನು ಮುಟ್ಟಲಮ್ಮದು. ನಾದಗಳೂ ವರ್ಣಗಳೂ ಇಂದ್ರಿಯಗಳಿಗೆ ಗೋಚರಿಸಿ ಹಾರಿಹೋಗುವವು. ಆದರೆ ಕನಸಿಗನಾದ ಜೀವಾತ್ಮನೂ ಜಗತ್ತೆಂಬ ಕನಸೂ ಯಾವನ ಕೃತಿಗಳಾಗಿರುವವೋ ಆ ನಿದ್ದೆಹೋದ, ತನ್ನಲ್ಲಿ ತಾನು ನಿಗೂಢನಾದ ಆ ದೇವನನ್ನು ನಾವು ನೋಡಲರಿಯೆವು. ಅರಿವಿನ ಪರಿವೆಯುಂಟಾದ ಕೆಲ ವೊಂದು ನಿಮಿಷಗಳನ್ನುಳಿದರೆ ಆವನ ಬಗೆಗಿನ ವಿಚಾರದ ಗಾಳಿಯೂ ಸಹ ನಮ್ಮಲ್ಲಿ ಸುಳಿಯದು. ವೈಭವ ಸಂಪನ್ನವಾದ ಸುರಚಾಪದಂತೆ ಸೃಷ್ಟಿಯು

ನಮ್ಮೆದುರು ಕಂಗೊಳಿಸುವುದೆಂದು ಕವಿಯು ಕನವರಿಸುವನು. ವಸಂತಮಾಸದ ತಂಬೆಲರು ತೀಡುತಿದೆ. ಫಾಲ್ಗುಣದ ದೀರ್ಘ ದಿಗಂತದಲ್ಲಿ ಕುಂಕುಮಾರುಣ ಬಿಂಬದ ಸೂರ್ಯನ ಹೊಂಬೆಳಗು ಹೊರಹೊಮ್ಮುತ್ತಿದೆ. ಮಾಘಮಾಸದ ಗಿರಿ ವನ ಕಂದರಂಗಳಲ್ಲಿ ಮಂಜಿನ ಮಾಯಾ-ಮೋಹದ ಇಂದ್ರಜಾಲವು ತನ್ನ ಕೈಚಳಕವನ್ನು ತೋರುತಿದೆ. ಸುಗ್ಗಿಯ ಸಗ್ಗವಕ್ಕಿಗಳು ಸಾಸಿರ ಸಾಸಿರ ಇಂಚರ ಗಳನು ಆಲಿಸಿ ಲಾಲಿಸಿ ಪುಲಕಿತನಾಗೆಂದು ಬೋಧಿಸುವನು ಕವಿ, ಆ ಸುರಚಾಪ ದಂತಹ ಸೃಷ್ಟಿಯನ್ನು ನಿಟ್ಟಿಸಿ ನೋಡಿ. ಆದರೆ ಆ ಸುರಚಾಪಕ್ಕೆ ಕಾರಣನಾದ ಸೂರ್ಯನು ಮಾತ್ರ ಕಣ್ಣಿಗೆ ಮರೆಯಾಗಿದ್ದಾನೆ ! ಅಗೋ, ಆ ತೇಜಿಯನ್ನೇರಿದ ತರುಣವೀರ, ಕಿಡಿಯನ್ನು ಕಾರುವ ಅವನ ವೀರಗಣ್ಣುಗಳು ! ಅಯ್ಯೋ, ಆ ತೇಜಿಯೂ ಆ ತೇಜಸ್ವಿಯೂ ಎರಡೂ ತೋರಿಕೆಗಳು; ವ್ಯಕ್ತವಾದ ಶಕ್ತಿಯ ರೂಪ ಮಾತ್ರ. ಅವು ಸ್ಥಿರವೆಂದು ತಿಳಿದು ನೆಲದ ಮೇಲೆ ಹೇಗೆ ಬೆಡಗಿನ ನಡಿಗೆ ಯಿಂದ ಸಾಗಿರುವರೆಲ್ಲರು ! ಮರುಳೆ, ಆ ಅನಂತದ ಅಂತರಾಳದಲ್ಲಿ ಜ್ಯೋತಿವತ್ಸರ ದೂರದಾಚೆಯಲ್ಲಿರುವ ನೀಹಾರಿಕೆಗಳಾಗಲಿ, ತೀರ ಹತ್ತಿರದ ಅಗ್ನಿರೂಪಿಣಿ ಪೃಥ್ವಿಯಾಗಲಿ ಒಂದು ಪರೆ ಮಾತ್ರ. ಯಾವಾಗ ಆ ಪರೆ ಹರಿದೀತೋ, ಆ ತೇಜಿಯೂ ಆ ತೇಜಸ್ವಿಯೂ ನೆಲೆಯಿಲ್ಲದ ನುಡಿಗೂ ನಿಲುಕದಂತೆ ಗಳಂಗಪ್ಪಾಗಿ ಯಾವಾಗ ಹೋಗುವರೋ ಯಾರು ಬಲ್ಲರು ? ಎಲ್ಲಿಯ ನೆಲೆ, ಎಲ್ಲಿಯ ನುಡಿ ? ಮನೋರಥವೂ ಅದನ್ನು ಬೆಂಬತ್ತಿ ಹೋಗಲರಿಯದು. ಗಳಿಗೆಯ ಮೊದಲು ಅವರು ಇರಲಿಲ್ಲ, ಗಳಿಗೆಯ ಮೇಲೆ ಅವರು ಇರಲಾರರು. ಅವರ ಸುಳಿವು ಸದ್ದು ಯಾವದೂ ಕಾಣಲಾರದು. ಇಂತು ಈಶ ನಿರ್ಮಿತ ಪ್ರತಾಪವಿದು ! ವಿಸ್ಫುರಿತ ಚೈತನ್ಯ ಪುಂಜದಂತೆ ಶೂನ್ಯದಿಂದ ಉದಯಿಸಿ, ವಿಸ್ಮಯ ವಿಸ್ಫಾರಿತ ನಯನೆಯಾದ ವಸುಂಧರೆಯು ನೋಡ ನೋಡುವನಿತರಲ್ಲಿ ಝುಂಝಾವಾತ ಸದೃಶವಾದ ವೇಗದಿಂದ ಮುಂದೆ ಸಾಗಿ ಮತ್ತೆ ಶೂನ್ಯದಲ್ಲಿ ಧುಮ್ಮಿಕ್ಕುವೆವು ನಾವು. ಆದರೆ ಎಲ್ಲಿಂದ ? ಅಯ್ಯೋ, ಅದೆಲ್ಲಿಗೆ ? ಬುದ್ಧಿಗೆ ತಿಳಿಯದು, ಶ್ರದ್ಧೆಗೂ ಹೊಳೆಯದು. ಗೂಢದಿಂದ ಅತಿಗೂಢಕ್ಕೆ, ದೇವನಿಂದ ದೇವನಲ್ಲಿಗೆ, ಇದಿಷ್ಟೇ ತಿಳಿಯುವದು; ಇದಿಷ್ಟೇ ಹೊಳೆಯುವದು ನಮ್ಮ ಪರಿಮಿತದೃಷ್ಟಿಗೆ !

# ಶಾಂತಿಯಾಚನೆ

ಮನುಷ್ಯರನ್ನು ಒಳಗೊಂಡು ಪ್ರಾಣಿವರ್ಗದ ವ್ಯವಹಾರವೆಲ್ಲವೂ ಸಾಗಿರುವದು ಇಂದ್ರಿಯಗಳ ಮುಖಾಂತರವಾಗಿಯೇ! ನಮ್ಮ ದೈನಂದಿನ ವ್ಯವಹಾರದಲ್ಲಿ ಅನೇಕ ಭೋಗ್ಯವಸ್ತುಗಳು ನಮ್ಮ ಕಣ್ಣಿಗೆ ಬೀಳುತ್ತವೆ. ಪಕ್ಕದ ಮನೆಯ ಕೈತೋಟದಲ್ಲಿ ರಸಬಾಳೆಯ ಹಣ್ಣಿನ ಗೊನೆ ತೂಗಿ ತೊನೆದಾಡುತ್ತಿರಬಹುದು. ಅದನ್ನು ಕಂಡೊಡನೆಯೇ ಒಂದೆರಡು ಕಳಿತ ಹಣ್ಣುಗಳನ್ನು ಬಿಡಿಸಿಕೊಂಡು ತಿನ್ನಬೇಕೆಂಬ ಆಸೆ ಹುಟ್ಟುವದು ಸ್ವಾಭಾವಿಕ. ಹೀಗೆ ನಮ್ಮ ಬಯಕೆಗಳನ್ನು ಇಲ್ಲವೆ ಆಸೆ-ಆಕಾಂಕ್ಷೆಗಳನ್ನು ಒಡಿದೆಬ್ಬಿಸುವ ಅಥವಾ ಪ್ರಚೋದನಗೊಳಿಸುವ ಸಾಮಗ್ರಿಗಳು ಅನೇಕವಾಗಿರುತ್ತವೆ. ತೊಟ್ಟಿಲಲ್ಲಿ ತೂಗಾಡುವ ಶಿಶುವಿನಲ್ಲಿಯೂ ಸಹ ಈ ರೀತಿಯ ಪ್ರಚೋದನೆ–ಪ್ರತಿಕ್ರಿಯೆಗಳನ್ನು ಗುರುತಿಸಬಹುದು. ಅಕಸ್ಮಾತ್ ಗಟ್ಟಿಯಾಗಿ ಶಬ್ದವಾದರೆ ಕೂಸು ಪೆಟ್ಟೆಬೀಳುವದು, ಚಿಟ್ಟನೆ ಚೀರಿ ಅಳುವದು. ಬೆಚ್ಚಿ ಬೀಳುವುದಕ್ಕೂ, ಬೆಚ್ಚಿಬಿದ್ದು ಅಳುವದಕ್ಕೂ ಪ್ರಚೋದಕವಾದುದು ಶಬ್ದ. ಬೆದರುವದು ಆ ಪ್ರಚೋದನೆಯ ಪ್ರತಿಕ್ರಿಯೆ. ಹೀಗೆ ಒಂದೊಂದು ಪ್ರಚೋದನೆಗೂ ಒಂದೊಂದು ವಿಧವಾಗಿ ಪ್ರತಿಕ್ರಿಯೆಯನ್ನು ನಡೆಸಬೇಕೆಂಬ ಒತ್ತಾಯ ಜೀವನಿಗೆ ಸ್ವಾಭಾವಿಕವಾಗಿ ಬಂದ ಗುಣ ಅಂದರೆ ಹುಟ್ಟುಗುಣ. ಈ ಬಗೆಯಾದ ಅನೇಕ ಹುಟ್ಟುಗುಣಗಳು ಪ್ರಾಣಿಗಳಲ್ಲಿ ಇರುತ್ತವೆ. ಈ ಹುಟ್ಟುಗುಣಗಳ ಪ್ರಾಬಲ್ಯದಿಂದಲೇ ಮನುಷ್ಯೇತರ ಪ್ರಾಣಿಗಳು ಮಾತ್ರ ವರ್ತಿಸುತ್ತವೆ. ಆದರೆ ಮನುಷ್ಯನು ಮಾತ್ರ ಹಾಗಲ್ಲ. ಅನೇಕ ಸಮಯಗಳಲ್ಲಿ ಬಲವಾದ ಪ್ರಚೋದನೆ ಇದ್ದರೂ ಅದಕ್ಕನುಗುಣವಾದ ಪ್ರತಿಕ್ರಿಯೆಗೆ ಮನುಷ್ಯನು ಅವಕಾಶ ಕೊಡದೆ ಅದನ್ನು ತಡೆದು ನಿಲ್ಲಿಸುವನು. ಇಂತಹ ಪ್ರಸಂಗಗಳಲ್ಲಿ ಅವನಲ್ಲಿದ್ದ ವಿವೇಕಗುಣವು ಕಾರ್ಯ ಮಾಡುತ್ತದೆ. ಮನುಷ್ಯನಿಗೂ ಇನ್ನುಳಿದ ಇತರ ಪ್ರಾಣಿಗಳಿಗೂ ಇರುವ ಮುಖ್ಯವಾದ ವ್ಯತ್ಯಾಸವನ್ನು ನಾವು ಇಲ್ಲಿ ಕಾಣಬಹುದು. ರಸಬಾಳೆಯ ಹಣ್ಣನ್ನು ಕಂಡೊಡನೆಯೆ ಆ ಪ್ರಚೋದನೆಗೆ ಅನುಸಾರವಾಗಿ ಮಾನವನು ಅದನ್ನು ಹರಿದು ತಿಂದುಬಿಡುವದಿಲ್ಲ. ತನ್ನ ವಿವೇಕ ಬಲದಿಂದ ಆ ಆಕಾಂಕ್ಷೆಯನ್ನು ತಡೆದು ಇಲ್ಲವೆ ಮನಸ್ಸನ್ನು ಬಿಗಿಹಿಡಿದು ನಡೆಯುವನು ಅವನು. ಹಾಗೆ

ಅವನಿಂದ ಬೇರೊಂದು ರೀತಿಯಲ್ಲಿ ಕೆಲಸ ಮಾಡಿಸುವದು ಅವನ ಕಲಿತ ಗುಣ. ಇದರಿಂದ ಮನುಷ್ಯೇತರ ಪ್ರಾಣಿಗಳಲ್ಲಿ ಹುಟ್ಟುಗುಣಗಳೂ ಮನುಷ್ಯನಲ್ಲಿ ಹುಟ್ಟು ಗುಣ ಹಾಗು ಕಲಿತ ಗುಣಗಳೂ ಕಾರ್ಯಪ್ರವೃತ್ತಿಯನ್ನು ನಾಟಿಸುತ್ತವೆಂದು ವ್ಯಕ್ತವಾಗುತ್ತದೆ.

ಮಾನವರಿಗಾಗಲಿ, ಉಳಿದ ಪ್ರಾಣಿವರ್ಗಕ್ಕಾಗಲಿ ಹುಟ್ಟುಗುಣಗಳು ಪಿತ್ರಾರ್ಜಿತ ಆಸ್ತಿ ಇದ್ದಂತೆ. ಇವು ಆನುವಂಶಿಕವಾಗಿ ಬಂದ ಸೊಮ್ಮು. ನಾವು ಯಾವುದೇ ಕೆಲಸ ಮಾಡುತ್ತಿರಲಿ ಆದರ ತಳಹದಿಯಾಗಿ ಈ ಹುಟ್ಟುಗುಣಗಳಿರುತ್ತವೆ. ನಮ್ಮ ಶೀಲ ಬೆಳೆಯುವದೂ, ಸಂಸ್ಕೃತಿ ಮೊಳೆಯುವದೂ, ಶಿಕ್ಷಣ ಕಳೆಯೇರುವದೂ ಈ ಹುಟ್ಟುಗುಣಗಳ ಬಲಾಬಲವನ್ನು ಅನುಸರಿಸಿಯೇ ! ಇಂತಹ ಹುಟ್ಟುಗುಣಗಳು ಇಂತಿಷ್ಟೇ ಇರುತ್ತವೆಂದು ನಿರ್ದಿಷ್ಟವಾಗಿ ಹೇಳಲಿಕ್ಕೆ ಬರುವಂತಿಲ್ಲ. ಪಾಶ್ಚಿಮಾತ್ಯ ಮಾನಸಶಾಸ್ತ್ರಜ್ಞರು ೧೪ ರಿಂದ ೧೫೦ ರ ವರೆಗೆ ಹುಟ್ಟು ಗುಣಗಳಿರುತ್ತವೆಂದು ತರ್ಕಿಸಿದ್ದಾರೆ. ಇವುಗಳಲ್ಲಿ ಮುಖ್ಯವಾದ ಹದಿನಾಲ್ಕು ಹುಟ್ಟುಗುಣಗಳ ನಿರ್ದೇಶವು ಇಂತಿದೆ: ಆಹಾರ, ಮೈಥುನ, ಭಯ, ಜಿಗುಪ್ಸೆ, ಕುತೂಹಲ, ವಾತ್ಸಲ್ಯ, ಸಂಘಜೀವನ, ಪ್ರತಿಷ್ಠೆ, ವಿಧೇಯತೆ, ಮೊರೆಯಿಡುವದು, ಕೋಪ, ರಚನಾಶಕ್ತಿ, ಸಂಗ್ರಹಿಸುವದು ಮತ್ತು ಹಾಸ್ಯ. ಭಾರತೀಯ ಮನೋವಿಜ್ಞಾನಿಗಳು ಮಾನವನ ನೂರಾರು ಹುಟ್ಟುಗುಣಗಳಲ್ಲಿ ನಾಲ್ಕನ್ನು ಮಾತ್ರ ಬಹು ಪ್ರಾಮುಖ್ಯವೆಂದು ಹೇಳುತ್ತಾರೆ. 'ಆಹಾರ ನಿದ್ರಾ ಭಯ ಮೈಥುನಂ ಚ ಸಾಮಾನ್ಯಮೇತತ್ ಪಶುಭಿರ್ನರಾಣಾಂ.' ಆಹಾರ ನಿದ್ರಾ ಭಯ ಮತ್ತು ಮೈಥುನ ಇವು ಮಾನವನಿಗೂ ಪಶುವಿಗೂ ಸಮಾನವಾದ ಹುಟ್ಟುಗುಣಗಳಾಗಿವೆ. ನಿದ್ರೆಯು ಒಂದು ಹುಟ್ಟುಗುಣವೆಂಬುದನ್ನು ಪಾಶ್ಚಿಮಾತ್ಯ ವಿಜ್ಞಾನಿಗಳು ಒಪ್ಪಿಕೊಂಡಂತೆ ಕಾಣುವದಿಲ್ಲ. ಆಧುನಿಕ ಮನೋವಿಜ್ಞಾನಿಗಳು ನಿದ್ರೆಗೆ ಅಷ್ಟೊಂದು ಪ್ರಾಮುಖ್ಯತೆಯನ್ನು ಕೊಡದೆ ಅಧಿಕಾರ ಪ್ರವೃತ್ತಿಗೆ ಮಹತ್ವವನ್ನು ಕೊಟ್ಟಿದ್ದಾರೆ. ಆದರೆ ಭಾರತೀಯ ವಿಜ್ಞಾನಿಗಳು ನಿದ್ರೆಯ ವಿಷಯದಲ್ಲಿ ಮಾತ್ರ ಬಹಳ ಪ್ರಖರವಾಗಿ ತಿಳಿಸುತ್ತಾರೆ. ಮನುಷ್ಯನು ಸಾಮಾಜಿಕ ಪ್ರಾಣಿ. ಅವನು ಸಮೂಹದಲ್ಲಿ ತನ್ನ ನೆರೆಹೊರೆಯವರಲ್ಲಿ ಕೂಡಿಕೊಂಡು ಬಾಳುತ್ತಾನೆ. ಆದ-ರಿಂದ ಅವನು ಸಂಘಜೀವಿಯಾಗಿದ್ದಾನೆ. ಸಮಾಜ ಜೀವನವು ಮಾನವನ ಸಹಜಪ್ರವೃತ್ತಿಗಳನ್ನು ಅವಲಂಬಿಸಿರುತ್ತದೆ. ಸಹಜ ಪ್ರವೃತ್ತಿಗಳು ಅನೇಕವಾಗಿದ್ದರೂ ಅವುಗಳಲ್ಲಿ ಆಹಾರಾದಿ ನಾಲ್ಕರ ಸರಿಯಾದ ಬಳಕೆಯಿಂದ ಸಮಾಜ

ಜೀವನದಲ್ಲಿ ಸ್ವಾಸ್ಥ್ಯವು ಕಂಗೊಳಿಸುತ್ತದೆ. ಈ ನಾಲ್ಕು ಬಗೆಯ ಪ್ರವೃತ್ತಿಗಳಿಗನುಗುಣವಾಗಿಯೇ ಧರ್ಮ ಅರ್ಥ ಕಾಮ ಮೋಕ್ಷ ಎಂಬ ನಾಲ್ಕು ವಿಧವಾದ ಪುರುಷಾರ್ಥಗಳು ಅಸ್ತಿತ್ವದಲ್ಲಿ ಬಂದಿರುತ್ತವೆ.

ಜೀವನವನ್ನು ಧರಿಸುವಲ್ಲಿ ಆಹಾರವು ಬಹಳ ಮಹತ್ವವನ್ನು ಪಡೆದ ವಸ್ತುವಾಗಿದೆ. ಇದಕ್ಕಾಗಿಯೇ 'ಅನ್ನದೇವರ ಮುಂದೆ ಇನ್ನು ದೇವರು ಉಂಟೆ ?' ಎಂಬ ಗಾದೆಯ ಮಾತು ರೂಢವಾಯಿತು. ಕೂಸು ಹುಟ್ಟಿದೊಡನೆಯೇ ಆಹಾರಕ್ಕಾಗಿ ಕೂಗಿಡುವದು. ಆಹಾರವು ತಾನಾಗಿಯೇ ಬಂದು ಬಾಯಲ್ಲಿ ಬೀಳುವದಿಲ್ಲ. ಅದಕ್ಕಾಗಿ ನಾವು ದುಡಿಯಬೇಕು ಇಲ್ಲವೆ ನಾವು ಸ್ವತಃ ದುಡಿಯ ದಿದ್ದರೂ ನಮಗಾಗಿ ಅನ್ಯರು ದುಡಿದು ಇಡಬೇಕಾಗುವದು. ಆಹಾರ ಸಂಪಾದನೆಗಾಗಿ ದುಡಿತ ಬೇಕು. ಇದುವೆ ಕಾಯಕ. ದುಡಿತದಿಂದಲೇ ದುಡ್ಡು ಮತ್ತು ಇನ್ನುಳಿದ ಉಪಕರಣಗಳು. ದುಡ್ಡು ಸ್ಥಾವರ, ದುಡಿತ ಜಂಗಮ. 'ಸ್ಥಾವರಕ್ಕೆ ಅಳಿವುಂಟು; ಜಂಗಮಕ್ಕೆ ಅಳಿವಿಲ್ಲ'. ಅರ್ಥಶಾಸ್ತ್ರ ದೃಷ್ಟಿಯಿಂದ ಬಸವಣ್ಣನವರ ವಚನಗಳಲ್ಲಿ ಹಲವಾರು ಸಲ ಹಾಸುಹೊಕ್ಕಾಗಿ ಮೂಡಿ ಬಂದಿರುವ 'ಲಿಂಗ-ಜಂಗಮ' ಪದಗಳನ್ನು ಹೀಗೆ ಅರ್ಥೈಸಿದಾದ ಅತ್ಯದ್ಭುತ ವಾದ ಅರ್ಥಗಾಂಭೀರ್ಯ – ಸೌಂದರ್ಯ ಸಂಪತ್ತಿಗಳು ವ್ಯಕ್ತವಾಗುತ್ತಿವೆ. ಆಹಾರ ಸಂಪಾದನೆಗಾಗಿ ದುಡಿತ, ದುಡಿತದಿಂದ ದುಡ್ಡು, ಉಳಿದ ಉಪಕರಣ ಗಳು, ಪದಾರ್ಥದ ಹುಟ್ಟುವಳಿ, ಅದಕ್ಕಾಗಿ ಹಂಚಿಕೆ ವಿನಿಮಯ, ಹಳ್ಳಿಯಿಂದ ಪಟ್ಟಣಕ್ಕೆ, ತನ್ಮೂಲಕ ರಾಷ್ಟ್ರಕ್ಕೆ, ಒಂದು ರಾಷ್ಟ್ರದಿಂದ ಇನ್ನೊಂದಕ್ಕೆ, ಹಂಚಿಕೆ ವಿನಿಮಯ ವಿನಿಯೋಗ ಇತ್ಯಾದಿಗಳು ನಡೆಯುತ್ತಿವೆಯಷ್ಟೆ ! ಇದರ ಪರಿಣಾಮ ವಾಗಿ ಅರ್ಥಶಾಸ್ತ್ರವೂ ಆರ್ಥಿಕ ಸಂಸ್ಥೆಗಳೂ ಹುಟ್ಟಿಕೊಂಡವು. ಅರ್ಥಶಾಸ್ತ್ರದ ಹಾಗು ಆರ್ಥಿಕ ಸಂಸ್ಥೆಗಳ ಮೂಲವು ಆಹಾರ ಸಂಪಾದನೆಯಲ್ಲಿರುವುದೆಂದು ಇದರಿಂದ ವ್ಯಕ್ತವಾಗುವದು.

ಸಮಾಜ ಜೀವನದಲ್ಲಿ ದುಡ್ಡು (ಧನವು) ಒಂದು ಮಹಾ ಶಕ್ತಿಯಾಗಿದೆ. ದುಡ್ಡಿನ ಸಂಗ್ರಹದಿಂದ ಮಾನವನಲ್ಲಿ ದರ್ಪ ಬೆಳೆದು ಬರುತ್ತದೆ; ಆದರೆ ನಿಜ ವಾಗಿ ಹೀಗಾಗಬಾರದು. ಧನಸಂಚಯದಿಂದ ಮಾನವನು ದರ್ಪಕ್ಕೆ ಗುರಿ ಯಾಗಿ ಧರ್ಮಕ್ಕೆ ದೂರಾಗುವದನ್ನು ಕಂಡುಹಿಡಿದು ಜ್ಞಾನಿಗಳು ಕಾಲಕಾಲಕ್ಕೆ ಹೀಗೆ ಬೋಧಿಸುತ್ತ ಬಂದರು: 'ಅಯ್ಯಾ, ಎನಿತೆನಿತು ಗಳಿಸಿದರೂ ಧನವು ನಿನ್ನ ದೊತ್ತಲ್ಲ; ನೀನು ಅದರ ತೊತ್ತಲ್ಲ. ಅದೊಂದು ವಿಶ್ವಶಕ್ತಿಯ ಆಸ್ತಿಯಾಗಿದೆ.

ಅದನ್ನು ಕಾಯುವ ಧರ್ಮದರ್ಶಿ ನೀನಾಗಬೇಕಲ್ಲದೆ ದರ್ಮರಾಶಿಯು ನಿನ್ನಲ್ಲಿರಬಾರದು.' ಇಂತು ಧರ್ಮದರ್ಶಿಯಾಗಿ ನಡೆದವರು ಎಷ್ಟು ಜನ ಸಿಕ್ಕುವರು ? ಇಡಿಯ ಜಗತ್ತಿನ ಇತಿಹಾಸದಲ್ಲಿ ಬೆರಳ ಮೇಲೆ ಎಣಿಸುವಷ್ಟು ಜನರಾದರೂ ಸಿಗುವರೆ ? ಈ ಬಗೆಯ ಧಾರ್ಮಿಕ ಬೋಧದ ಪರಿಣಾಮವೇನೂ ತೋರದ್ದರಿಂದಲೂ, ಧನಸಂಪತ್ತಿಯ ಕೇಂದ್ರೀಕರಣದಿಂದ ಸಮಾಜ ಜೀವನದಲ್ಲಿ ಬಡವ-ಬಲ್ಲಿದರೆಂಬ ಕೃತಕ ಭೇದವು ತೋರಿದ್ದರಿಂದಲೂ, ದುಡ್ಡಿನ ದುರುಪಯೋಗದಿಂದ ಅಶಾಂತಿ ಅತೃಪ್ತಿಗಳು ತಾಂಡವವಾಡುತ್ತಿದ್ದುದರಿಂದಲೂ ಆ ದುಡ್ಡಿನ ಸರಿಯಾದ ವಿನಿಯೋಗ ವ್ಯವಸ್ಥೆಗಳ ಹೊಣೆಗಾರಿಕೆಯ ಹೊಸ ವಿಚಾರವನ್ನು ಮಾಡಬೇಕಾಯಿತು. ಆ ದುಡ್ಡು ವ್ಯಕ್ತಿಯ ಸೊಮ್ಮು ಆಗದಂತೆ ಸರಕಾರದ ಮತ್ತು ಸಾರ್ವಜನಿಕರ ಸೊತ್ತು ಆಗುವಂತೆಯೂ, ವ್ಯಕ್ತಿಯ ಪ್ರಯತ್ನಕ್ಕೆ ಪ್ರತಿಫಲ ಎನ್ನುವಂತೆ ವ್ಯಕ್ತಿಗೆ ತಕ್ಕಮಟ್ಟಿಗೆ ದುಡ್ಡಿನ ಮೇಲೆ ಅಧಿಕಾರವಿರುವಂತೆಯೂ ಯೋಜನೆ ಮಾಡಬೇಕಾಗಿ ಬಂತು. ಇಂತಹ ಯೋಜನೆಯೇ ಸಾಮ್ಯವಾದ. ಸಮಾಜದಲ್ಲಿ ಉಳ್ಳವರು ಬಡವರು ಎಂಬೀ ಭೇದ ಈ ವರ್ಗೀಕರಣ ಇಂದಿನದಲ್ಲ, ಅದು ಬಹಳ ಹಿಂದಿನದು. ಕಾಯಕ ಜೀವಿಗಳ ಕೈವಾರಿಯಾದ ಬಸವಣ್ಣನು ಉಳ್ಳವರ ಬಿಗುವಿನ ಬಿಂಕವನ್ನೂ ಬಡವರ ಬೆಡಗಿನ ಭಕ್ತಿಯ ಭಾವವನ್ನೂ ತನ್ನದೊಂದು ವಚನದಲ್ಲಿ ಮನಂಬುಗುವಂತೆ ಬಣ್ಣಿಸಿದ್ದಾನೆ :

ಉಳ್ಳವರು ಶಿವಾಲಯವ ಮಾಡುವರು:
ನಾನೇನ ಮಾಡುವೆ ? ಬಡವನಯ್ಯಾ !
ಎನ್ನ ಕಾಲೇ ಕಂಬ, ದೇಹವೇ ದೇಗುಲ,
ಸಿರ ಹೊನ್ನ ಕಳಸವಯ್ಯಾ.
ಕೂಡಲ ಸಂಗಮದೇವ, ಕೇಳಯ್ಯಾ,
ಸ್ಥಾವರಕ್ಕಳಿವುಂಟು; ಜಂಗಮಕ್ಕಳಿವಿಲ್ಲಾ !

ಇಲ್ಲಿ ಸ್ಥಾವರವೆಂದರೆ ದುಡ್ಡು, ಜಂಗಮವೆಂದರೆ ದುಡಿತವೆಂಬುದು ಸ್ಪಷ್ಟವಿದೆ. ದುಡಿತವೇ ದುಡ್ಡಿನ ತಾಯಿ. ದುಡಿತವೆ ಬೆಲೆಗಳಿಗೆಲ್ಲ ತಾಯಿಬೇರು. (Labour is the sole source of values) ಎಂದು ಮಾರ್ಕ್ಸನು ಹೇಳಿರುವನು. ದುಡ್ಡಿನ ಮೇಲಿಂದಲೇ ಪದಾರ್ಥಗಳಿಗೆ ಬೆಲೆ ಕಟ್ಟುವದು ಭಾಂಡವಲುಶಾಹಿ ಪದ್ಧತಿ; ದುಡಿತದ ಮೇಲಿಂದಲೇ ಪದಾರ್ಥಗಳಿಗೆ ಬೆಲೆಗೆಯ್ಯುವದು ಸಾಮ್ಯವಾದ.

ದುಡಿತದ ಗೌರವದ ಆಧಾರದ ಮೇಲೆ ಬೆಲೆ ಕಟ್ಟುವ ಪದ್ಧತಿಯು ಒಮ್ಮೆ ರೂಢಿಯಲ್ಲಿ ಬಂದಿತೆಂದರೆ ಧನಿಕರು ದರಿದ್ರರು ಎಂಬ ಈ ವರ್ಗಕಲಹವು ಅಳಿಯುವದು, ಆರ್ಥಿಕ ಅಸಮಾನತೆಯು ಅಡಗುವದು.

ಜೀವನಕ್ಕೆ ಆಧಾರವಾದ ಆಹಾರಕ್ಕೆ ಕನ್ನಡದಲ್ಲಿ ಕೂಳು ಎಂದು ಕರೆಯುವರು. ಮಾನವನಿಗೆ ಕೂಳಿನ ಅವಶ್ಯಕತೆ ಪೂರೈಸಲ್ಪಟ್ಟ ಬಳಿಕ ಕಂದರ್ಪನ ವಿಚಾರ. ಹುಟ್ಟಿದ ಕೂಡಲೆ ಕೂಸು ಕೂಳಿಗಾಗಿ ಅಳುವದೇ ಹೊರತು ಕಾಮವಾಸನೆಯ ತೃಪ್ತಿಗಾಗಿ ಅಲ್ಲ. ಕಾಮವಾಸನೆಯು ಕಾಣಿಸಿಕೊಳ್ಳುವದು ೧೬–೨೦ ವರ್ಷಗಳಲ್ಲಿ. ಸಹಜ ಪ್ರವೃತ್ತಿಗಳಲ್ಲೆಲ್ಲ ಈ ಕಾಮಪ್ರವೃತ್ತಿಯು ಬಹಳ ಪ್ರಬಲವಾದುದಾಗಿದೆ. ಇದಕ್ಕೆ ಯೋಗ್ಯವಾದ ಒಂದು ನಿರ್ಗಮನ ಮಾರ್ಗವನ್ನು ಹುಡುಕಿ ಕೊಡಬೇಕು. ಈ ಯೋಜನೆಯೇ ಮದುವೆ, ಕಲ್ಯಾಣ. ಕಲ್ಯಾಣವೆಂದರೆ ಮಂಗಳ, ಶುಭ. ಗಂಡ ಹೆಂಡಿರ ಕಲ್ಯಾಣ ಕಾರ್ಯದ ಮುಖಾಂತರ ಲೋಕಕಲ್ಯಾಣವನ್ನು ಮಾಡುವ ಮಕ್ಕಳು ಹುಟ್ಟಬೇಕು. ಕಲ್ಯಾಣವೆಂದರೆ ಎರಡು ದೇಹಗಳ ಕೂಡಿಕೆಯಲ್ಲ, ಎರಡು ಆತ್ಮಗಳ ಹೊಂದಿಕೆ. ಸಂತಾನ ಸಂವರ್ಧನೆಗಾಗಿ, ಕುಟುಂಬ ಧಾರಣೆಗಾಗಿ, ಮಾನವ ಜೀವನದ ಸಾತತ್ಯಕ್ಕಾಗಿ (for the continuity of the human race) ಕಲ್ಯಾಣ! ಇದರಿಂದ ವಂಶಾವಳಿಯ ಪ್ರಶ್ನೆಯೂ, ಆಸ್ತಿಯ ವಿತರಣೆಯ ವಿಚಾರವೂ (the problem of descent, inheritance and succession) ಹುಟ್ಟಿಕೊಂಡವು. ಮದುವೆಗೆ ಕಲ್ಯಾಣವೆನ್ನುವದರಿಂದ ಅದು ಪವಿತ್ರವಾದ ಕಾರ್ಯವೆನಿಸಿಕೊಳ್ಳುವದು. ಅದೊಂದು ಗುತ್ತಿಗೆಯ ವ್ಯವಹಾರವಲ್ಲ. ಭಾರತೀಯರ ಮದುವೆಯ ವಿಧಾನವು ದೋಷರಹಿತವೆಂದಲ್ಲ. ಮದುವೆಯ ಕಟ್ಟಳೆಗಳಲ್ಲಿ ಕೆಲವು ಆವಶ್ಯಕ ತಿದ್ದುಪಡೆಗಳಾಗಬೇಕು. 'ಅಪುತ್ರಸ್ಯ ಗತಿರ್ನಾಸ್ತಿ' ಎಂಬುದರ ಅತಿರೇಕ ಭಾರತೀಯರನ್ನು ಕೆಡಿಸಿದೆ. ತಮ್ಮ ಒಡಲಿನಿಂದ ಹುಟ್ಟುವದರಿಂದಲೇ ಮಕ್ಕಳಲ್ಲ. ಭಕ್ತಿ ಬಾಂಧವ್ಯದಿಂದಲೂ ಮಕ್ಕಳನ್ನು ಪಡೆಯಲು ಅವಕಾಶವಿದೆ. 'ಪುನ್ನಾಮ ನರಕಾತ್ ತ್ರಾಯತೆ ಇತಿ ಪುತ್ರಃ' ಎಂದು ಹೇಳುವ ಮಾತಿನಲ್ಲಿ ಕಾಲ್ಪನಿಕ ನರಕದ ಒಂದು ಭೀತಿಯನ್ನು ನಾಟಿಸಿದ ಸಾಹಸವಿದೆ ಎಂಬುದನ್ನು ಗಮನಿಸಬೇಕು. ಜೀವನವು ಪಿತೃ ಪ್ರಧಾನವಾಗಿರಲಿ ಮಾತೃಪ್ರಧಾನವಾಗಿರಲಿ ಕುಟುಂಬ ಸಂವರ್ಧನೆಯೇ, ಸಂತತಿಯ ಬಯಕೆಯೇ ಅಲ್ಲಿ ಗುರಿಯಾಗಿದೆ. ಹಲವು ಕುಟುಂಬಗಳು ಕೂಡಿ ಕುಲ, ಹಲವು

ಕುಲಗಳು ಕೂಡಿ ಪ್ರಾಂತ, ಹಲವು ಪ್ರಾಂತಗಳಿಂದ ಒಂದು ರಾಷ್ಟ್ರ. ರಾಷ್ಟ್ರ ಜೀವನದಲ್ಲಿ ಕುಲವನ್ನು ಅಧಿಕರಿಸುವ ವರ್ಣ ಮುಖ್ಯವಲ್ಲ, ವೃತ್ತಿ ಮುಖ್ಯ ವಾಗಿದೆ. ಕಂದರ್ಪದ ಬಗೆಗಿನ ಪ್ರವೃತ್ತಿಯು ಕಲ್ಯಾಣದ ಪಾವಿತ್ರ್ಯತೆಯಲ್ಲಿ ಪರಿವರ್ತನೆಗೊಂಡು ರಾಷ್ಟ್ರಜೀವನದ ಕ್ಷೇಮಕ್ಕೆ ಅನುಕೂಲಿಸುವಂತಾಗಬೇಕು.

ಧರ್ಮವು ಭಯ ಪ್ರವೃತ್ತಿಯಲ್ಲಿ ಹುಟ್ಟಿತೆಂದು ಹೇಳುವರು. ಬಹು ಕಾಲದಿಂದ ಮಾನವನಲ್ಲಿ ಸೋಜಿಗವನ್ನು ಉದ್ದೀಪಿಸುತ್ತ ಬಂದಿರುವ ವಸ್ತು ಅನಂತ ನಕ್ಷತ್ರ ತಾರೆಗಳಿಂದ ಸುಶೋಭಿತವಾದ ಮೇಲಣ ಆಕಾಶವಾಗಿದೆ. ಮಾನವನ ಅಂತರಂಗದಲ್ಲಿ ಕರ್ತವ್ಯ ಭಾವನೆಯು ಬುಗ್ಗೆಯಂತೆ ಸ್ಫುರಿಸುತ್ತಲೂ ಇರುತ್ತದೆ. ಇದರಿಂದ ಅವನಲ್ಲಿ ಭಕ್ತಿ ಜಾಗ್ರತವಾಗಲು ಅವಕಾಶವೊದಗುತ್ತದೆ. ಭಯ ಭಕ್ತಿಗಳಲ್ಲಿ ಸೋಜಿಗವೂ ಅಂಜಿಕೆಯೂ ಬೆರೆತುಕೊಂಡಿರುತ್ತವೆ. ಈ ಸೃಷ್ಟಿಯ ಹುಟ್ಟು-ಮೆಟ್ಟುಗಳನ್ನು ಅರಿಯುವದು ಇಂದಿಗೂ ಸಾಧ್ಯವಾಗಿಲ್ಲ. ಅದು ಗುರುತ್ವಾಕರ್ಷಣ ಶಕ್ತಿಗೆ ಒಳಪಟ್ಟಿದೆಯೆಂದು ನ್ಯೂಟನ್ನನು ಹೇಳಿದರೆ ಅಲ್ಲ, ಸಾಕ್ಷೇಪ ಸಿದ್ಧಾಂತಕ್ಕೆ ಅಧೀನವಾಗಿದೆಯೆಂದು ಐನ್‌ಸ್ಟನ್ನನು ತಿಳಿಸುತ್ತಾನೆ. ಇನ್ನು ಮುಂದಿನ ವಿಜ್ಞಾನಿಯು ಯಾವ ತತ್ವದ ಹಿನ್ನೆಲೆಯುಳ್ಳದೆಂದು ಹೇಳುವನೊ ಊಹಿಸುವದೆಂತು? ಅನುಭಾವಿಯು (Mystic) ಮಾತ್ರ ಅದು ನಮಗೆ ತಿಳಿಯದ ಮಾತೆಂದು ಭಯಭಕ್ತಿಯಿಂದ ಮೌನವಾಗಿ ಬಿಡುವನು. ಕೃತಜ್ಞತೆಯನ್ನು ವ್ಯಕ್ತಗೊಳಿಸುವನು. ಅವನ ಪೂಜ್ಯ ಬುದ್ಧಿಯಲ್ಲಿ ಭಯ (awe) ಸೋಜಿಗ (wonder) ಕೃತಜ್ಞತೆ (gratitude) ಇವು ಹಾಸು ಹೊಕ್ಕಾಗಿರುತ್ತವೆ. ಈ ಮೂರು ಭಾವಗಳ ಮುಪ್ಪುರಿಯೇ ಧರ್ಮ. ಅಪಾರವಾದ ವಿಶ್ವವನ್ನು ಕಂಡು ಮಾನವನು ಮೊದಲು ವಿಸ್ಮಯಗೊಳ್ಳುವನು. ಮಳೆ ಮಿಂಚು ಗುಡುಗು ಸಿಡಿಲುಗಳ ಆರ್ಭಟೆಗೂ ಹುಟ್ಟು ಸಾವುಗಳ ಚಕ್ರಗಳಿಗೂ ಹೆದರುವನು. ಆದರೆ ನಿಸರ್ಗವು ಯಾವಾಗಲೂ ಘೋರವಾಗಿಯೂ ಕ್ರೂರವಾಗಿಯೂ ಇರದೆ ತನಗೆ ಸಹಾಯವನ್ನು ಮಾಡುವದು, ಸಂಪದವನ್ನು ನೀಡುವದು ಎಂದು ತಿಳಿದ ಮೇಲೆ ಅದರ ಬಗೆಗೆ ಅವನು ಕೃತಜ್ಞತಾ ಭಾವವನ್ನು ತಳೆಯುವನು.

'ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ವಾಯು ನಿಮ್ಮ ದಾನ; ಎತ್ತು ನಿಮ್ಮ ದಾನ, ಬಿತ್ತು ನಿಮ್ಮ ದಾನ, 'ಸುತ್ತಿ ಹರಿವ

ಸಾಗರವೆಲ್ಲ ನಿಮ್ಮ ಪಾನ ಎಂಬ ಅನನ್ಯವಾದ ಪ್ರಾರ್ಥನೆಯಲ್ಲಿ ಕೃತಜ್ಞತಾ ಭಾವವಲ್ಲದೆ ಇನ್ನೇನು ಹೊರಹೊಮ್ಮಿದೆ? ಅವನ ಈ ತೆರನಾದ ಪೂಜ್ಯ ಬುದ್ಧಿಯಲ್ಲಿ ಪೂಜೆಯ ಗೂಢವೂ ಅಡಗಿದೆ.

ಶರಧಿಯ ಮೇಲೆ ಧರೆಯ ಕರಗದಂತಿರಿಸಿದೆ,
ಅಂಬರಕ್ಕೆ ಗದ್ದುಗೆ ಬೋದುಗೆ ಇಲ್ಲದಂತಿರಿಸಿದೆ.
ಎಲೆ ನೃಡನೆ,
ನೀನಲ್ಲದೆ ಉಳಿದ ದೈವಂಗಳಿಗಹುದೆ, ರಾಮನಾಥಾ ?

ವೇದಋಷಿಗೆ ಇಂತಹ ಪೂಜ್ಯ ವಸ್ತುವು ಅಗ್ನಿಯಾಗಿದ್ದಿತು. ದೇವತೆಗಳಿಗೂ ಮಾನವರಿಗೂ ಮಧ್ಯವರ್ತಿಯಾದ ಅದರ ಮಹತ್ವದ ದೆಸೆಯಿಂದ ಅಗ್ನಿ ಪೂಜೆಗೆ ಮೊದಲಾಯಿತು. ಆಗಮಗಳಲ್ಲಿ ವಿಗ್ರಹ (ಮೂರ್ತಿ) ಪೂಜೆಯ ವಿವರಣೆಯಿದೆ; ಜೈನ ಬೌದ್ಧರಲ್ಲಿ ವಿಭೂತಿ ಪೂಜೆಯುಂಟು. ವಿಭೂತಿಯೆಂದರೆ ಸಿದ್ಧ ಪುರುಷ, ಅಪರೋಕ್ಷ ಜ್ಞಾನಿ, ಅರುಹಿನ ಮಹಾಂತ, ಜಂಗಮ ಪುಂಗವ. ಇಂದ್ರಿಯಗಳನ್ನು ಜಯಿಸಿದಾತನೇ ಜಿನ; ಬೋಧಿಯನ್ನು (Enlightenment) ಪಡೆದವನೇ ಬುದ್ಧ. ವೀರಶೈವರಲ್ಲಿ ಈ ವಿಗ್ರಹ ಹಾಗು ವಿಭೂತಿ ಪೂಜೆಗಳ ಸಮನ್ವಯವನ್ನು ಕಾಣಬಹುದು. ಲಿಂಗಪೂಜೆಯು ಸುಧಾರಿಸಿದ ಮೂರ್ತಿ ಪೂಜೆಯೆ ಎಂದು ಸಕೃದ್ದರ್ಶನಕ್ಕೆ ಅನಿಸಬಹುದು. ಆದರೆ ಲಿಂಗದ ಕಲ್ಪನೆಯ ಮರೆಯಲ್ಲಿ ಅಡಗಿದ ಗೌಪ್ಯ, ಸ್ಥಾವರ ಪೂಜೆಗಿಂತ ಜಂಗಮ ಪೂಜೆಯೇ ಅಧಿಕ ಎಂಬ ಗೂಢ ಇವುಗಳಿಂದಾಗಿ ವೀರಶೈವದಲ್ಲಿ ಒಂದು ಸಮನ್ವಯದ ನಾವೀನ್ಯತೆಯನ್ನು ಗುರುತಿಸಬಹುದಾಗಿದೆ. ಅಲ್ಲಿ ಕೇವಲ ಸೃಷ್ಟಿಯ ಬಗೆಗಿನ ಅಗಾಧ ಪೂಜ್ಯಭಾವನೆಯಾಗಲಿ, ಇಲ್ಲವೆ ಆ ಸೃಷ್ಟಿಯ ರಹಸ್ಯದ ಅರಿವನ್ನು ಬೆಳಗಿಸಿಕೊಂಡ ಕೇವಲ ಅರುಹಿನ ಮಹಂತನ ಬಗೆಗಿನ ಗೌರವಾದರಗಳಾಗಲಿ ಕಾಣದೆ ಅಂತರಂಗ ಬಹಿರಂಗಗಳನ್ನು ಶುದ್ಧೈಸಿ ಪ್ರಭಾವಿಸುವ ಸಮನ್ವಯ ಧರ್ಮಪ್ರಭೆಯೊಂದನ್ನು ಕಾಣಬಹುದಾಗಿದೆ.

ಧರ್ಮವು ವಿಶ್ವಶಕ್ತಿ ಹಾಗು ವ್ಯಕ್ತಿಯ ಸಂಬಂಧವನ್ನು ಸೂಚಿಸಿದರೆ ನೀತಿಯು ಮಾನವ ಮಾನವರಲ್ಲಿಯ ಸಮೀಚೀನವಾದ ಸಂಬಂಧವನ್ನು ವಿವರಿಸುವದು. ಮಾನವನು ಸಂಘ ಜೀವಿಯಾಗಿದ್ದುದರಿಂದ ಪರಸ್ಪರ ಸಹಕಾರ ಭಾವನೆಯಿಂದ ವರ್ತಿಸಬೇಕು. ಇಲ್ಲಿಯಾದರೂ ಭೀತಿಯ ಮೂಲಕ

ವಾಗಿಯೇ ನೀತಿಯ ಜೋಡಿ ಇರುತ್ತದೆ. ನೀತಿಯ ತಳಹದಿಯಿಲ್ಲದಿದ್ದರೆ ಸಮಾಜಕ್ಕೆ ಸುವ್ಯವಸ್ಥೆಯೂ ಶಾಂತಿಯೂ ನೆಮ್ಮದಿಯೂ ದೊರೆಯದು. ಇಷ್ಟೇ ಅಲ್ಲ, ಮಾನವನು ಸುಸಂಸ್ಕೃತನೂ ಆಗಲಾರನು. ಅಕ್ಷರ ಜ್ಞಾನದಿಂದ ಮಾನವನು ಸುಶಿಕ್ಷಿತನಾಗಬಹುದು. ಆದರೆ ಸುಶಿಕ್ಷಿತನಾದ ಪ್ರತಿಯೊಬ್ಬನು ಸುಸಂಸ್ಕೃತನೆಂದು ಹೇಳಲಿಕ್ಕಾಗದು. ಅದೆಷ್ಟೋ ಸಲ ಸುಶಿಕ್ಷಿತರೆನಿಸಿಕೊಳ್ಳುವವರೇ ತೀರಾ ಅಸಂಸ್ಕೃತಿದ್ಯೋತಕವಾದ ಕಾರ್ಯಗಳನ್ನೆಸಗಿದ್ದುಂಟು; ಅವರು ಅಂತಹ ಕಾರ್ಯಗಳನ್ನು ಮಾಡುವ ಅವಕಾಶ ಸಾಕಷ್ಟು ಉಂಟು. ಆದುದರಿಂದ ಶಿಕ್ಷಣವು ಸಂಸ್ಕೃತಿಯಲ್ಲ. ಸಂಸ್ಕೃತಿಯೆಂದರೆ ಮನಸ್ಸಿನ ಪರಿಪಾಕ. ಮನಸ್ಸು ಪರಿಪಕ್ವವಾಗಿ ತನ್ನ ಸಾವಿರ ದಳಗಳನ್ನು ಸರ್ವತ್ರ ಹರಡಿ ಸೃಷ್ಟಿಯಲ್ಲಿ ಸತ್ಯವನ್ನು, ಸೌಂದರ್ಯವನ್ನು, ಶಾಂತಿಯನ್ನು, ಕಾಂತಿಯನ್ನು, ನಿಯಮವನ್ನು, ನ್ಯಾಯವನ್ನು ಕಾಣುವದು; ಅಲ್ಲದೆ ಅವನ್ನೆಲ್ಲ ನೆಲೆಗೊಳಿಸಲು ಹವಣಿಸುವದು, ಹೆಣಗುವದು. ನೀತಿಯ ನೆಲೆಗಟ್ಟಿಲ್ಲದೆ ಹಾಗೆ ಮಾಡಲು ಮಾನವನಿಗೆ ಸಾಧ್ಯವಿದೆಯೆ ? ಈ ಸತ್ಯ ಸೌಂದರ್ಯ ಶಾಂತಿ ನಿಯಮಗಳು ಒಂದೊಂದು ರೂಪ ತಳೆದು ಶಾಸ್ತ್ರ ಕಲೆಗಳಾಗಿ ಮಾರ್ಪಟ್ಟವು. ಬಹು ಮುಖವಾದ ಮನವು ಬಹು ಸ್ವರೂಪಗಳಲ್ಲಿ ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳುವದು. ಆದುದರಿಂದಲೇ ತೋರಿಕೆಗೆ ಹಲವು ಶಾಸ್ತ್ರಗಳು ಹಲವು ಕಲೆಗಳು ಎಂದು ಕಂಡರೂ ಅವುಗಳ ಗುರಿ ಒಂದೇ ಒಂದಾಗಿದೆ. ಅದುವೆ ಸತ್ಯಾನ್ವೇಷಣೆ, ಸತ್ಯದ ಸಾಕ್ಷಾತ್ಕಾರ. ಇಂತಹ ಸಾಕ್ಷಾತ್ಕಾರಕ್ಕೆ ಕುಟುಂಬವು ಮೊಟ್ಟಮೊದಲಿನ ಪಾಠಶಾಲೆ. ಮೃದುಮಧುರವಾದ ಬಾಂಧವ್ಯವು ಮೊಳೆಯುವದು ಇಲ್ಲಿಂದಲೇ. ತಾಯಿ-ತಂದೆ, ಸತಿ-ಪತಿ, ಅಣ್ಣ-ತಮ್ಮ, ಅಕ್ಕ-ತಂಗಿ, ಭಾವ-ಮೈದುನ, ಅತ್ತಿಗೆ-ನಾದಿನಿ, ಅಳಿಯ-ಸೊಸೆ— ಹೀಗೆ ಹಲವು ತೆರನಾದ ಬಾಂಧವ್ಯವನ್ನು ಕುಟುಂಬ ಜೀವನದಲ್ಲಿ ನಾವು ಕಾಣಬಲ್ಲೆವು. ಅಲ್ಲದೆ ಈ ಬಾಂಧವ್ಯವನ್ನು ಅನುಭವಿಸುವೆವು. ಈ ಮೃದು ಮಧುರ ಬಾಂಧವ್ಯದ ಪರಿಣಾಮವಾಗಿ ಸಹಕಾರ, ಸಹಾನುಭೂತಿ, ಭೂತದಯೆ, ಅನುಕಂಪ, ಸ್ವಾರ್ಥತ್ಯಾಗ, ಕಷ್ಟಸಹಿಷ್ಣುತೆ— ಈ ಮುಂತಾದ ಸದ್ಗುಣಗಳು ಕೊನರೊಡೆಯುವವು. 'ನೀತಿಯ ದೆಸೆಯಿಂದ' ವಿಕಸಿತವಾಗುವ ಈ ಸದ್ಗುಣಗಳೇ ವ್ಯಕ್ತಿಜೀವನಕ್ಕೂ ಸಮಾಜದ ಸುಸ್ಥಿರತೆಗೂ ರಾಷ್ಟ್ರಧರ್ಮಕ್ಕೂ ಅಡಿಗಲ್ಲುಗಳಾಗಿ ಪರಿಣಮಿಸುವವು. ಆದುದರಿಂದ ಸುಸಂಸ್ಕೃತ ಕುಟುಂಬ ಜೀವನವು ರಾಷ್ಟ್ರೀಯತೆಗೆ ಭದ್ರವಾದ ತಳವಾಗಿರುತ್ತದೆ.

ಭಾರತೀಯರ ತಿಳಿವಳಿಕೆಯಲ್ಲಿ ಇನ್ನುಳಿದ ಒಂದು ಪ್ರವೃತ್ತಿ ನಿಷ್ಕ್ರಿಯವಾಗಿದೆ. ಪಡುವಣದ ಮನೋವಿಜ್ಞಾನಿಗಳಲ್ಲಿ ಅಧಿಕಾರ ಪ್ರವೃತ್ತಿಗೆ ಪ್ರಾಮುಖ್ಯತೆಯುಂಟು. ಅವರ ಈ ಅಧಿಕಾರ ಪ್ರವೃತ್ತಿಯು ಇಂದಿನ ವಿಜ್ಞಾನದ ಬೆಳವಣಿಗೆಯಲ್ಲಿ ಅತ್ಯುಚ್ಚಾಯ ಸ್ಥಿತಿಯನ್ನು ಪಡೆದಿರುವುದನ್ನು ಕಾಣಬಹುದು. ವಿಜ್ಞಾನವಾದರೊ, ಮಾನವನ ಬುದ್ಧಿಯ ವಿಕಾಸದ ದ್ಯೋತಕವೂ ವಿಜಯವೂ ಆಗಿದೆ. ಕಟ್ಟಿಗೆಯ ಮೇಲೆ ಕಟ್ಟಿಗೆಯನ್ನಿಟ್ಟು ಪೆಟ್ಟಿಗೆಯನ್ನು ಮಾಡಿದುದು ಮಾನವನ ಬುದ್ಧಿಯೇ. ಅಣು ಅಣುಗಳನ್ನು ಬೇರ್ಪಡಿಸಿ ತನ್ಮೂಲಕ ಅತ್ಯದ್ಭುತ ಶಕ್ತಿಯನ್ನು ವ್ಯಕ್ತಗೊಳಿಸುವ ಅಣುಬಾಂಬನ್ನು ಸಿದ್ಧಗೊಳಿಸಿದುದೂ ಮಾನವ ಬುದ್ಧಿಯೇ. ಅಣುಬಾಂಬಿಗಿಂತ ಅಧಿಕ ಸಾಮರ್ಥ್ಯವುಳ್ಳ ಹಾಯ್‌ಡ್ರೋಜನ್ ಬಾಂಬನ್ನು ನಿರ್ಮಿಸಿದುದು ಅವನ ಬುದ್ಧಿಯೇ. ಬುದ್ಧಿಸಾಮರ್ಥ್ಯದಿಂದ ಪಡೆದ ವಿಜ್ಞಾನದ ಮೂಲಕವಾಗಿ ಅಧಿಕವಾದ ಶಕ್ತಿ, ಅಪಾರವಾದ ಅಧಿಕಾರ ಪ್ರವೃತ್ತಿಯೇನೋ ಬೆಳೆದುವು. ಆದರೆ ಶಾಂತಿ ಎಲ್ಲಿಯೋ ಕೊಸರಿಕೊಂಡು ಹೋಯಿತು! ಶಕ್ತಿಯು ಅಂಧವಾಗಿದೆ; ಅದಕ್ಕೆ ತಾರತಮ್ಯ ಜ್ಞಾನವಿಲ್ಲ. ಅಂತೆಯೇ ಶೈವ ದರ್ಶನದಲ್ಲಿ ಶಕ್ತಿಯನ್ನು ಶಿವನಿಗೆ ಅಧೀನಗೊಳಿಸಲಾಗಿದೆ. ಶಿವನು ಸಮಾಧಿಸ್ಥನು ಎಂದರೆ ಶಾಂತನು, ಪ್ರಕಾಶಮಯನು, ಸರ್ವಜ್ಞನು. ಶಾಂತಿಗೆ, ಪ್ರಕಾಶಮಯವಾದ ಶಾಂತಿಗೆ ಕುರುಡು ಶಕ್ತಿಯು ಅಧೀನವಾಗಿರಬೇಕೆಂದು ಸ್ಪಷ್ಟವಾಗುವದು. ಮಾನವನ ಬುದ್ಧಿಶಕ್ತಿಯ ವಿಕಾಸವನ್ನೂ ಪ್ರಪಂಚದ ಮೇಲಣ ಅದರ ವಿಜಯ ಅಥವಾ ವಿಕಾಸವನ್ನೂ ವಿಜ್ಞಾನವು ಇಂದು ಸಾರಿ ಹೇಳುತ್ತಿದ್ದರೂ ಅದರ ಪರಿಣಾಮವು ಎಂತಹದಾಗಿದೆ? ಅದು ಇಂದು ಮಾನವನ ಕೈಯಲ್ಲಿ ಮಾರಕ ಅಸ್ತ್ರಗಳನ್ನು ಇಟ್ಟಿದೆ. ವಿಜ್ಞಾನವು ತಾರಕವಾಗುವ ಬದಲು ಮಾರಕವಾಗಹತ್ತಿದೆ ಎಂದು ಜನತೆ ತಲ್ಲಣಿಸತೊಡಗಿದೆ, ಸಿಡಿಮಿಡಿಗೊಳ್ಳಹತ್ತಿದೆ. ಮಾನವ ಕುಲವನ್ನೇ ನಿರ್ನಾಮಗೊಳಿಸುವಂತಹ ಮಾರಕ ಶಕ್ತಿಯು ನಮಗೆ ಬೇಡವೆಂದು ಜನತೆ ಒಕ್ಕೊರಲಿನಿಂದ ಕೂಗತೊಡಗಿದೆ; ಪ್ರಪಂಚದಲ್ಲಿ ನೆಮ್ಮದಿಯಾಗಿ ಬಾಳುವಂತಹ ತಾರಕ ಶಾಂತಿ ನಮಗಿಂದು ಬೇಕಾಗಿದೆ ಎಂದು ಲೋಕವೆಲ್ಲ ಹಂಬಲಿಸುತ್ತಿದೆ. ಆದರೆ ಈ ಶಾಂತಿ ಎಲ್ಲಿದೆ?

ಶಾಂತಿಯು ಎಲ್ಲಿದೆ ಎಂದು ಒಬ್ಬನು ಐನ್‌ಸ್ಟೈನ್ನನನ್ನು ಕೇಳಿದನಂತೆ. ಅದು ನಿಮ್ಮಲ್ಲಿಯೇ ಇದೆಯೆಂದು ಆತ ಹೇಳಿದನಂತೆ. ಅಧ್ಯಾತ್ಮವು ಈ

ಮಾತನ್ನು ಮಾನವನಿಗೆ ಎಂದಿನಿಂದಲೋ ಹೇಳುತ್ತ ಬಂದಿದೆ. ನಿದ್ರೆಯು ಒಂದು ಪ್ರಬಲವಾದ ಪ್ರವೃತ್ತಿಯೆಂದು ತಿಳಿಯುವ ಕಾರಣವೇನು? ಗಾಢ ನಿದ್ರೆಯಲ್ಲಿ ವೃತ್ತಿಗಳೆಲ್ಲ ಲಯವನ್ನು ಪಡೆಯುವವು. ಅದರಿಂದ ಮಾನವನಲ್ಲಿ ಒಂದು ನಿಶ್ಚಿಂತ ಪ್ರವರ್ತನೆಯು, ಪರಮ ಶಾಂತಿಯ ಅನುಭವವು ಮೊಳೆಯುವದು. ಈ ಶಾಂತಿಗೆ ನಿರ್ವಾಣವೆಂದೂ ಮೋಕ್ಷವೆಂದೂ ಪರ್ಯಾಯ ನಾಮಗಳುಂಟು. ಮಾನವನಿಗೆ ಮೋಕ್ಷದ ಕಲ್ಪನೆ ಹುಟ್ಟಿದ್ದು ಅವನ ಸಹಜಪ್ರವೃತ್ತಿಯಾದ ನಿದ್ರೆಯಿಂದಲೇ. ನೀತಿ ಭೀತಿಯ ಮೀರಿ ನಿಂದು ನೋಡುವ ಕಲೆ ಸಾಧ್ಯವಾಗುವದು ಪರಂಜ್ಯೋತಿಸ್ವರೂಪ ತಾನಾದಾಗ. ತನ್ನಲ್ಲಿ ಅದರ ಜ್ಯೋತಿಯನ್ನು ಕಂಡು ಅದನ್ನು ಸಾಕ್ಷಾತ್ಕರಿಸಿಕೊಳ್ಳುವದೇ ಮೋಕ್ಷ ಎಂದು ಇದನ್ನೇ ಇನ್ನೊಂದು ವಿಧವಾಗಿ ಹೇಳಬಹುದು. ನಿದ್ರೆಯ ಅನುಭವವು ಇದನ್ನು ಸಾಧಿಸಿ ಕೊಡುವದು. ಮೋಕ್ಷದಲ್ಲಿ ಪ್ರಕಾಶ ಹಾಗೂ ಶಾಂತಿ ಇವೆರಡೂ ಇರುವವು. ವೃತ್ತಿಗಳಳಿದಾಗಲೇ ಪ್ರಕಾಶವು ತಲೆದೋರಿ ಶಾಂತಿಯು ಮೈದೋರುವುದರಿಂದ ಸಾಧನದಿಂದ ವೃತ್ತಿಲಯ ಸಾಧಿಸಿಕೊಂಡಾಗ ಪ್ರಕಾಶ ಶಾಂತಿಗಳು ಕೈಸೇರುವವೆಂದು ಮನಗಂಡರು ಅನುಭಾವಿಗಳು. ಅಂತರಿಕ್ಷ ನಿಲ್ದಾಣದ ಮಾತನ್ನು ನಾವಿಂದು ಕೇಳುತ್ತಿದ್ದೇವೆ. ಭೂಮಿಯಿಂದ ೧೦೭೫ ಮೈಲುಗಳ ಆಚೆಗೆ ಗಾಳಿಯ ಸುಳಿವೇ ಇಲ್ಲ, ಅದು ನಿವಾತಸ್ಥಾನ. ಹಾಗೆಯೇ ಮಾನವನ ದೇಹದಲ್ಲಿ ಕೊನೆಯ ಚಕ್ರವಾದ ಸಹಸ್ರಾರದಲ್ಲಿ ವಾಯುವಿನ ಸುಳಿವಿಲ್ಲ. ಬ್ರಹ್ಮರಂಧ್ರದಲ್ಲಿ ದೃಷ್ಟಿಯನ್ನಿಟ್ಟು ಧ್ಯಾನ ಮಾಡಲು ಮಾನವನು ಸಾಧಿಸಿದರೆ ಆಗ ಅವನಿಗೆ ನಿಃಶಬ್ದ ನೀರವ ಶಾಂತಿಯು ಅಳವಡುವದು. ಈ ಶಾಂತಿಯು ತನ್ನಲ್ಲಿಯೇ ಇರುವದು; ಬೇರೆಡೆಗೆ ಅದನ್ನು ಹುಡುಕಬೇಕಾಗಿಲ್ಲ; ಅಂತರ್ಮುಖಿಯಾಗಿ ಮಾತ್ರ ಅದನ್ನು ಕಂಡುಕೊಳ್ಳಬೇಕು. ಇಷ್ಟೇ ಅಲ್ಲ, ಈ ಶಾಂತಿಯನ್ನು ಕಂಡುಂಡು ಇನ್ನೊಬ್ಬರಿಗೆ ಇದನ್ನು ದಾನ ಮಾಡಲಿಕ್ಕೂ ಕಲಿಯಬೇಕು. ಜಗತ್ತಿನ ಇತಿಹಾಸದಲ್ಲಿಯೇ ಹಿಂದೆಂದೂ ಕಾಣದಂತಹ ತವಕದಿಂದ ಇಂದು ಜಗತ್ತು ಶಾಂತಿಗಾಗಿ ಹಂಬಲಿಸುತ್ತದೆ. ನಮಗಿಂದು ಬೇಕಾದುದು ಈ ಪರಮ ಶಾಂತಿ ಈ ನಿಃಶಬ್ದ ನೀರವ ಶಾಂತಿ! ನಾವು ಇದನ್ನು ಅಳವಡಿಸಿಕೊಳ್ಳಲಾರೆವೆ?

---

# ಶಿವಯೋಗ ರಹಸ್ಯ

ನಾವು ಯಾವ ಮಾರ್ಗದಿಂದ ಹೋದರೂ ಗುರಿ ಒಂದೇ ಎಂದು ಹೇಳುವುದುಂಟು. ಮೋಕ್ಷ ಇಲ್ಲವೆ ಮುಕ್ತಿ ಇದುವೆ ಜೀವನದ ಹೆಗ್ಗುರಿ. ಮುಕ್ತಿ ಎಂದರೆ ಬಿಡುಗಡೆ. ವಿಷಯಗಳಿಂದ ಇಂದ್ರಿಯಗಳನ್ನು ಬಿಡಿಸಿಕೊಂಡು, ಪರವಸ್ತುವಿನಲ್ಲಿ ಅವನ್ನು ತೊಡಕಿಸುವದು ಮೋಕ್ಷ ಅಥವಾ ಮುಕ್ತಿ ಪದದಲ್ಲಿ ಅಡಗಿರುವ ಅರ್ಥದ ಗೂಢವಾಗಿದೆ. ಈ ಮುಕ್ತಿಯನ್ನು ಚತುರ್ವಿಧವಾಗಿ ಬಣ್ಣಿಸುವದುಂಟು ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಎಂದು. ಪರಮಾತ್ಮನ ಲೋಕದಲ್ಲಿಯೇ ವಾಸಿಸುವ ಅರ್ಹತೆಯನ್ನು ಪಡೆಯುವದು ಸಾಲೋಕ್ಯ, ಆತನ ಸಮೀಪದಲ್ಲಿಯೇ ಇರುವದು ಸಾಮೀಪ್ಯ, ಆತನ ರೂಪವೇ ಜೀವನ ರೂಪವಾಗುವದು ಸಾರೂಪ್ಯ ಮತ್ತು ಆತನೊಡನೆ ಒಂದಾಗಿ ಒಡವೆರೆಯುವದು ಸಾಯುಜ್ಯ. ಈ ಚತುರ್ವಿಧ ಮುಕ್ತಿಗಳಿಗೆ ಚತುರ್ವಿಧ ಫಲಪದವಿಗಳೆಂದೂ ಹೆಸರು. ಜಗತ್ತು ಮಾಯಾಮಯ; ಜೀವನು ದೇಹ ತೊಟ್ಟು ಇಲ್ಲಿಗೆ ಬರುವದು ಒಂದು ಬಂಧನ; ಅವನು ಇಲ್ಲಿ ಅನಂತವಾದ ಈತಿ ಬಾಧೆಗಳ ಉರುಳಿಗೆ ಸಿಲುಕುವನು ಇದೂ ಒಂದು ಬಂಧನ; ಈ ಬಂಧನದಿಂದ ಪಾರಾಗಲು ಪುಣ್ಯಕಾರ್ಯಗಳನ್ನೆಸಗಬೇಕು; ಇಂತಹ ಕಾರ್ಯವಿಶೇಷಗಳ ಗಾಢವಾದ ಫಲಾನುಗುಣವಾಗಿ ಚತುರ್ವಿಧ ಫಲಪದವಿಗಳಲ್ಲಿ ಇಲ್ಲವೆ ಮುಕ್ತಿಗಳಲ್ಲಿ ಯಾವುದಾದರೊಂದನ್ನು ಹೊಂದಲು ಜೀವನು ತವಕಪಡುವನು, ತಕ್ಕವನಾಗುವನು—ಎಂಬ ವಿಚಾರ ಪ್ರಣಾಲಿಕೆಯು ಮುಕ್ತಿಯ ಈ ಕಲ್ಪನೆಯಲ್ಲಿ ಬಹು ಪ್ರಾಮುಖ್ಯವಾಗಿರುತ್ತದೆ. ಆದರೆ ವಿವಿಧ ಮುಕ್ತಿಗಳ ಸೂಕ್ಷ್ಮವಾದ ವಿಶ್ಲೇಷಣಕ್ಕಾಗಲಿ, ಅವುಗಳಲ್ಲಿ ಹುದುಗಿದ ಮೂಲ ಕಲ್ಪನೆಗಾಗಲಿ ಯೋಗದಲ್ಲಿ ಮಹತ್ವವಿಲ್ಲ. ಈ ಅವಸ್ಥಾ ವಿಶೇಷಗಳು ಪ್ರಯತ್ನಪೂರ್ವಕವಾಗಿ ಸಾಧ್ಯವಾಗಬಹುದು. ಆದರೆ ಹೀಗೆ ಅವನ್ನು ಸಾಧ್ಯಮಾಡಿಕೊಳ್ಳುವದೇ ಯೋಗಸಾಧನೆಗೆ ಆತ್ಯಂತಿಕವಾದ ಉದ್ದೇಶವಲ್ಲ; ಇವಕ್ಕಿಂತ ವಿಭಿನ್ನವಾದ ಪ್ರಗತಿಪರ ಅವಸ್ಥೆಯೊಂದನ್ನು ಪಡೆಯುವದು ಯೋಗದ ದೃಷ್ಟಿಕೋನವಾಗಿರುತ್ತದೆ.

ಯೋಗ ಶಬ್ದವು 'ಯುಜ್—ಕೂಡು, ಒಂದಾಗು, ಬೆರೆ' ಎಂಬ ಧಾತುವಿನಿಂದ ಹುಟ್ಟಿರುತ್ತದೆ. ಆದ್ದರಿಂದ ಯೋಗ ಶಬ್ದದಿಂದ ಸಂಯೋಗ ಕೂಡಿಕೆ

ಎಂಬ ಅರ್ಥನಿಷ್ಪತ್ತಿಯಾಗುತ್ತದೆ. ಆಧ್ಯಾತ್ಮಿಕ ಅರ್ಥದಲ್ಲಿ ಆತ್ಮ-ಪರಮಾತ್ಮರ ಸಂಯೋಗವನ್ನುಂಟುಮಾಡುವ ಕ್ರಮಕ್ಕೆ ಅಥವಾ ಸಾಧನೆಗೆ ಯೋಗವೆಂದು ಹೆಸರು. ಭಿನ್ನ ಭಿನ್ನ ಮತಪಂಥಗಳಿಗನುಗುಣವಾಗಿ ಈ ಸಂಯೋಗದ ಸ್ವರೂಪವು ಬೇರೆ ಬೇರೆಯಾಗಿದೆ. ಅಲ್ಲಿ ಯೋಗಶಬ್ದಕ್ಕೆ ವಿವಿಧವಾದ ಅರ್ಥ ಗಳನ್ನೂ ಕಾಣಬಹುದಾಗಿದೆ. ದ್ವೈತ ಮತ್ತು ವಿಶಿಷ್ಟಾದ್ವೈತ ಸಿದ್ಧಾಂತಗಳಲ್ಲಿ ಆತ್ಮನು ಪರಮಾತ್ಮನಿಗಿಂತ ಪ್ರತ್ಯೇಕವಾಗಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ಆ ಸಿದ್ಧಾಂತಗಳಲ್ಲಿ ಈ ಎರಡರ ಮಧುರವಾದ ಮಿಲನವೇ ಯೋಗವೆನಿಸಿದೆ. ಅದ್ವೈತ ಸಿದ್ಧಾಂತದ ಮೇರೆಗೆ ಆತ್ಮ ಪರಮಾತ್ಮರಲ್ಲಿ ಭಿನ್ನತೆಯೇ ಇಲ್ಲ, ಆದ್ದರಿಂದ ಆತ್ಮವು ಪರಮಾತ್ಮನಲ್ಲಿ ಅಭಿನ್ನತೆಯನ್ನು ಕಾಣುವದೇ ಅಲ್ಲಿ ಯೋಗ ವೆನಿಸುವದು. ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಕ್ರಿಯೆಯಲ್ಲಿ ವಾಸ್ತವಿಕವಾಗಿ ಜೀವ-ಶಿವರು, ಆತ್ಮ-ಪರಮಾತ್ಮರು ಒಂದೇ ಆಗಿದ್ದಾರೆ ಎಂದು ಹೇಳಲಾಗಿದೆ. ಕೆಲವು ಅವಧಿಯವರೆಗೆ ಮಾತ್ರ ಪ್ರತ್ಯೇಕವಾಗಿ ತೋರುವ ಈ ವಿಭಿನ್ನತೆಯನ್ನು ಪರಿಹರಿಸಿಕೊಂಡು ಯೋಗಸಾಧನೆಯಿಂದ ಯೋಗಿಯು ಶಿವ-ಜೀವರ ಐಕ್ಯತೆ ಯನ್ನು ಸಾಧಿಸುತ್ತಾನೆ. ಮಾಯೆಯ ಮೂಲಕವಾಗಿ ಆತ್ಮನಿಗೆ ಸ್ವರೂಪಜ್ಞಾನದ ವಿಸ್ಮೃತಿಯೊದಗಿದೆ. ಇದರಿಂದಾಗಿ ಆತ್ಮನು ತನ್ನ ಮೂಲಸ್ವರೂಪವನ್ನು ಮರೆತು, ಆಣವ ಮಾಯಾ ಮತ್ತು ಕರ್ಮ ಎಂಬ ಮೂರು ತೆರನಾದ ಮಲಗ ಳಿಂದಲೂ ಕಾಲ ನಿಯತಿ ರಾಗ ವಿದ್ಯಾ ಮತ್ತು ಕಲಾ ಎಂಬ ಪಂಚಕಂಚುಕ ಗಳಿಂದಲೂ ಆವರಿಸಲ್ಪಟ್ಟಿದ್ದಾನೆ. ಯೋಗಸಾಧನೆಯಿಂದ ಆತ್ಮನು ಇವನ್ನು ಪರಿಹರಿಸಿಕೊಂಡು ಸ್ವರೂಪಜ್ಞಾನವನ್ನು ಪಡೆದು ಪರಮಾತ್ಮನೊಡನೆ ಸಾಮರಸ್ಯ ವನ್ನು ಹೊಂದುವುದೇ ಶಕ್ತಿವಿಶಿಷ್ಟಾದ್ವೈತದಲ್ಲಿ ಯೋಗವೆನಿಸಿಕೊಳ್ಳುವದು.

ಭಗವದ್ಗೀತೆಯಲ್ಲಿ ಯೋಗದ ಹಲವಾರು ಸ್ವರೂಪಗಳನ್ನು ಕುರಿತು ವಿವೇಚಿಸಲಾಗಿದೆ. ಹಾಗೆಯೇ ಶಿವಾಗಮಗಳ ಮೂರನೆಯ ಪಾದಕ್ಕೆ ಯೋಗ ಪಾದವೆಂದು ಹೆಸರು. ಈ ಯೋಗಪಾದದಲ್ಲಿ ಮುಕ್ತಿಗೆ ಸಾಧನವೆಂಬ ವಿಚಾರ ದಲ್ಲಿ ಯೋಗದ ವಿವರಣೆಯನ್ನು ಮಾಡಲಾಗಿದೆ. ಶ್ವೇತಾಶ್ವತರ ಉಪನಿಷತ್ತಿ ನಲ್ಲಿಯೂ ಸಹ ಸಂಕ್ಷೇಪವಾಗಿ ಯೋಗದ ವರ್ಣನೆಯನ್ನು ಕೊಡಲಾಗಿದೆ. ಯೋಗದ ಸುಸಂಬದ್ಧವಾದ ನಿರೂಪಣೆಯನ್ನು ಪಾತಂಜಲಿ ಮಹರ್ಷಿಯು ತನ್ನ ಯೋಗಸೂತ್ರಗಳಲ್ಲಿ ಕೊಟ್ಟಿರುತ್ತಾನೆ. ಭಾರತೀಯ ಷಡ್ದರ್ಶನಗಳಲ್ಲಿ ಯೋಗವೂ ಒಂದು ದರ್ಶನವಾಗಿದೆ. ಪಾತಂಜಲಿಯು 'ಯೋಗಃ ಚಿತ್ತವೃತ್ತಿನಿರೋಧಃ'

ಎಂದರೆ ಚಿತ್ತದಲ್ಲಿ ಮೂಡಿಕೊಂಡಿರುವ ವೃತ್ತಿಗಳನ್ನು ನಿರೋಧಗೊಳಿಸಿ ಅಂಕಿತ ದಲ್ಲಿಟ್ಟುಕೊಳ್ಳುವುದೇ ಯೋಗ, ಅದರಿಂದ ಆತ್ಮತತ್ವದ ಜ್ಞಾನವು ಲಭಿಸುವದು ಎಂದು ಹೇಳುತ್ತಾನೆ. ಮನಸ್ಸಿನ ಸ್ಥಿರತೆ ಮತ್ತು ಶಾಂತಿಗಳಿಂದ ಅಜ್ಞಾನದ ಕತ್ತಲೆಯು ಕಳಚುವದು; ಅದರಿಂದ ಆತ್ಮನು ಬಂಧನದಿಂದ ಬಿಡುಗಡೆಯನ್ನು ಪಡೆಯುವನು ಎಂದು ಪಾತಂಜಲಿ ಋಷಿಯ ಅಭಿಮತವಾಗಿದೆ. ಭಾರತೀಯ ಎಲ್ಲ ಧರ್ಮ ಮತ್ತು ದರ್ಶನಗಳ ಅನುಸಾರವಾಗಿ ಮನವು ಒಂದು ಬಹು ಸೂಕ್ಷ್ಮವಾದ ಭೌತಿಕ ವಸ್ತುವಾಗಿದೆ. ಸೂಕ್ಷ್ಮವಾದ ಆಕಾಶಕ್ಕಿಂತಲೂ ಇದು ಸೂಕ್ಷ್ಮವಾಗಿದೆ. ಆದರೂ ಭೌತಿಕವಾದ ಪದಾರ್ಥಗಳಂತೆ ಮನವೂ ಜಡವಾಗಿದೆ. ಚೈತನ್ಯದ ಸಹಾಯದಿಂದ ಮಾತ್ರ ಅದರ ಸ್ವರೂಪವು ಗೊತ್ತಾಗುತ್ತದೆ. ಜಡ ವಾದ ಮನದ ಆಚೆಗೆ ಚೈತನ್ಯಸ್ವರೂಪವಾದ ಆತ್ಮವಿರುತ್ತದೆ. ಶಿವಾಗಮದಲ್ಲಿ 'ಚಿತ್ತೆ ಚಲತಿ ಸಂಸಾರೋ ನಿಶ್ಚಲೆ ಮೋಕ್ಷ ಏವ ಚ'— ಎಂದರೆ ಈ ಮನಸ್ಸು ಈ ಚಿತ್ತವು ಚಂಚಲವಾಗಲು ಸಂಸಾರ ವ್ಯಾಪ್ತಿಯೂ ಅದು ನಿಶ್ಚಲಗೊಳ್ಳಲು ಮೋಕ್ಷಪ್ರಾಪ್ತಿಯೂ ಉಂಟಾಗುವವು ಎಂದು ಹೇಳಿ ಯೋಗಾನುಸಂಧಾನದಿಂದ ಸಂಸಾರವ್ಯಾಪ್ತಿಯ ಬಿಡುಗಡೆಯ ಕೀಲವನ್ನು ವಿವರಿಸಲಾಗಿದೆ.

ಮಾನವನ ಭದ್ರವಾದ ಭೌತಿಕ ಶರೀರದ ರಚನೆಯಲ್ಲಿ ಯೋಗದ ಅಸ್ತಿವಾರವನ್ನು ಹಾಕಲಾಗಿದೆ. ಮಾನವ ಶರೀರದಲ್ಲಿಯ ನರಮಂಡಲದ ಮೂಲಕವಾಗಿ ಮನಸ್ಸಿಗೂ ಶರೀರಕ್ಕೂ ಸಂಬಂಧವುಂಟಾಗಿರುತ್ತದೆ. ಈ ನರ ಮಂಡಲದ ಬೊಡ್ಡೆಯೆನಿಸಿದ ಮೇರುದಂಡ ಅಥವಾ ಬೆನ್ನುಹುರಿಯು ಕೆಳಗಿನ ತುದಿಯಾದ ಮೂಲ ಆಧಾರದಿಂದ ಹೊರಟು ಮೆದುಳಿನ ಎಲ್ಲಕ್ಕೂ ಮೇಲಿನ ಕೊನೆಯಾದ ಸಹಸ್ರಾರವನ್ನು ಸೇರುತ್ತದೆ. ಈ ದೆಸೆಯಿಂದ ಮಾನವನಿಗೆ ಕೆಳ ಗಿನ ತುದಿಯಲ್ಲಿ ಭೂಮಿಯ ಮಗುವೆಂದೂ, ಮೇಲಿನ ಕೊನೆಯಲ್ಲಿ ಸ್ವರ್ಗದ ಶಿಶುವೆಂದೂ ಕರೆಯಬಹುದಾಗಿದೆ. ಮನುಷ್ಯನ ದೇಹವು ಒಂದು ಅದ್ಭುತ ವಾದ ರಚನೆಯಾಗಿದೆ. ಇದನ್ನು ಸಜೀವಗೊಳಿಸುವ ವಿವಿಧ ಸಂಯೋಜನೆಗಳು ಅದರಲ್ಲಿಯ ಅಂಗಾಂಗಗಳ ಒಳ್ಳೇ ಮನೋಹರವಾದ ರಚನೆಯನ್ನೂ ಮತ್ತು ಅದರ ಚಾಲನೆಯಲ್ಲಿಯ ಅಪಾರವಾದ ಚಾತುರ್ಯವನ್ನೂ ವ್ಯಕ್ತಗೊಳಿಸುತ್ತವೆ. ಈ ಸಂಯೋಜನೆಗಳಲ್ಲಿ ಕೇಂದ್ರ ನರಮಂಡಲವೂ ಮತ್ತು ಅದರ ಬೊಡ್ಡೆಯಂತೆ ಇರುವ ಬೆನ್ನುಹುರಿಯೂ ಹಾಗು ದೇಹದ ನಾನಾಭಾಗಗಳಲ್ಲಿ ಹಬ್ಬಿ ಹರಿವರಿದ

ಅದರ ಅಸಂಖ್ಯ ಶಾಖೆ ಉಪಶಾಖೆಗಳೂ ಬಹಳ ಮಹತ್ವವನ್ನು ಪಡೆದಿರುತ್ತವೆ. ಅಲ್ಲದೆ ಅವು ಬಹಳ ಗೂಢವೂ ಆಗಿವೆ. ನರಮಂಡಲದಿಂದ ದೇಹಕ್ಕೆ ಒಂದು ಗಿಡದ ಹೋಲಿಕೆಯುಂಟಾಗುತ್ತದೆ. ಈ ಗಿಡದಲ್ಲಿ ಅರಳುವ (ಕಮಲ) ಪುಷ್ಪಗಳಿಗೆ ಚಕ್ರಗಳೆಂದು ಹೆಸರು. ಈ ಗಿಡದ ಬೇರೆ ಬೇರೆ ಸ್ಥಳಗಳಲ್ಲಿ ಇರುವ ಗಂಟುಗಳಿಗೆ ನಿರ್ನಾಳ ಗ್ರಂಥಿಗಳೆಂದು ಕರೆಯುತ್ತಾರೆ. ಈ ಗಿಡಕ್ಕೆ ಬಿಡುವ ಹಣ್ಣು ಇದರ ತುಟ್ಟತುದಿಯಲ್ಲಿ ಇರುತ್ತದೆ. ಇದು ಅತ್ಯದ್ಭುತವಾದ ಅಮೃತ ಫಲವಾಗಿದೆ. ಯಾಕಂದರೆ ಇದು ಅಮೃತ ರಸದ (Cerebro-spinal fluid) ಮಳೆಯನ್ನೂ ಸುರಿಸುವದಲ್ಲದೆ ಸುತ್ತೆಲ್ಲ ಆನಂದದ ಮಧುರ ವಾಸನೆಯನ್ನು ಹರಡುವದು. ಈ ವೃಕ್ಷದ ಹೂ-ಹಣ್ಣುಗಳು ಬಾಹ್ಯದೃಷ್ಟಿಗೆ ಗೋಚರಿಸುವುದಿಲ್ಲ. ಇದರ ಶಾಖೆ ಉಪಶಾಖೆಗಳು ಮಾತ್ರ ಕಣ್ಣಿಗೆ ಕಾಣಿಸುವವು. ಕಣ್ಣಿಗೆ ಕಾಣದ ಆದರೂ ಸ್ಥಿರ ಸತ್ಯವಾದ ಅದರ ಫಲವನ್ನು ಸವಿಯಲು ಸ್ಪಷ್ಟವಾದ ಕೆಲವು ಕ್ರಮಗಳನ್ನು, ಕ್ರಮಬದ್ಧವಾದ ಕೆಲವು ಸಾಧನೆಗಳನ್ನು ಕೈಕೊಳ್ಳಬೇಕಾಗುತ್ತದೆ. ಇದು ಯೋಗದ ಸಾಧನೆಯ ಭಾಗಕ್ಕೆ ಸಂಬಂಧಪಟ್ಟು ಗೌಪ್ಯ ಶಾಸ್ತ್ರವೆನಿಸಿಕೊಳ್ಳುತ್ತದೆ.

ನರಮಂಡಲದ ರಚನಾಶಾಸ್ತ್ರವನ್ನು ಕುರಿತಾದ ಗ್ರಂಥಗಳಿಂದ ಯೋಗ ಶಾಸ್ತ್ರದ ಬಗೆಗೆ ಅತಿ ಪ್ರಭಾವಿಯಾದ ತಿಳಿವಳಿಕೆಯುಂಟಾಗುತ್ತದೆ. ಶರೀರ ರಚನೆಯನ್ನು ತಿಳಿಸುವ ಆಧುನಿಕ ಗ್ರಂಥಗಳಿಂದ ತಲೆ ಬುರುಡೆಯಲ್ಲಿ ಮುಂಭಾಗ ಮತ್ತು ಹಿಂಭಾಗ (Lobe) ಎಂದು ಎರಡು ಭಾಗಗಳಿವೆಯೆಂದೂ ಅದರಲ್ಲಿ ಪಿಚ್ಯುಯಿಟರಿ ಗ್ರಂಥಿ (Pituitary gland) ಎಂಬುದೊಂದಿದೆಯೆಂದೂ ಕಂಡುಹಿಡಿಯಲ್ಪಟ್ಟಿರುತ್ತದೆ. ಮಿದುಳಿನ ಮೂರನೆಯ ಭಾಗದಲ್ಲಿ (Third ventrical) ಹಿಂಬದಿಗೆ ಮಧ್ಯದಲ್ಲಿ ಪೀನಿಯಲ್ ಗ್ರಂಥಿ (Pineal gland) ಎಂಬ ಇನ್ನೊಂದು ಅವಯವವಿದ್ದು ಅದು ಪಿಚ್ಯುಯಿಟರಿ ಗ್ರಂಥಿಯ ಮುಂದಿನ ಭಾಗಕ್ಕೆ ಹೊಂದಿಸಲ್ಪಟ್ಟಿರುತ್ತದೆ. ಪೀನಿಯಲ್ ಗ್ರಂಥಿಯು ಆಕಾಶದಲ್ಲಿ ಒಂದು ಸಣ್ಣ ಉದ್ದಿನ ಬೇಳೆಯಷ್ಟು ಎಂದರೆ ಇಂಚಿನ ಎಂಟನೆಯ ಒಂದು ಭಾಗದಷ್ಟಿದ್ದು ನರೆ ಬಣ್ಣದ್ದಿರುತ್ತದೆ. ಪಿಚ್ಯುಯಿಟರಿ ಗ್ರಂಥಿಯು ಮಾಗಿದ ಒಂದು ಸಣ್ಣ ಕವಳೆ ಹಣ್ಣಿನ ಗಾತ್ರದ್ದಿದ್ದು ಮಿದುಳಿಗೆ ಜೋಡಿಸಲ್ಪಟ್ಟಿರುತ್ತದೆ. ಪೀನಿಯಲ್ ಗ್ರಂಥಿಯು ಪಿಚ್ಯುಯಿಟರಿ ಗ್ರಂಥಿಯ ಮತ್ತೊಂದು ಮಗ್ಗಲೆನಿಸಿ ಅದಕ್ಕೆ ಪೂರಕವಾಗಿರುತ್ತದೆ. ಪೀನಿಯಲ್ ಗ್ರಂಥಿಯು ಋಣಕಂಬಿ (Nigative pole)

ಯಂತಿದ್ದರೆ ಪಿಚ್ಯುಯಿಟರಿಯು ಧನಕಂಬಿ (Positive pole) ಯಂತಿರು ತ್ತದೆ. ಪೀನಿಯಲ್ ಗ್ರಂಥಿ ಇರುವದರಿಂದಲೇ ದೃಷ್ಟಿಯ ಇಲ್ಲವೆ ಪ್ರಾಣಶಕ್ತಿಯ ಅಸ್ತಿತ್ವವುಂಟೆಂದು ಹೇಳಲಾಗುತ್ತಿದೆ. ಪೀನಿಯಲ್ ಮತ್ತು ಪಿಚ್ಯುಯಿಟರಿ ಗ್ರಂಥಿಗಳಲ್ಲಿ ಹುದುಗಿರುವ ಸಾಮರ್ಥ್ಯದ ವಿಕಾಸದ ಮುಖಾಂತರವಾಗಿ ಹೊಸ ಹೊಸ ಮತ್ತು ಅತಿ ಉಚ್ಚವಾದ ಜ್ಞಾನವು ಎಂದರೆ ಸ್ವಯಂ ಪ್ರಬೋಧವು ಸ್ವಾನುಭಾವವು ಒಡಮೂಡುವದೆಂದು ಆಧುನಿಕ ವಿಜ್ಞಾನವು ಒಪ್ಪಿಕೊಳ್ಳ ಹತ್ತಿದೆ. ಸ್ವ–ಶಿಕ್ಷಣದ ವಿಷಯದಲ್ಲಿ ತಂದೆ–ತಾಯಿಗಳಾಗಲಿ ಶಿಕ್ಷಣ ಶಾಸ್ತ್ರ ಬಲ್ಲಿದವಾಗಲಿ ಮಗುವಿಗೆ ಸಹಾಯಕರಾಗಲಾರರು. ಪೀನಿಯಲ್ ಗ್ರಂಥಿಯ ಸಾಮರ್ಥ್ಯದ ಸರಿಯಾದ ವಿಕಾಸವು ಮಾತ್ರ ಮನುಷ್ಯನಿಗೆ ಸ್ವ–ಶಿಕ್ಷಣ ಇಲ್ಲವೆ ಸ್ವಯಂಪ್ರಬೋಧದ ಸೌಲಭ್ಯವನ್ನು ಒದಗಿಸಿಕೊಡಬಲ್ಲುದು; ಯಾಕಂದರೆ ಈ ಗ್ರಂಥಿಯು ಸ್ಫುರಣ ಜ್ಞಾನದ ಕೇಂದ್ರ ಅಂಗವಾಗಿದೆ. ಈ ದೃಷ್ಟಿಯಿಂದ ವಿಚಾರಿಸಿದಾಗ ಯೋಗದ ವ್ಯಾಖ್ಯೆಯನ್ನು ಹೀಗೆ ವಿವರಿಸಬಹುದು: ಯೋಗವು ಒಂದು ಶಾಸ್ತ್ರವಾಗಿದೆ. ಅದು ಉಚ್ಚಮಟ್ಟದ ಸ್ಫುರಣಗಳತ್ತ ಜಾಗ್ರತಗೊಳ್ಳುವ ಮನಃಶಕ್ತಿಯನ್ನು ಎತ್ತರಿಸಬಲ್ಲದು. ಮತ್ತು ವಿಶ್ವದಲ್ಲಿ ಸುತ್ತೆಲ್ಲ ಸಾಗಿರುವ ಅನಂತವಾದ ಅರಿವಿನ ಕಾರ್ಯಕಲಾಪಗಳನ್ನು ಗುರುತಿಸಿ ಲಕ್ಷಿಸಿ ಅಡಗಿಸಿ ಕೊಳ್ಳುವ ಆ ಮನದ ಶಕ್ತಿಯನ್ನು ಉನ್ನತ ಸ್ಥಾನಕ್ಕೆ ಏರಿಸಬಲ್ಲದು. ನಿಜಕ್ಕೂ ಮನಸ್ಸನ್ನು ಒಂದು ಏರಿಯಲ್ (Aerial) ನ್ನಾಗಿ ನಿರ್ಮಿಸಿ ವ್ಯಕ್ತಿಯನ್ನು ರೇಡಿಯೋ ಶಕ್ತಿಯ ಆಕಾಶವಾಣಿಪ್ರಸಾರಕ ಹಾಗು ಗ್ರಾಹಕ ಕೇಂದ್ರವನ್ನಾಗಿ ಪರಿವರ್ತಿಸುವ ಸಾಮರ್ಥ್ಯ ಯೋಗಸಾಧನೆಯ ಸಿದ್ಧಿಯಲ್ಲಿ ಇರುತ್ತದೆ. ಯಾವುದೇ ಮೂಲೆಯಿಂದ ಹೊರಚಿಮ್ಮುವ ಮತ್ತು ಮಾತಿನಲ್ಲಿ ಮೂಡಿಬಾರದ ಅನ್ಯರ ವಿಚಾರಗಳನ್ನು ಗ್ರಹಿಸುವ ಶಕ್ತಿಯನ್ನು ಯೋಗ ಸಾಧನೆಯಿಂದ ಹೊಂದಲು ಸಾಧ್ಯವಿದೆ. ಅದರಂತೆ ಅಧ್ಯಾತ್ಮದ ಉನ್ನತಿಯಲ್ಲಿ ಅನ್ಯರಿಗೆ ಮಾರ್ಗದರ್ಶನವಾಗಲೆಂದು ನೆರವಾಗಲೂ ತನ್ನ ಸ್ವಂತ ವಿಚಾರಗಳನ್ನು ಕಳಿಸಿ ಕೊಡುವ ಸಾಮರ್ಥ್ಯವನ್ನು ಆ ಯೋಗಸಾಧನೆಯಿಂದ ಪಡೆಯಲೂ ಶಕ್ಯವಿದೆ. ಎಲ್ಲ ದೇಶ ಕಾಲಗಳ ಸಾಧು–ಸತ್ಪುರುಷರ ಮುನಿ–ಯೋಗಿಗಳ ಸಿದ್ಧ–ಬುದ್ಧರ ಪರಂಪರೆಯು ಮಾಡಿದ ಪವಾಡ ಪ್ರತ್ಯಕ್ಷಂಗಳು ಈ ಗೌಪ್ಯವಾದ ವಿಜ್ಞಾನದ ಪ್ರಭಾವದ ಪರಿಣಾಮವಾಗಿಯೇ ಜರುಗಿರುವವು, ಜರುಗುವವು. ಸಾಧಕನನ್ನು ಆತ್ಮಸಾಕ್ಷಾತ್ಕಾರದ ಔನ್ನತ್ಯಕ್ಕೆ ಸುಲಭವಾಗಿ ಕ್ರಮಕ್ರಮವಾಗಿ ಕರೆದೊಯ್ದು

ಕೊನೆಗೆ ಇಚ್ಛಿತವಾದ ಗುರಿಯ ಸನ್ಮುಖದಲ್ಲಿ ತಾದಾತ್ಮ್ಯದಿಂದ ನಿಲ್ಲುವಂತೆ ಮಾಡುವದೂ ಈ ಗುಹ್ಯವಿಜ್ಞಾನವೆನಿಸಿದ ಯೋಗಶಾಸ್ತ್ರವೇ ಆಗಿದೆ.

ಯೋಗಕ್ಕೆ ಪ್ರಧಾನವಾದ ಮತ್ತು ಸಾಮಾನ್ಯವಾದ ಅರ್ಥದಲ್ಲಿ ಧ್ಯಾನ ಎಂದು ಹೇಳುವರು. ಆದರೆ ಗೌಣವಾದ ಹಾಗು ಪಾರಿಭಾಷಿಕ ಅರ್ಥದಲ್ಲಿ ಆದಕ್ಕೆ ಕೂಡುವದು ಬೆರೆಯುವದು ಎಂದು ಅರ್ಥವಾಗುವದು. ಶಿವಯೋಗ ಎಂದರೆ ನಿರಾಕಾರ ಶಿವನನ್ನು ಲಿಂಗರೂಪದಲ್ಲಿ ಧ್ಯಾನಿಸುವದು. ರೇಖಾಗಣಿತ ಶಾಸ್ತ್ರ ದಲ್ಲಿ ವರ್ತುಲದ ಇಲ್ಲವೆ ತ್ರಿಕೋಣದ ಮಧ್ಯಕ್ಕೆ ಬಿಂದು ಎಂದು ಹೆಸರಿರುವಂತೆ ಪ್ರಾಕೃತ ಶರೀರದ ಮಧ್ಯಕ್ಕೆ ಬಿಂದು ಎಂದು ಕರೆಯುವರು. ಪೀನಿಯಲ್ ಗ್ರಂಧಿಯೇ ಈ ಬಿಂದುವಾಗಿದೆ. ಪೀನಿಯಲ್ ಗ್ರಂಥಿಯು ಮಹತ್ ಎಂದು ಕರೆಯಲ್ಪಡುವ ಪ್ರಜ್ಞಾನದ ಸ್ಥಾನವಾಗಿರುತ್ತದೆ. ಈ ಮಹತ್‌ನ್ನು ಪ್ರತಿನಿಧಿ ಸುವ ಅರಿವಿನ ಪ್ರಭೆಗೆ, ಲಿಂಗಕ್ಕೆ ಮಹಾಲಿಂಗವೆಂದು ಹೆಸರು.

ಕಣ್ಣು ಒಂದು ರೂಪವನ್ನು ಕಂಡಾಗ ಇಲ್ಲವೆ ಕಿವಿಯು ಒಂದು ಶಬ್ದವನ್ನು ಕೇಳಿದಾಗ ಹಾಗೆಯೇ ಇನ್ನುಳಿದ ಇಂದ್ರಿಯಗಳು ತಮ್ಮ ವಿಷಯಗಳನ್ನು ಗ್ರಹಿಸಿದಾಗ ಶಿರದಲ್ಲಿಯ ಈ ಬಿಂದುವಿನಿಂದ ಶಕ್ತಿಯು ಹೊರಚಿಮ್ಮುತ್ತಿದೆ, ಮತ್ತು ಅದು ಮನನ ಸಾಮರ್ಥ್ಯದಿಂದ ವಿವಿಧ ವಸ್ತುಗಳ ರೂಪವನ್ನು ಗ್ರಹಿಸುತ್ತದೆ. ಈ ಬಿಂದುವಿನಿಂದ ಶಕ್ತಿಯು ಹೊರಚಿಮ್ಮದಿದ್ದರೆ, ಮನಕ್ಕೆ ಯಾವ ವಸ್ತುವನ್ನು ಗ್ರಹಿಸಲೂ ಶಕ್ಯವಿಲ್ಲ. ಇಂದ್ರಿಯಗಳ ಮುಖಾಂತರವಾಗಿ ವಿಷಯಗ್ರಹಣವಾಗುತ್ತಿರುವ ವರೆಗೆ ಮನಸ್ಸಿಗೆ ಚಾಂಚಲ್ಯವು ತಪ್ಪಿದ್ದಲ್ಲ. ಮನಸ್ಸಿನ ಹರಿದಾಟ ಹೊಯ್ದಾಟಗಳೆಲ್ಲ ಅಡಗಿ ಅರಿವಿನ ಅಖಂಡ ಶಾಂತಿಯು ಸಾಕ್ಷಾತ್ಕಾರ ವಾಯಿತೆಂದರೆ ಸಾಧಕನು ಪರವಸ್ತುವಿನಲ್ಲಿ ಭದ್ರವಾಗಿ ಬೆರೆಯುವನು ಎಂದು ಹೇಳಬಹುದು. ಇಂದ್ರಿಯಗಳು ವಿಷಯಗಳ ಸನ್ನಿಕರ್ಷದಲ್ಲಿ ಬಂದಾಗಲೇ ಮನದಲ್ಲಿ ಒಂದು ತಿಳಿವಳಿಕೆ ಮೂಡುತ್ತದೆ. ಇದನ್ನೇ ಇನ್ನಿಷ್ಟು ಸ್ಪಷ್ಟಗೊಳಿ-ಸುವುದಾದರೆ ಸ್ಪರ್ಶಜ್ಞಾನವಿಲ್ಲದೆ ಮನಸ್ಸಿಗೆ ಯಾವ ಸಂವೇದನೆ ತಿಳಿವಳಿಕೆಗಳು ಉಂಟಾಗುವದಿಲ್ಲ. ಯಾಕಂದರೆ ಜ್ಞಾನ ಇಲ್ಲವೆ ಕರ್ಮೇಂದ್ರಿಯಗಳ ನರಗಳಿಗೆ ಚಾಲನೆಯುಂಟಾಗಬೇಕಾದರೆ ಸ್ಪರ್ಶವು ಅವಶ್ಯವಾಗಿರುತ್ತದೆ. ಆದರೆ ಇಂದ್ರಿಯ ವ್ಯಾಪಾರವೆಲ್ಲ ಸ್ತಬ್ಧವಾಗಿ, ಮನಸ್ಸು ಸ್ತಿಮಿತಕ್ಕೆ ಬಂದು, ಅದರಲ್ಲಿ ಯಾವ ತರಹದ ಹರಿದಾಟವು ಕಾಣಿಸಿಕೊಳ್ಳದಿದ್ದಾಗ ಇಂದ್ರಿಯ ಮತ್ತು ವಿಷಯ

ಗಳೊಡನೆ ಸ್ಪರ್ಶ ಇಲ್ಲವೆ ಸಂಪರ್ಕವಿಲ್ಲದಿರುವ ಅವಸ್ಥೆಯೊಂದು ಒದಗುತ್ತದೆ. ಅದು ಮನದ ವ್ಯಾಪಾರ ರಹಿತವಾದ ಶುದ್ಧ ಸಂವಿತ್–ಜ್ಞಾನದ ಅವಸ್ಥೆಯನ್ನು ಸೂಚಿಸುತ್ತದೆ. ಅಲ್ಲಿ ಮನ ಬುದ್ಧಿ ಚಿತ್ತ ಮೊದಲಾದ ಅಂತರಿಂದ್ರಿಯಗಳ ಎಲ್ಲ ವ್ಯವಹಾರಗಳು ನಿಂತುಹೋಗುತ್ತವೆ. ಆಗ ಸರ್ವ ಸಾಕ್ಷಿಯಾದ ಪುರುಷನು ಸ್ವಸ್ಥಾನವಾದ ಪೀನಿಯಲ್ ಗ್ರಂಥಿಯಲ್ಲಿ ಸ್ಥಾಣು ಸ್ವರೂಪದಿಂದ ಉಳಿದು ಬಿಡುತ್ತಾನೆ.

ಶಿವಯೋಗದಲ್ಲಿ ಇಡಿಯ ಸಾಧನೆಯು ಈ ಪೀನಿಯಲ್ ಗ್ರಂಥಿಯ ಸುಪ್ತವಾದ ಸಾಮರ್ಥ್ಯವನ್ನು ಜಾಗ್ರುತಗೊಳಿಸುವುದರಲ್ಲಿ ಗಮನ ನೀಡುತ್ತದೆ. ಅನೇಕರಲ್ಲಿ ಈ ಗ್ರಂಥಿಯು ವಿಕಾಸವಾಗದ ಒಂದು ಅಪ್ರಬುದ್ಧ ಸ್ಥಿತಿಯಲ್ಲಿಯೇ ಇರುತ್ತದೆ. ಆದರೆ ಇದು ಸಾವಕಾಶವಾಗಿಯೇ ಆಗಲಿ ಪ್ರಗತಿಯನ್ನು ಪಡೆಯುತ್ತಲೇ ಇರುತ್ತದೆ, ಎಂದೂ ಅವನತಿಯನ್ನು ಹೊಂದುತ್ತಿರುವುದಿಲ್ಲ. ಈ ಪ್ರಗತಿಯನ್ನು ಅತಿ ತೀವ್ರಗೊಳಿಸಿ ಅದನ್ನು ಒಂದು ಅವಸ್ಥೆಗೆ ತಂದು ನಿಲ್ಲಿಸಲು ಶಕ್ಯವಿದೆ. ಆ ಅವಸ್ಥೆಯಲ್ಲಿ ವಸ್ತುಗ್ರಹಣವನ್ನು ತುಂಡು ತುಂಡಾಗಿಯೂ, ಅಖಂಡವಾಗಿಯೂ ಮಾಡಿಕೊಳ್ಳುವ ತನ್ನ ಕಾರ್ಯದಲ್ಲಿ ಸರಿಯಾಗಿ ಪ್ರವರ್ತಿಸಲು ತುಂಬಾ ಅವಕಾಶವಿದೆ. ಕಣ್ಣು ನೋಡುವುದಕ್ಕೆ ಇಂದ್ರಿಯವಾಗಿರುವಂತೆ ಕಿವಿಯು ಕೇಳುವುದಕ್ಕೆ ಕರಣವಾಗಿರುವಂತೆ ಈ ಅವಯವವು ಅಖಂಡ ಜ್ಞಾನಾರ್ಜನೆಗೆ ಸಾಧನವಾಗಿರುತ್ತದೆ. ಈ ಅವಯವವನ್ನೆ ಸಂಪೂರ್ಣವಾಗಿ ವಿಕಾಸಗೊಳಿಸಿಕೊಂಡ ಯೋಗಿಯು ಗಣಿತ ಶಾಸ್ತ್ರಕ್ಕೆ ನಿಲುಕುವ ಕಾಲವನ್ನು ಮೀರುವನು. ಮಾನವನು ಅನಾದಿಯಾದ ಕಾಲ ಪ್ರವಾಹದಲ್ಲಿ ತೇಲಿ ಹೋಗುತ್ತಿರುವನು; ಆಗ ತಲೆದೋರುತ್ತಿರುವ ತಿಳಿವಳಿಕೆಯ ಅವಸ್ಥೆಗಳ ಪರಂಪರೆಗಳಿಂದ ಪ್ರಾದುರ್ಭವಿಸುವ ಭ್ರಮೆಯೇ ಕಾಲದ ಒಂದು ಕಲ್ಪನೆಗೆ ಅವಕಾಶವಿರುತ್ತದೆ. ಯೋಗಿಯು ಪಡೆದುಕೊಳ್ಳುವ ಅರಿವಿನ ಅವಸ್ಥೆಗಳ ಪರಂಪರೆಗೆ ಈ ಕಲ್ಪಿತ ಕಾಲದ ಭ್ರಮೆಯಿರುವದಿಲ್ಲ. ಅವನು ಪಡೆದುಕೊಳ್ಳುವ ಅವಸ್ಥೆಯಲ್ಲಿ ಹಿಂದು–ಇಂದು–ಮುಂದುಗಳೆಂಬ ಕಾಲದ ದಂದುಗವೇ ಇಲ್ಲ. ಪರಿಶುದ್ಧವಾಗಿ ಅರಳಿದ ಅವನ ಅರಿವಿನ ದೃಷ್ಟಿಗೆ ಯಾವಾಗಲೂ ನಿತ್ಯ ನವೀನವಾದ ವರ್ತಮಾನವೇ ತೋರುವುದು. ಅದರ ಮಾನದಲ್ಲಿ ಹಿಂದು–ಮುಂದುಗಳ ಆಕಲನೆಯು ಸಹಜವಾಗಿ ಸಮನಿಸುವುದು. ಪೀನಿಯಲ್ ಗ್ರಂಥಿಯು ಜಾಗ್ರತವಾಗುವಲ್ಲಿ ಯೋಗಿಗೆ ಇಂಥದೊಂದು ಅದ್ಭುತವಾದ ಸಾಮರ್ಥ್ಯವು ಮೈಗೂಡುವದು. ಅದಕ್ಕಾಗಿ

ಯೋಗ ಶಾಸ್ತ್ರದಲ್ಲಿ ಒಮ್ಮೊಮ್ಮೆ ಈ ಪೀನಿಯಲ್ ಗ್ರಂಥಿಗೆ ತೃತೀಯ ನೇತ್ರ ಎಂದು ಸಂಬೋಧಿಸುವುದುಂಟು. ಈ ಮೂರನೆಯ ಕಣ್ಣಿನ ಕಾರ್ಯಕಲಾಪ ಗಳು ಹಣೆಯ ನಡುವಿನ ಸ್ಥಾನದಿಂದ, ಭ್ರೂಮಧ್ಯದ ಮುಖಾಂತರವಾಗಿ ನಾಗು ತ್ತಿರುವವು. ಈ ಕಣ್ಣನ್ನು ಗುರುತಿಸುವುದಕ್ಕಾಗಿ ಹಿಂದುಗಳು ಹಣೆಯ ಮೇಲೆ ಒಂದು ತಿಲಕವನ್ನು ಇಟ್ಟುಕೊಳ್ಳುವದುಂಟು. ಶಿವನನ್ನು ಚಿತ್ರರೂಪವಾಗಿ ಬರೆದು ತೋರಿಸುವಾಗ ಹಣೆಯಲ್ಲಿ ಒಂದು ಕಣ್ಣನ್ನು ಮೂಡಿಸಿ ಅದರಿಂದ ಕೆಂಪು ಜ್ವಾಲೆಗಳು ಹೊರಬೀಳುತ್ತಿರುವದನ್ನು ಕಾಣಿಸುವರು. ಇದರ ರಹಸ್ಯ ವೇನು ? ಇದು ತೃತೀಯ ನೇತ್ರವಾದ ಈ ಪೀನಿಯಲ್ ಗ್ರಂಥಿ ಸೂಚಕ ವಾಗಿ ಇರುತ್ತದೆ. ಶಿವನು ಒಬ್ಬ ಮಹಾಯೋಗಿ ಎಂದು ಹೇಳುತ್ತಿರುವುದಿಲ್ಲವೆ? ೫೦೦೦ ವರ್ಷಗಳ ಹಿಂದಿನ ಸಂಸ್ಕೃತಿಯನ್ನು ವ್ಯಕ್ತಗೊಳಿಸುವ ಮೊಹೆಂಜೊ-ದಾರೊ ಮತ್ತು ಹರಪ್ಪಗಳ ಅಗೆತಗಳಲ್ಲಿ ಸಿಕ್ಕಿರುವ ಅವಶೇಷಗಳಲ್ಲಿ ಶಿವನನ್ನು ಅನಿಮಿಷ ದೃಷ್ಟಿಯ ಒಬ್ಬ ಮಹಾಯೋಗಿ ಎಂದು ರೂಪಿಸಲಾಗಿದೆ. ಮನುಷ್ಯನ ಪ್ರವೃತ್ತಿಗಳು ಕೀಳುದೆಸೆಯತ್ತ ಇಳಿಯುತ್ತಿವೆ. ಅವು ಲೈಂಗಿಕ ಸುಖಸಂಭೋಗ ದಲ್ಲಿ ಆಳವಾಗಿ ಮುಳುಗಿಬಿಡುತ್ತಿವೆ. ಎಂತಲೇ ಈ ಮೂರನೆಯ ಕಣ್ಣಿನ ವಿಕಾಸವು, ಈ ಪೀನಿಯಲ್ ಗ್ರಂಥಿಯ ಪ್ರಗತಿಯು ಕುಂಠಿತವಾಗಿ ತೋರು ತ್ತದೆ. ಅರಿವಿನ ದೃಷ್ಟಿ ಎನಿಸಿಕೊಳ್ಳುವ ಈ ಕಣ್ಣು ಮತ್ತು ಕಾಮಾಂಗ ಇವು ತಕ್ಕಡಿಯ ಎರಡು ಪರಡಿಗಳಿದ್ದಂತೆ; ಒಂದು ಭಾರವಾದಾಗ ಇನ್ನೊಂದು ಪರಡಿಯು ಹಗುರಾಗಿ ಮೇಲೆ ಏರಲೇಬೇಕು. ಕಾಮವಾಸನೆ, ಲಾಲಸೆ, 'ಲಿಬಿಡೊ' ಇತ್ಯಾದಿಗಳನ್ನು ಮೀರಿ ನಿಂತಾಗ, ಅದನ್ನು ಶಕ್ಯವಾದ ಮಟ್ಟಿಗೆ ಹಗುರುಗೊಳಿಸಿಕೊಂಡಾಗ ಈ ಮೂರನೆಯ ಕಣ್ಣು ತೆರೆಯುವದು ಎಂದರೆ ಈ ಪೀನಿಯಲ್ ಗ್ರಂಥಿಯು ಜಾಗ್ರತವಾಗಿ ಪ್ರಭಾಪುಂಜವಾಗಿ ಅರಳಿಕೊಳ್ಳುವದು.

ಮಾನವನು ವಿಚಾರವೊಂದರಲ್ಲಿ ಮಗ್ನವಾಗಿ ಬಹಳ ಹೊತ್ತಿನ ವರೆಗೆ ಉಳಿದನೆನ್ನೋಣ; ಆಗ ಪೀನಿಯಲ್ ಗ್ರಂಥಿಯಲ್ಲಿ ಒಂದಿಷ್ಟು ನಡುಕವನ್ನಾಗಲಿ ಇಲ್ಲವೆ ಅಲ್ಲಿ ಏನೋ ಒಂದು ಹರಿದಾಡುತ್ತಿದೆ ಎಂಬ ತಿಳಿವಳಿಕೆಯನ್ನಾಗಲಿ ಪಡೆದುಕೊಳ್ಳಬಹುದಾಗಿದೆ. ಈ ನಡುಕವು ತಲೆದೋರಿದಾಗ ಈ ಗ್ರಂಥಿಯಿರುವ ಮಿದುಳಿನ ಪೊಳ್ಳು ಭಾಗದಲ್ಲಿ (Sub-archonoid space) ಇಲ್ಲವೆ ದಹರಾಕಾಶದಲ್ಲಿ ಒಂದಿಷ್ಟು ವಿದ್ಯುತ್ ಸಂಚಾರವಾದಂತಾಗುತ್ತದೆ. ಇದ ರಿಂದಾಗಿ ಈ ಗ್ರಂಥಿಯು ಸಾಂದ್ರವಾದ ಪರಮಾಣುಗಳಲ್ಲಿ ಗುಳುಗುಳು

ಹರಿದಾಟವೊಂದರ ಜ್ಞಾನವಾಗುತ್ತದೆ. ಆ ಕಾಲಕ್ಕೆ ವಿಚಾರವು ವಿದ್ಯುತ್ ಪ್ರವಾಹವನ್ನುಂಟು ಮಾಡುವಷ್ಟು ಪ್ರಬಲವಾಗಿದ್ದರೆ ಪೀನಿಯಲ್ ಗ್ರಂಥಿ ಯಲ್ಲಿಯ ಸುಳಿದಾಟವು ಪ್ರಬಲವಾದ ಓಟಾಟದಲ್ಲಿ ಮಾರ್ಪಡುತ್ತದೆ. ಆದ ರಿಂದಾಗಿ ಈ ಗ್ರಂಥಿಯಲ್ಲಿ ಬಲವಾದ ಆಘಾತವುಂಟಾಗಿ ವಿದ್ಯುತ್ ಸಂಚಾರವು ಸ್ಪಷ್ಟವಾಗುವದು; ಮಾತ್ರವಲ್ಲ, ಇಡಿಯ ದೇಹವೇ ವಿದ್ಯುತೀಕರಣವನ್ನು ಪಡೆ-ಯುವದು. ಆಗ ಆ ವಿಚಾರವು ಹೆಚ್ಚು ಪರಿಸ್ಫುಟವಾಗಿ ಜಾಗ್ರತಗೊಂಡು ಪ್ರಭಾವಿಯಾಗಿ ಪ್ರಬಲವಾಗಿ ಸಂತತಧಾರೆಯಾಗಿ ನಿಲ್ಲುವುದು. ತತ್ಪರಿಣಾಮ ವಾಗಿ ವಿಚಾರಸಾಮರ್ಥ್ಯವು ಅತ್ಯುಚ್ಚ್ರಾಯ ಸ್ಥಿತಿಯನ್ನು ಪಡೆಯುವದು.

ಗತಿಯೇ ಎಲ್ಲವುಗಳ ಮೂಲವಾಗಿದೆ. ಜೀವನವು ಗತಿರೂಪವಾಗಿದೆ. ಪ್ರಕೃತಿಯನ್ನು ಅಂಟಿಕೊಂಡ ಗತಿಯೇ ಸ್ಪಂದನವು. ಒಂದೇ ಒಂದಾಗಿರುವ ಅದ್ವಿತೀಯ ಪರಾತ್ಪರ ವಸ್ತುವು ನಿರ್ವಿಕಾರವಾಗಿದೆಯೆಂದೂ, ಅದು ಆತ್ಯಂತಿಕ ಗತಿಯಿಂದ ಯುಕ್ತವಾಗಿದೆಯೆಂದೂ ಇಲ್ಲವೆ ಆತ್ಯಂತಿಕವಾದ ವಿಶ್ರಾಂತಿಯಲ್ಲಿ ಉಳಿದಿದೆಯೆಂದೂ ನಾವು ತಿಳಿಯುತ್ತೇವೆ. ಆ ವಸ್ತುವು ತಾನೇ ತಾನಾಗಿ ಅದ್ವಿ-ತೀಯವಾಗಿ ತೋರಿದಾಗ ಅಲ್ಲಿ ಗತಿಗೆ ಅವಕಾಶವಿಲ್ಲ. ಆದರೆ ಆ ವಸ್ತುವಿನಲ್ಲಿ ಸ್ಫುರಣೆ–ಸ್ಪಂದನಗಳು ತಲೆದೋರಿದಾಗ ಗತಿಯೊಂದರ ತಿಳಿತಿಳಿಕೆಯು ಅನುಭವ ಗಮ್ಯವಾಗುತ್ತದೆ. ಈ ಗತಿಯು ಕಾಲದ ಪರಂಪರೆಯಲ್ಲಿ ಸ್ಥಾನಪಲ್ಲಟವನ್ನು ವ್ಯಕ್ತಗೊಳಿಸುವದು. ಒಂದು ಹಲವಾಗಿ ವ್ಯಕ್ತಗೊಂಡಾಗ ಗತಿಯು ಒಡ-ಮೂಡುವದು. ಆದರೆ ಈ ಗತಿಯು ತಾಲ-ಲಯಬದ್ಧವಾಗಿದ್ದರೆ ಮಾತ್ರ ಅದನ್ನು ಜೀವನ ಅರಿವು ಆರೋಗ್ಯ ಎಂದು ವಿವರಿಸಬೇಕು. ಅಲ್ಲಿ ತಾಲ-ಲಯಗಳು ಮೂಡಿಕೊಳ್ಳದಿದ್ದಲ್ಲಿ ಅದಕ್ಕೆ ಮರಣ ಮರಹು ಅನಾರೋಗ್ಯ ಎಂದು ಹೆಸರಿಡಬೇಕು. ಜೀವನ–ಮರಣ, ಅರಿವು–ಮರವೆಗಳು ಗತಿಯಲ್ಲಿ, ಸೃಷ್ಟಿ ಯಲ್ಲಿ ಹುಟ್ಟಿಬಂದ ಎರಡು ಅವಳಿಜವಳಿಯಾದ ಸ್ವರೂಪಗಳು. ಈ ವ್ಯಕ್ತಸೃಷ್ಟಿ ಯಲ್ಲಿ ವಿವಿಧ ಸಾಂದ್ರತೆಗಳಿಂದ ಕೂಡಿದ ವಸ್ತುಜಾಲದಿಂದ ನಾವು ಸುತ್ತುವರಿ-ಯಲ್ಪಟ್ಟಿರುವೆವಷ್ಟೆ! ಸೂಕ್ಷ್ಮವಾದ ನಮ್ಮ ಬಗೆಬಗೆಯ ಅವಯವಗಳು ನಾನಾ ವಿವಿಧವಾಗಿ ಪರಿಣಾಮಗೊಂಡಾಗ ಆ ಸೃಷ್ಟಿಯಲ್ಲಿ ನಾವು ಗತಿಯನ್ನು ಗುರುತಿಸಿ ಹೆಸರಿಡುತ್ತೇವೆ. ಕಣ್ಣಿನ ಮೇಲೆ ಪ್ರಭಾವವನ್ನು ಬೀರುವ ಕೆಲವು ಗತಿಗಳಿಗೆ 'ಪ್ರಕಾಶ– Light' ಎಂದೂ ಇಂದ್ರಿಯಗಳಿಗೆ ಸಂಬಂಧಿತವಾದ ಮನದ ಮೇಲೆ ಪ್ರಭಾವವನ್ನು ಬೀರುವ ಗತಿಗಳಿಗೆ 'ಸಂವೇದನೆ–Sensaction' ಎಂದೂ

ಕರೆಯುತ್ತೇವೆ. ವಸ್ತುವಿನಿಂದ ಹೊರಟ ಕಿರಣಗಳು ಕಣ್ಣಿನ ಮೇಲೆ ಬಿದ್ದು ಪರಾವರ್ತನೆ ಹೊಂದಿ ಪ್ರಭೆಯೊಡನೆ ಬೆರೆತಾಗ ನೋಟವು ಸಂಭವಿಸು-ತ್ತದೆ; ಹಾಗೆಯೇ ವಸ್ತು ಮತ್ತು ಮನ ಇವುಗಳ ನಡುವೆ ಸೂಕ್ಷ್ಮವಾದ ಇಂದ್ರಿಯ ಪ್ರಕಾಶವು ತರಂಗರೂಪವಾಗಿ ಹೊರಚಿಮ್ಮಿದಾಗ ಸಂವೇದನೆಯು ಉಂಟಾಗುತ್ತದೆ.

ಮನಸ್ಸು ಹಿಂದಣ ಸಂವೇದನೆ ಮತ್ತು ಪ್ರಭಾವಮುದ್ರೆಗಳಿಂದ ಪರಿಣಾಮ ಗೊಂಡಿರುತ್ತದೆ. ಮತ್ತು ಇಂದು ಎಡೆಬಿಡದೆ ಸಂಭವಿಸುವ ಸಂವೇದನೆ ಪ್ರಭಾವ ಮುದ್ರೆಗಳಿಂದ ಅದು ಒಂದೇ ಸವನೆ ಪರಿಣಾಮಗೊಳ್ಳುತ್ತಲಿದೆ. ಮನದಲ್ಲಿ ಕೆಲವು ಶಕ್ತಿ-ಸಾಮರ್ಥ್ಯಗಳೂ ದೋಷ-ದೌರ್ಬಲ್ಯಗಳೂ ಹುದುಗಿರುತ್ತವೆ ಇವು ಹಿಂದಣ ಹಾಗು ಇಂದಿನ ಕಾರ್ಯಕಲಾಪಗಳ ಫಲರೂಪವಾಗಿ ಬಂದಿರುತ್ತವೆ. ನಾವು ನಿರ್ಮಿಸಿದಂತೆ ಆ ಮನವು ರೂಪಗೊಂಡಿರುತ್ತದೆ. ಆದರೆ ಸಾವಕಾಶವಾಗಿಯೇ ಆಗಲಿ ಅದನ್ನು ರೂಪಾಂತರಗೊಳಿಸಬಹುದು. ಅದು ಸಾರ್ವತ್ರಿಕವಾದ ಪ್ರಕೃತಿಯ ಒಂದು ಅಂಗವಾಗಿ ನಮ್ಮ ಉಪಯೋಗಕ್ಕಾಗಿಯೇ, ಒಂದು ವಿಶಿಷ್ಟ ಸಾಧನೆಗಾಗಿಯೇ ರೂಪುಗೊಂಡಿರುತ್ತದೆ. ಅದರ ಮುಖಾಂತರವಾಗಿಯೇ ಬಾಹ್ಯ ಸೃಷ್ಟಿಯ ಅರಿವನ್ನು ನಾವು ಪಡೆಯುತ್ತೇವೆ. ಅದಕ್ಕಾಗಿ ಪ್ರತಿಯೊಂದು ಮನಸ್ಸಿಗೆ ತನ್ನದೇ ಆದ ಒಂದು ಸ್ಪಂದನವಿರುತ್ತದೆ; ನಿರಂತರವಾಗಿ ಅದು ಗತಿ ಯನ್ನು ಪಡೆದಿರುತ್ತದೆ. ಕ್ಷಣಕ್ಷಣಕ್ಕೆ ರೂಪಾಂತರ ಹೊಂದುವ ಚಿತ್ರಗಳನ್ನು ದೃಶ್ಯಗಳನ್ನು ಅದು ಎತ್ತಿ ತೋರಿಸುತ್ತದೆ. ಹೊರಗಿನಿಂದ ಬರುವ ಪ್ರತಿಯೊಂದು ಸಂವೇದನೆಯೂ ಮೊದಲೇ ಜಾಗ್ರತವಾಗಿರುವ ಈ ಮನದ ತೆರೆಯ ಮೇಲೆ ಮುದ್ರೆಯನ್ನು ಒತ್ತುತ್ತದೆ. ಅದರಿಂದಾಗಿ ಹೊಸ ಹೊಸದಾಗಿ ಬರುವ ಸಂವೇದನೆಗಳಿಂದ ಈಗಾಗಲೇ ಇದ್ದ ಸ್ಪಂದನ ತರಂಗಗಳಲ್ಲಿ ಇನ್ನೂ ಅಧಿಕ ವಾಗಿ ಮಾರ್ಪಾಟಗಳುಂಟಾಗುತ್ತವೆ. ಆದ್ದರಿಂದ ಹೊಸ ಸ್ಪಂದನ ಸಂವೇದನೆ ಗಳು ಇದ್ದಕ್ಕಿದ್ದಂತೆ ಅಲ್ಲಿ ಮೂಡಿಕೊಳ್ಳುವದಿಲ್ಲ; ಮೊದಲೇ ಇದ್ದವುಗಳೊಡನೆ ಕೂಡಿಕೊಂಡು ಹೊಸ ರೂಪದೊಡನೆ ಅವು ಕಾಣಿಸಿಕೊಳ್ಳುವವು. ಒಟ್ಟಾರೆ ಯಾಗಿ ಮನಸ್ಸಿನಲ್ಲಿ ಮೂಡಿಕೊಳ್ಳುವದು ವಿಕಾರವನ್ನು ಹೊಂದಿದ ಪ್ರತಿಕೃತಿ, ರೂಪ. ಈ ರೂಪಗಳೂ ಸತ್ಯಸೃಷ್ಟಿಯ ರೂಪಗಳಲ್ಲ, ತೋರಿ ಅಡಗುವ ಸೃಷ್ಟಿಯ ಮಿಥ್ಯಾರೂಪಗಳು.

ನಾವು ವಸ್ತುವನ್ನು ಅರಿತುಕೊಳ್ಳುವದಿಲ್ಲ. ವಸ್ತುವಿನಿಂದ ಆಗುವ ಪ್ರಭಾವವನ್ನು ಮಾತ್ರ ಅರಿತುಕೊಳ್ಳುತ್ತೇವೆ. ಇಂದ್ರಿಯ ಮನಸ್ಸು ಇವುಗಳ ಕಾರ್ಯಕಲಾಪಗಳ ಬಗೆಗೆ ಹೇಳುವುದಾದರೆ ಈ ಮಾತು ಅತಿ ಸತ್ಯವಾಗಿದೆ: ರಂಜಿತವಾಗಿರುವದಿಲ್ಲ. ಈ ಸೃಷ್ಟಿಯನ್ನು, ಸೃಷ್ಟಿಯಲ್ಲಿಯ ವಸ್ತು-ಒಡವೆಗಳನ್ನು, ಸಂವೇದನೆಗಳಿಂದ ಪ್ರಭಾವ ಪಡೆದ ಮನಸ್ಸಿನಿಂದ ಅರಿಯುವದಕ್ಕಿಂತ ಇದ್ದಕ್ಕಿದ್ದಂತೆ ಕಾಣುವ ಕಣ್ಣಿನಿಂದ ಕಾಣುವದಾದರೆ ಇವುಗಳ ಬಗೆಗೆ ನಮ್ಮ ವಿಚಾರಗಳ ಸ್ವರೂಪವೇ ಬೇರೆಯಾಗುವದು. ಹೀಗೆ ಇವನ್ನು ಕಾಣುವದು ಅಸಾಧ್ಯವೇನೂ ಅಲ್ಲ. ಪ್ರಜ್ಞಾನ ಸಾಮರ್ಥ್ಯವುಳ್ಳ ಪೀನಿಯಲ್ ಗ್ರಂಥಿಯನ್ನು ಅಂತರಂಗದ ವಿದ್ಯುತ್ ಪ್ರವಾಹದಿಂದ ಪ್ರಸೀತಗೊಳಿಸುವುದರಿಂದ ಈ ಸೃಷ್ಟಿಯನ್ನು ಇದ್ದಕ್ಕಿದ್ದಂತೆಯೇ ಕಾಣುವದು ಸಾಧ್ಯವಿದೆ. ವಿಚಾರಶಕ್ತಿಯು ಆತ್ಮಸಾಮರ್ಥ್ಯದಿಂದ ಉಗಮಗೊಳ್ಳುವ ಕ್ರಿಯೆಯ ಪರಿಣಾಮವಾಗಿದೆ. ಹೊರಗಿನಿಂದ ಹುಟ್ಟಿಕೊಳ್ಳುವ ಅನಿಸಿಕೆಗಳಿಂದಾಗಲಿ, ಸಂವೇದನೆ ಪ್ರಭಾವ ಮುದ್ರೆಗಳಿಂದಾಗಲಿ ಈ ಆತ್ಮಸಾಮರ್ಥ್ಯವು ರೂಪಗೊಳ್ಳಬೇಕಾಗಿಲ್ಲ. ಆದರೆ ತನ್ನ ಕ್ರಿಯಾಪ್ರಭಾವಕ್ಕೆ ಇವುಗಳ ಉಪಯೋಗವನ್ನು ಅದು ಮಾಡಿಕೊಳ್ಳಬಲ್ಲದು ಅಷ್ಟೆ! ರೂಪುಗೊಂಡು ತೋರುವ ನಮ್ಮೀ ಬಾಹ್ಯ ಸೃಷ್ಟಿಯು ಭಾವನಾಸೃಷ್ಟಿಯ ಒಂದು ಅಂಶ ಮಾತ್ರ. ಪೀನಿಯಲ್ ಗ್ರಂಥಿಯನ್ನು ಆತ್ಯಂತಿಕವಾಗಿ ವಿಕಾಸ ಮಾಡಿಕೊಂಡ ಪರಮ ಯೋಗಿಯು ಸಂಕಲ್ಪಮಾತ್ರದಿಂದ ನಿಷ್ಪನ್ನವಾಗುವ ಭಾವನಾಸೃಷ್ಟಿಯಲ್ಲಿ ಸತ್ಸಂಕಲ್ಪವನ್ನು ಗ್ರಹಿಸಿ ರೂಪಿಸಿ ತೋರಬಲ್ಲನು. ಅವನ ಸಂಕಲ್ಪ ದೃಷ್ಟಿಯು, ಸುಜ್ಞಾನ ದೃಷ್ಟಿಯು ನಾಮ ರೂಪಾತ್ಮಕವಾದ ಸ್ಥೂಲ ಸೃಷ್ಟಿಗೆ ರೂಪವನ್ನು ನಿರ್ಧರಿಸಬಲ್ಲ ಕಾರಣ ಮಹಾ ಕಾರಣ ಸೃಷ್ಟಿಗಳನ್ನೂ ಭೇದಿಸಬಲ್ಲದು. ಯಾಕಂದರೆ ಆತನ ಉನ್ಮನವು, ಆತ್ಮಜ್ಯೋತಿಯು ಸ್ಥೂಲಮನದಿಂದ ಅಭೇದ್ಯವಾದ ಪೀನಿಯಲ್ ಗ್ರಂಥಿಯಲ್ಲಿ ವಿಶಾಲವಾಗಿ ಕಾರ್ಯಗೆಯ್ಯುತ್ತಿರುತ್ತದೆ.

ಯೋಗಾನುಸಂಧಾನದ ಕಾಲಕ್ಕೆ ಪರವಸ್ತುವಿನಲ್ಲಿರಿಸಿದ ತನ್ಮಯವಾದ ನೋಟವು ತಪಸ್ಸನ್ನು ಹುಟ್ಟಿಸುವದು. ಅದರಿಂದಾಗಿ ಸುಪ್ತಸ್ಥಿತಿಯಲ್ಲಿದ್ದ ಪೀನಿಯಲ್ ಗ್ರಂಥಿಯು ಜಾಗ್ರತಗೊಳ್ಳುವದು, ವಿದ್ಯುತ್ ಶಕ್ತಿಯಾಗಿ ಕಾರ್ಯಗೆಯ್ಯತೊಡಗುವದು. ಇದರಿಂದ ಸೂಕ್ಷ್ಮ ಶರೀರದ ವಿವಿಧ ಶಕ್ತಿಯ ಕೇಂದ್ರಗಳಲ್ಲಿ ಅವಿತುಕೊಂಡಿದ್ದ ಕಾವಳವೆಲ್ಲ ಅಡಗಿ ಆತ್ಮತೇಜವು ಬೆಳಗುವದು. ತಪಸ್ಸು

ಇಂದ್ರಿಯಗಳ ಭ್ರಮೆಗಳನ್ನು, ದೋಷಗಳನ್ನು ತೊಡೆದು ಹಾಕಿದರೆ ತೇಜಸ್ಸು ತಮಂಥ ಮುಸುಕಿದ ಮೂಲೆ ಮೂಲೆಗಳನ್ನು ಪ್ರಕಾಶಗೊಳಿಸುವದು. ತಪಸ್ಸು ತೇಜಸ್ಸುಗಳು ಅವಿರಳವಾಗಿ ಅನ್ಯೋನ್ಯವಾಗಿ ಅವಿನಾಭಾವದಿಂದ ಬೆರೆತು ಓಜಸ್ಸಾಗಿ ಮಾರ್ಪಡುವವು. ಓಜಸ್ಸು ಜ್ಞಾನಶಕ್ತಿಯ ಪ್ರತೀಕವಾಗಿರುತ್ತದೆ. ಓಜಸ್ಸು ಏಕಕಾಲಕ್ಕೆ ಆತ್ಮನ ಕರ್ತೃತ್ವಶಕ್ತಿಯಾಗಿ ಕಲ್ಪಕವೃತ್ತಿಯಾಗಿ ತಳತಳಿಸ ತೊಡಗುವದು. ಇದರಿಂದ ಶಿವಯೋಗವು ಯಾವ ಅವಸ್ಥೆಯಲ್ಲಿ ಸಂಕಲ್ಪವೇ ಸೃಷ್ಟಿಯಾಗಿ ಪರಿಣಮಿಸುವದೋ ಅಂತಹ ಹರಿತವಾದ ಕ್ರಿಯೆ ಮತ್ತು ಸ್ಫುರಿತ-ವಾದ ಜ್ಞಾನ ಇವು ಗಾಢವಾಗಿ ವ್ಯಾಪಕವಾಗಿ ಅಳವಟ್ಟ ಅವಸ್ಥೆಯೊಂದರಲ್ಲಿ ಸಾಧಕನನ್ನು ಒಯ್ದು ನಿಲ್ಲಿಸುವದೆಂಬುದು ವ್ಯಕ್ತವಾಗುತ್ತದೆ. ಪೀನಿಯಲ್ ಗ್ರಂಥಿಯನ್ನು ಜಾಗ್ರತಗೊಳಿಸುವ ಶಿವಯೋಗದಲ್ಲಿ ಇಂಥದೊಂದು ಗಹನವಾಗ ಗಂಭೀರವಾದ ಸಾಮರ್ಥ್ಯವಡಗಿದೆ. ಶಿವಯೋಗವು ನೀಡುವ ನಂಬಿಗೆಯಿದು.

ಮುಕ್ತಿಯ ವಿಷಯಕವಾದ ಭಿನ್ನ ಭಿನ್ನವಾದ ದೃಷ್ಟಿಕೋನ ಮತ್ತು ಮುಕ್ತಿಯ ಸಾಧನೆಯ ಬಗೆಗೆ ಇರಿಸಿಕೊಂಡಿದ್ದ ವಿಚಾರಪ್ರಣಾಲಿ ಇವುಗಳಿಗನುಸಾರವಾಗಿ ಯೋಗದಲ್ಲಿ ಐದು ಪ್ರಕಾರಗಳನ್ನು ಗಣಿಸಲಾಗಿದೆ. ಮಂತ್ರಯೋಗ ಲಯಯೋಗ ಹಠಯೋಗ ರಾಜಯೋಗ ಮತ್ತು ಶಿವಯೋಗ ಇವೇ ಆ ಐದು ಯೋಗಗಳು. ವೀರಶೈವ ಶಿವಯೋಗಿಗಳು ತಮ್ಮ ಕೃತಿಗಳಲ್ಲಿ ಈ ಯೋಗಗಳ ಬಗೆಗೆ ಬಹು ಸ್ಪಷ್ಟವಾದ ವಿವರಣೆಯನ್ನು ಕೊಟ್ಟಿದ್ದಾರೆ. ಯೋಗದಾಚರಣೆಯಿಂದ ಹೊಂದುವ ಮುಕ್ತಿಯು ತನ್ನಿಂದ ಅನ್ಯವಾದ ಒಂದು ಸ್ಥಾನ ಇಲ್ಲವೆ ಅವಸ್ಥೆಯನ್ನು ತಿಳಿಯುವಡಿಸದೆ ಅದು ತನ್ನಲ್ಲಿಯೇ ತನ್ನ ಶರೀರದ ಮುಖಾಂತರವಾಗಿಯೇ ಪಡೆಯುವ ಒಂದು ಅವಸ್ಥಾವಿಶೇಷವಾಗಿದೆ. ಆದ್ದರಿಂದ ಯೋಗದಿಂದ ಉಂಟಾಗುವ ಅನುಭವವನ್ನು ತನ್ನ ಅಂತರಂಗದಲ್ಲಿಯೇ ಕಾಣುತ್ತಾನೆ ಯೋಗಿಯಾದವನು. ಯೋಗವು 'ಸಂಯೋಗ, ಕೂಡುವದು' ಎಂಬ ಅರ್ಥವನ್ನು ವ್ಯಕ್ತಗೊಳಿಸುವದಾದರೆ ಈ ಐದು ಯೋಗಗಳಲ್ಲಿ ಒಂದೊಂದರಲ್ಲಿ ಒಂದೊಂದು ವಿಧವಾದ ಸಂಯೋಗವನ್ನೇ ಗುರಿಯಾಗಿರಿಸಿಕೊಂಡಿರುವರು ಆ ಯೋಗಿಗಳು. ಉದಾಹರಣೆಗಾಗಿ ಹಠಯೋಗಿಗೆ ಪ್ರಾಣ-ಅಪಾನಗಳನ್ನು ಒಂದುಗೂಡಿಸುವುದೇ ಯೋಗವಾಗಿದೆ. ರಾಜಯೋಗಿಗೆ ಸೂರ್ಯ-ಚಂದ್ರ ನಾಡಿಗಳನ್ನು ಒಂದುಗೂಡಿಸಿ ಮನವನ್ನು ಅಮನಸ್ಕಗೊಳಿಸುವುದೇ ಯೋಗವಾಗಿದೆ. ಶಿವಯೋಗಿಗೆ ಶಿವ-ಶಕ್ತಿಯರನ್ನು ಒಂದುಗೂಡಿಸುವುದೇ ಯೋಗವಾಗಿದೆ. ಹೀಗೆ ಒಂದರಲ್ಲಿ ಒಂದನ್ನು ಬೆರೆಸುವುದೇ ಯೋಗ ಸಾಧನೆಗೆ ಗುರಿಯಾಗಿರುವಾಗ ತನ್ನಿಂದನ್ಯವಾದ ವಸ್ತು ಒಡವೆಗಳನ್ನು ಬೆರೆಯಬೇಕು, ಇಲ್ಲವೆ ಯಾವುದೋ ಒಂದು ಕಾಲ್ಪನಿಕವಾದ ಅವಸ್ಥಾವಿಶೇಷವನ್ನು ಹೊಂದಬೇಕು, ಅರ್ಥಾತ್ ಮುಕ್ತಿಯನ್ನು ಪಡೆಯಬೇಕು ಎಂಬ ವಿಚಾರಕ್ಕೆ ಯೋಗಸಿದ್ಧಾಂತದಲ್ಲಿ ಅವಕಾಶವಿಲ್ಲ.

'ಪಿಂಡಬ್ರಹ್ಮಾಂಡಯೋರ್ಐಕ್ಯಂ' ಎಂದು ಹೇಳುವರು. ಬ್ರಹ್ಮಾಂಡದಲ್ಲಿ ವ್ಯಕ್ತವಾಗಿರುವ ಘಟಕಗಳು ಪಿಂಡಾಂಡದಲ್ಲಿಯೂ ಇವೆ. ಅಂತರ್ಮುಖಿಗಳಾದ ಯೋಗಿಗಳು ಬ್ರಹ್ಮಾಂಡವನ್ನು ಅರಿತುಕೊಳ್ಳಲು ಹಂಬಲಿಸದೆ ಪಿಂಡದಲ್ಲಿ

ಪ್ರವೇಶ ಮಾಡಿ ಅಲ್ಲಿ ಕಂಡ ಅದ್ಭುತ ಶಕ್ತಿ-ತತ್ತ್ವಗಳಿಂದ ಬ್ರಹ್ಮಾಂಡದ ನೆಲೆಯನ್ನು ಕಂಡುಕೊಂಡರು. ಯೋಗಸಾಧನೆಗೆ ಪಿಂಡವನ್ನು ಬಿಟ್ಟರೆ ಇನ್ನಾವ ಶ್ರೇಷ್ಠವಾದ ಉಪಕರಣವೂ ಇಲ್ಲ 'ಶರೀರಮಾದ್ಯಂ ಖಲು ಧರ್ಮ ಸಾಧನಂ' ಎಂದು ಹೇಳುವ ಮಾತಿನಲ್ಲಿ ಪಿಂಡಾಂಡದ ಹಸುಗೆಯಿಂದ ಪರಬ್ರಹ್ಮನ ನಿಲವನ್ನು ಕಾಣಬೇಕೆಂಬ ರಹಸ್ಯವಡಗಿದೆ. ಪಿಂಡಾಂಡದ ಮಹತ್ವವನ್ನು ಎತ್ತಿ ಹಿಡಿಯುತ್ತ ಷಣ್ಮುಖ ಸ್ವಾಮಿಯು ತನ್ನ ಒಂದು ವಚನದಲ್ಲಿ,

ಪಿಂಡದೊಳಗೆ ಪ್ರಾಣವಿರ್ಪುದನೆಲ್ಲರು ಬಲ್ಲರಲ್ಲದೆ
ಪ್ರಾಣದೊಳಗೆ ಶಬ್ದವಿರ್ಪುದನಾರೂ ಅರಿಯರಲ್ಲ !
ಪ್ರಾಣದೊಳಗೆ ಶಬ್ದವಿರ್ಪುದನೆಲ್ಲರು ಬಲ್ಲವರಲ್ಲದೆ
ಶಬ್ದದೊಳಗೆ ನಾದವಿರ್ಪುದನಾರೂ ಅರಿಯರಲ್ಲ !
ಶಬ್ದದೊಳಗೆ ನಾದವಿರ್ಪುದನೆಲ್ಲರು ಬಲ್ಲರಲ್ಲದೆ
ನಾದದೊಳಗೆ ಮಂತ್ರವಿರ್ಪುದನಾರೂ ಅರಿಯರಲ್ಲ !
ನಾದದೊಳಗೆ ಮಂತ್ರವಿರ್ಪುದನೆಲ್ಲರು ಬಲ್ಲರಲ್ಲದೆ
ಮಂತ್ರದೊಳಗೆ ಶಿವನಿರ್ಪುದನಾರೂ ಅರಿಯರಲ್ಲ !
ಮಂತ್ರದೊಳಗೆ ಶಿವನಿರ್ಪುದನೆಲ್ಲರು ಬಲ್ಲರಲ್ಲದೆ
ಆ ಶಿವನ ಕೂಡುವ ಅವಿರಳ ಸಮರಸವನಾರೂ ಅರಿಯರಲ್ಲ,
ಅಖಂಡೇಶ್ವರಾ !

ಎಂದು ಹೇಳಿರುವನು. ಈ ವಚನವು ಮಂತ್ರೋತ್ಪತ್ತಿ ಮತ್ತು ಮಹಿಮೆಯನ್ನೂ, ಮಂತ್ರಯೋಗದಿಂದ ಶಿವನೊಳಗೆ ಸಮರಸವಾಗುವ ಹದನವನ್ನೂ ನಿರೂಪಿಸುವದು.

ಪಂಚವಿಧವಾದ ಯೋಗಗಳಲ್ಲಿ ಮಂತ್ರಯೋಗವು ಬಹು ಸುಲಭವಾಗಿರುತ್ತದೆ. ನಿರಂತರವಾದ ಮಂತ್ರಾನುಸಂಧಾನದ ಮುಖಾಂತರವಾಗಿ ಜೀವ ಪರಮರನು ಒಂದುಗೂಡಿಸುವ ಸಾಧನೆಯೇ ಮಂತ್ರಯೋಗವಾಗಿ ಪರಿಣಮಿಸುವದು. 'ಮನನಾತ್ ತ್ರಾಯತೆ ಇತಿ ಮಂತ್ರಃ'; ಮನನ ಮಾಡುವುದರಿಂದ ಯಾವುದು ತಾರಕವಾಗುವದೋ ಅದುವೆ ಮಂತ್ರವಾಗಿದೆ. ಮಂತ್ರಯೋಗಕ್ಕೆ ನಾಮವೇ ಮುಖ್ಯವಾಗಿದೆ. 'ನಾಮದಲ್ಲಿ ನಿಜಧಾಮವುಂಟು, ನಿನ್ನ ಕಾಮಿಸಿ ಕರೆದಲ್ಲಿ ಪ್ರೇಮವುಂಟು' ಎಂದು ಅನುಭಾವಿಗಳು ನಾಮದ ಮಹತಿಯ ಬಗೆಗೆ ಹಾಡಿಕೊಂಡಿರು

ವದು. ಹೆಸರಿನಲ್ಲಿ ಆತ್ಮನ ಅಸ್ತಿತ್ವವಡಗಿದೆ. ತೊಟ್ಟಿಲಲ್ಲಿ ತೂಗಿ ಕೂಸಿನ ಕಿವಿಯಲ್ಲಿ ಊದಿ ಇಟ್ಟ ಹೆಸರು ಇಡಿಯ ಜೀವನವೆಲ್ಲ ಪರಿಣಾಮವನ್ನುಂಟು ಮಾಡುವದು. ಹೆಸರಿಟ್ಟು ಕರೆವ ಶಬ್ದದ ಪರಿಣಾಮವನ್ನು ಗುರುತಿಸಲಿಕ್ಕೆ ಗಾಢವಾದ ನಿದ್ರೆಯಲ್ಲಿ ಮಲಗಿದ ವ್ಯಕ್ತಿಯನ್ನು ಹೆಸರುಗೊಂಡು ಕರೆದರೆ ಸಾಕು; ಇನ್ನಾವ ಹೆಸರುಗೊಂಡು ಕೂಗಿದರೂ ಎಚ್ಚರವಾಗದಿದ್ದ ವ್ಯಕ್ತಿ ತನ್ನ ಹೆಸರುಗೊಂಡು ಕರೆದಾಗ ತಟ್ಟನೆ ಏಳುವನು. ನಿದ್ರೆಯಲ್ಲಿ ಎಲ್ಲ ಇಂದ್ರಿಯಗಳು ಸ್ತಬ್ಧವಾಗಿದ್ದರೂ ಶ್ರೋತ್ರೇಂದ್ರಿಯವು ಒಂದಿಷ್ಟು ಜಾಗ್ರತವಿರುವದು. ಎಂತಲೇ ಹೆಸರು ತೆಗೆದುಕೊಂಡು ಕೂಗಿದಾಗ ನಿದ್ರಿತನು ಎಚ್ಚರಾಗುವನು. ಆ ಹೆಸರು ಅವನ ಈ ದೇಹಕ್ಕೆ, ಈ ಪಿಂಡಕ್ಕೆ ಅದು ನಿಜವಾಗಿ ಆತ್ಮನಿಗಿದ್ದರೂ ಕಣ್ಣಿಗೆ ಕಾಣದ ಆತ್ಮನ ಬದಲು ಕಾಣುವ ಈ ದೇಹಕ್ಕೆ ಅದು ಅನ್ವಯಿಸುತ್ತದೆ. ಹಾಗಾದರೆ ಈ ಹೆಸರಿನ ಈ ನಾಮದ ಮೂಲವೆಲ್ಲಿ? ಇದು ಮೊದಲು ದೇಹಕ್ಕೆ ಅನ್ವಯಿಸಿದಂತೆ ತೋರಿದರೂ ದೇಹಕ್ಕೆ ಸಂಬಂಧಪಟ್ಟುದಲ್ಲ. ದೇಹದಲ್ಲಿ ಎಡೆಯಾಡುವ ಉಸಿರು ನಿಂತರೆ ದೇಹವು ಬಿದ್ದು ಹೋಗುವದು. ಚೈತನ್ಯವನ್ನು ಕಳೆದುಕೊಂಡ ಅದು ಜಡವಾಗಿ ಬಿದ್ದು ಬಿಡುವದು. ನಿಜವಾಗಿ ದೇಹವು ಜಡವೇ. ಆದರೆ ಉಸಿರಿನ ಅಥವಾ ಪ್ರಾಣದ ಎಡೆಯಾಟದಿಂದ ದೇಹದೊಳಗೆ ಚೈತನ್ಯವು ಒಡಮೂಡುತ್ತದೆ. ಉಸಿರಿನ ಆಧಾರದಲ್ಲಿ ಪಿಂಡವು ಬಾಳುವದು. ಇದರಿಂದ ಉಸಿರಿನಲ್ಲಿ ಅಥವಾ ಪ್ರಾಣದಲ್ಲಿ ಪಿಂಡವಿದ್ದಂತೆಯೇ ಸರಿ. ಉಸಿರಿನ ಎಡೆಯಾಟದಿಂದ ಒಂದು ಬಗೆಯ ಸಪ್ಪಳವಾಗುವದಿಲ್ಲವೆ? ಈ ಸಪ್ಪಳವೇ ಶಬ್ದ ಎಂದೆನಬಹುದು. ಆದರೆ ಸಪ್ಪಳವೆಲ್ಲವೂ ಶಬ್ದವಲ್ಲ, ಆ ಸಪ್ಪಳವು ತಾಳ ಲಯ ಬದ್ಧವಾಗಿ ಅರ್ಥಗರ್ಭಿತವಾಗಿದ್ದರೆ ನಾದವೆನಿಸುವದು. ಈ ನಾದದಲ್ಲಿ ಮಂತ್ರವಿದೆ. ನಾದವು ಗತಿಯನ್ನು ಸೂಚಿಸುವದು. ಗತಿಯಲ್ಲಿ ಮತಿಯಿದೆ. ಮತಿಯಿಂದ ಮಂತ್ರ. ಏನೂ ಪ್ರಯತ್ನವಿಲ್ಲದೆ ಉಸಿರನ್ನು ಬಿಡುವದು ತೆಗೆದುಕೊಳ್ಳುವದು ನಡೆದಿರುವಾಗ 'ಹಂ ಸಂ' ಎಂಬ ನಾದ ಅಥವಾ ಧ್ವನಿವಿಶೇಷವು ಹುಟ್ಟುತ್ತದೆ, ಸೊಂಯಿ ಸೊಂಯಿ ಎಂಬ ಧ್ವನಿಯುಂಟಾಗುತ್ತದೆ. ಇದರಲ್ಲಿ 'ಸೋಹಂ– ಅವನೇ ನಾನು ಎಂಬುದು ತಾಳ ಬದ್ಧವಾದ ಶಬ್ದ. ಇದರಲ್ಲಿಯ 'ಹ ಸ' ಎಂಬೆರಡು ಅಕ್ಷರಗಳನ್ನು ಕಳೆದರೆ ಉಳಿಯುವದು 'ಓಂ'. ಇದುವೆ ಮಂತ್ರ. ಈ ಓಂಕಾರವೇ ಆತ್ಮನ ಅಥವಾ ಶಿವನ ಹೆಸರು.

ಪಿಂಡದೃಷ್ಟಿಯಿಂದ ನೋಡಿದರೆ ಓಂಕಾರವೇ ಆತ್ಮನ ಹೆಸರಾಯಿತಷ್ಟೆ. ಪಿಂಡದೃಷ್ಟಿಯಿಂದ ಪ್ರತ್ಯಗಾತ್ಮ, ಬ್ರಹ್ಮಾಂಡದ ದೃಷ್ಟಿಯಿಂದ ಪರಮಾತ್ಮ. ಪ್ರಪಂಚವು ವಿಶಾಲವಾಗಿ ಕಾಣುವದಾದರೂ ಇದು ನೆಲ ನೀರು ಬೆಂಕಿ ಗಾಳಿ ಬಯಲು ಎಂಬ ಪಂಚಭೂತಗಳಿಂದ ಕೂಡಿದೆ. ಒಂದೊಂದು ಭೂತವನ್ನು ಒಂದೊಂದು ಹೆಸರಿನಿಂದ ಕರೆಯಬೇಕಲ್ಲವೆ? ಪೃಥ್ವಿಗೆ 'ನ' ಕಾರವೆಂದರೆ ಅದು ಈ ಆಕಾರವನ್ನು ತಾಳುವದು. ಯೋಗಿಗಳು ಈ ಆಕಾರವನ್ನು ಯೋಗದೃಷ್ಟಿಯಿಂದ ಕಾಣುವರು. ಹೀಗೆಯೇ ಅಪ್ಪುವಿಗೆ ಮಕಾರ, ಅಗ್ನಿಗೆ ಶಿಕಾರ, ವಾಯುವಿಗೆ ಮಕಾರ, ಆಕಾಶಕ್ಕೆ ಯಕಾರ ಎಂದು ಹೇಳಿದಾಗ ಅವು ಆಯಾ ಆಕಾರವನ್ನು ತಾಳುವವೆಂಬರ್ಥ. ಅದುವೆ ನಮಃಶಿವಾಯ! ಭಕ್ತಿಯ ದೃಷ್ಟಿಯಿಂದ ಹೀಗೆ ಅದನ್ನು 'ನಮಃ ಶಿವಾಯ ಎಂದರೆ ಶಿವನಿಗೆ ನಮಸ್ಕಾರ' ಎಂದು ಕರೆದರು. 'ನ ಮಮ ಶಿವಸ್ಯ ಸರ್ವಂ— ಇದು ನನ್ನದಲ್ಲ ಎಲ್ಲವೂ ಶಿವನದು.' ನಮಃ ಎಂದರೆ ಅನ್ನ; 'ನಮಃ ಶಿವಾಯ— ಶಿವನಿಗೆ ನಾನು ಅನ್ನವಾಗಲಿ' ಎಂಬ ರಹಸ್ಯವು ಬ್ರಹ್ಮಾಂಡದ ದೃಷ್ಟಿಯಿಂದ ಹೇಳಿದ ಈ ಪಂಚಾಕ್ಷರೀ ಮಂತ್ರದಲ್ಲಿದೆ. ಶಿವನು ಜೀವನನ್ನು ತಿನ್ನುತ್ತ ಹೋದಂತೆ ಜೀವನು ಶಿವನಾಗುವನು. 'ಓಂ ನಮಃ ಶಿವಾಯ' ಎನ್ನುವುದರಿಂದ ಪಿಂಡ – ಬ್ರಹ್ಮಾಂಡಗಳಲ್ಲಿ, ಆತ್ಮ–ಪರಮಾತ್ಮರಲ್ಲಿ ಐಕ್ಯ ಅಥವಾ ಹೊಂದಿಕೆಯು ಇಲ್ಲವೆ ಸಾಮರಸ್ಯವು ಸೂಚಿಸಲ್ಪಡುವದು. ಈ ಷಡಕ್ಷರ ಮಂತ್ರದಲ್ಲಿ ಪಿಂಡಬ್ರಂಹ್ಮಾಂಡಯೋರೈಕ್ಯಂ, ಆತ್ಮ ಪರಮರ ಸಾಮರಸ್ಯ ನಿರ್ದೇಶಿತವಾಗಿದೆ.

ನಾಂ ಎಂಬುದೇ ನಂದಿಯಾಗಿ, ಮಾಂ ಎಂಬುದೇ ಮಹತ್ತಾಗಿ,
ಶೀಂ ಎಂಬುದೇ ರುದ್ರನಾಗಿ, ವಾಂ ಎಂಬುದೇ ಹಂಸಿಯಾಗಿ,
ಯಾಂ ಎಂಬುದೇ ಅರಿವಾಗಿ, ಓಂ ಕಾರವೆ ಗುರುವಾಗಿ,
ಸಂಬಂಧವೆ ಅಸಂಬಂಧವಾಗಿ, ಎರಡೂ ಒಂದೆಯಾಗಿ
ಗುಹೇಶ್ವರನಲ್ಲಿ ಸಂಬಂಧಿ.

ಎಂದು ಪ್ರಭುದೇವರು ತಿಳಿಸಿರುವ ಮಾತುಗಳಲ್ಲಿ ಮಂತ್ರ ಮಹಿಮೆಯು ಸೂಚ್ಯವಾಗಿ ವ್ಯಕ್ತವಾಗಿರುತ್ತದೆ. ವೀರಶೈವರಲ್ಲಿ ಗುರುವು ಕೈಯಲ್ಲಿ ಲಿಂಗವ ಕೊಟ್ಟು ಕಿವಿಯಲ್ಲಿ ಮಂತ್ರವನ್ನು ಹೇಳುವಾಗ, 'ಮಂತ್ರವೇ ಲಿಂಗ, ಲಿಂಗವೇ ಮಂತ್ರ' ಎಂಬ ಕೀಲವನ್ನು ಅರುಹುವನು. ಇದರಿಂದ ಲಿಂಗವೆಂದರೆ ಷಡಕ್ಷರ ಮಂತ್ರ,

ಪಿಂಡ–ಬ್ರಹ್ಮಾಂಡಗಳ ಹೊಂದಾಣಿಕೆಯನ್ನು ಕಾಣಿಸಿಕೊಡುವ ತಂತ್ರ— ಎಂಬುದು ಸ್ಪಷ್ಟವಾಗುವದು. ಸರ್ಪಭೂಷಣ ಶಿವಯೋಗಿಗಳು ಈ ಮಂತ್ರ ಮಹಿಮೆಯನ್ನು ತಿಳಿಸುವ ಮಂತ್ರಯೋಗವನ್ನು ಕುರಿತು,

ಗುರುಬೋಧೆಯಿಂದತಿಶಯವಾದುದೊಂದುಂಟಿ
ಪರತತ್ವವನು ಬೋಧಿಸುವುದಾಗಿ ॥ ಪಲ್ಲವಿ ॥
ಮಂತ್ರಾದಿ ದೇವತೆಯಹ ಮೂರ್ತಿಯೊಳು ಬಾಹ್ಯ
ಭ್ರಾಂತಿಯಳಿದು ಮನವೆರಗಿಸಿ ।
ಅಂತರಂಗದೊಳು ಭಜಿಸೆ ಮುಕ್ತಿಯಹುದೆಂದು
ಮಂತ್ರಯೋಗವ ಸೂಚಿಸಿದರಿಂದೆ ॥

ಎಂದು ಹೇಳಿರುವರು. ಇದರಿಂದ ಬಾಹ್ಯಮೂರ್ತಿಯೊಂದನ್ನು ಕುರಿತು ಭ್ರಾಂತಿಗೀಡಾಗಿ ಮಂತ್ರಜಾಪಿಯಾಗದೆ ತನ್ನ ಅಂತರಂಗದಲ್ಲಿ ಗುರುದತ್ತವಾದ ಮಂತ್ರವನ್ನು ಜಪಿಸಿ ಮುಕ್ತನಾಗಬೇಕು, ಇದುವೆ ಮಂತ್ರಯೋಗದಲ್ಲಿರುವ ಮಹತ್ವ ಎಂಬುದು ವಿದಿತವಾಗುತ್ತದೆ.

ಗುರುದತ್ತವಾದ ಮಂತ್ರದಲ್ಲಿ ಒಂದೇ ಒಂದು ಅಕ್ಷರವಿರಬಹುದು; ಇಲ್ಲವೆ ಒಂದು ಅಥವಾ ಹಲವು ಶಬ್ದಗಳಿರಬಹುದು; ಅಥವಾ ಒಂದು ವಾಕ್ಯವಾದರೂ ಇರಬಹುದು. ಇದರಲ್ಲಿ ಕೆಲವೊಂದು ಧಾರ್ಮಿಕ ಸೂತ್ರವಿರಬಹುದು, ಕೆಲವೊಂದು ಗಾಂಭೀರ್ಯಯುಕ್ತವಾದ ದಾರ್ಶನಿಕ ತತ್ವದ ಸಾರಸಂಗ್ರಹವಿರಬಹುದು. ಮಂತ್ರದ ಅರ್ಥವನ್ನು ಕುರಿತು ಮನನ ಮಾಡಬೇಕು, ಅಂದರೆ ಅದು ತಾರಕವಾಗುವದು. ಆಗ ಮಾತ್ರ ಅದು ಮಂತ್ರವೆನಿಸಲು ತಕ್ಕುದಾಗುವದು. ಮಂತ್ರದ ಅರ್ಥದಲ್ಲಿರಿಸಿದ ವಿಶ್ವಾಸ ಮತ್ತು ಚಿತ್ತದ ಏಕಾಗ್ರತೆ ಇವುಗಳ ಮೂಲಕ ಯೋಗಿಯು ಭೌತಿಕ ಬಂಧನಗಳಿಂದ ಮುಕ್ತನಾಗಿ ಆತ್ಮತತ್ವದ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುತ್ತಾನೆ. ಶಿವಯೋಗ ಪ್ರದೀಪಿಕೆಯ ಅಭಿಪ್ರಾಯದಂತೆ ಮಂತ್ರಯೋಗಿಯು ಯಾವಾಗಲೂ ಒಂದು ಎರಡು ಆರು ಇಲ್ಲವೆ ಎಂಟು ಅಕ್ಷರಗಳಿಂದ ಯುಕ್ತವಾದ ಮಂತ್ರವನ್ನು ಜಪಿಸುತ್ತಿರಬೇಕು:

ಏಕಾಕ್ಷರಂ ದ್ವ್ಯಕ್ಷರಂ ವಾ ಷಡಕ್ಷರಮಥಾಪಿ ವಾ ।
ಅಷ್ಟಾಕ್ಷರಂ ವಾ ಮೋಕ್ಷಾಯ ಮಂತ್ರಯೋಗೀ ಜಪೇತ್ ಸದಾ ॥

ಮನಸ್ಸು ಬಹಳ ಚಂಚಲವಾದದ್ದಾಗಿದೆಯಷ್ಟೆ ! ಮಂತ್ರಜಪವು ಮನಸ್ಸಿನ ಈ ಚಾಂಚಲ್ಯವನ್ನು ನಿವಾರಿಸಲಿಕ್ಕೆಂದು ಇರುತ್ತದೆ. ಮಂತ್ರಜಪದಿಂದ

ಮನವು ಸ್ಥಿರವಾಗಿ ಸ್ಥಿಮಿತಕ್ಕೆ ಬಂದು ಅದರಲ್ಲಿ ಜನ್ಮ ಜನ್ಮಾಂತರಗಳಿಂದ ಮೂಡಿಕೊಳ್ಳುತ್ತ ಬಂದಿದ್ದ ಸಂಸ್ಕಾರಗಳು ಅಳಿದು ಹೋಗುತ್ತವೆ. ಮಂತ್ರವು ಒಂದು ಶಕ್ತಿಯಾಗಿದೆ. ಸರಿಯಾಗಿ ಉಪಯೋಗ ಮಾಡಿಕೊಳ್ಳುವದರಿಂದ ಮಂತ್ರವು ಆಧ್ಯಾತ್ಮಿಕ ವಿಕಾಸದಲ್ಲಿ ಅತ್ಯಧಿಕವಾದ ಸಹಾಯವನ್ನು ಮಾಡುತ್ತದೆ. ಮಂತ್ರವು ಕುಲಕುಂಡಲಿನಿಯ (ಶಿವ-ಶಕ್ತಿಯ) ವ್ಯಕ್ತರೂಪವಾಗಿದೆ. ಆದ್ದರಿಂದ ಮೂಲಾಧಾರದಲ್ಲಿ ಸುಪ್ತವಾಗಿದ್ದ ಕುಂಡಲಿನಿಯನ್ನು ಎಬ್ಬಿಸಿ ಸಹಸ್ರಾರದ ವರೆಗೆ ಅದನ್ನೊಯ್ದು ಅಲ್ಲಿ ಶಿವನೊಡನೆ ಸಂಯೋಗಗೊಳಿಸಲು ಮಂತ್ರವನ್ನು ಪ್ರಯೋಗಿಸುತ್ತಾರೆ. ಪಂಚಾಕ್ಷರಿ ಮಂತ್ರದಲ್ಲಿರುವ ಐದು ಅಕ್ಷರಗಳು ಐದು ಚಕ್ರಗಳಲ್ಲಿ ಸಂಬಂಧಿತವಾಗಿರುತ್ತವೆ. ಆಧಾರದಲ್ಲಿ 'ನ'ಕಾರವು ಜೋಡಣೆಯಾಗಿ ವಿಶುದ್ಧಿಯ ವರೆಗೆ ಏರುತ್ತ ಅಲ್ಲಿ 'ಯ'ಕಾರವು ಸಂಬಂಧಿಸಲ್ಪಡುತ್ತದೆ. ಆಜ್ಞಾಚಕ್ರದಲ್ಲಿ ಈ ಐದು ಅಕ್ಷರಗಳ ಬೀಜರೂಪವಾದ 'ಓಂ'ಕಾರವು ಸ್ಥಾಪಿತವಾಗಿರುತ್ತದೆ. ಮಂತ್ರಯೋಗದಿಂದ ಅನೇಕ ಸಿದ್ಧಿಗಳು ಲಭಿಸುವವಾದರೂ ಶಿವಯೋಗದಲ್ಲಿ ಈ ಉದ್ದೇಶವೇ ಮುಖ್ಯವಾದುದಲ್ಲ. ಮುಕ್ತಿ ಅಥವಾ ಸಮರಸವೇ ಶಿವಯೋಗಿಯ ಆತ್ಯಂತಿಕ ಉದ್ದೇಶವಾಗಿರುವುದರಿಂದ ಇದನ್ನು ಈಡೇರಿಸಿಕೊಳ್ಳುವದಕ್ಕಾಗಿ ಅವನ ಲಕ್ಷ್ಯವು ಕೇಂದ್ರೀಕೃತವಾಗಿರುತ್ತದೆ. ಶಿವಯೋಗದಲ್ಲಿ ಲಿಂಗದಲ್ಲಿ ಧ್ಯಾನವನ್ನಿರಿಸಿ ಗೌಪ್ಯವಾಗಿ ಮಂತ್ರೋಚ್ಚಾರಣೆ ನಡೆಯುತ್ತದೆ.

ಜಪವಿಧಾನವು ವಾಚಕ ಉಪಾಂಶು ಮಾನಸಿಕ ಎಂದು ಮೂರು ವಿಧವಾಗಿದೆ. ಎಲ್ಲರಿಗೂ ಕೇಳುವಂತೆ ಒದರಿ ಮಂತ್ರೋಚ್ಚಾರ ಮಾಡುವದು ವಾಚಕ. ಅದು ಕೀರ್ತನೆ ಅಥವಾ ಭಜನೆಯಾಗುವದು. ತುಟಿಯನ್ನು ಮಾತ್ರ ಅಲ್ಲಾಡಿಸಿ ಮಂತ್ರ ಪಠಣಮಾಡುವದು ಉಪಾಂಶು, ಕೇವಲ ಮನಸ್ಸಿನಲ್ಲಿಯೇ ಜಪಿಸುವದು ಮಾನಸಿಕ ಜಪ ಎನಿಸುವದು. ಮಾನಸಿಕ ಜಪವೇ ನಿಜವಾದ ಜಪ. ಅದು ಎಲ್ಲಕ್ಕೂ ಶ್ರೇಷ್ಠವಾದ ಜಪವಾಗಿದೆ. ಮಂತ್ರ ಜಪದಲ್ಲಿ ಮನಃಪೂರ್ವಕವಾಗಿ ಮನದಲ್ಲಿ ನೆನೆಯುವದು ಪ್ರಾಮುಖ್ಯವಾಗಿದೆ. ಇಂತಹ ಮಂತ್ರ–ಜಾಪಿಯಾದ ಸಾಧಕನು ಕನಿಷ್ಠ ಪಕ್ಷ ಹೀಗೆ ಇರಲು ಕಲಿಯಬೇಕು: ದಯವಿರಬೇಕು ಸಕಲ ಪ್ರಾಣಿಗಳಲ್ಲಿ, ಭಯವಿರಬೇಕು ಗುರು–ಹಿರಿಯರಲ್ಲಿ (ಪೂಜ್ಯ ಭಾವನೆ); ಸ್ವಯ್ಯುವಿರಬೇಕು ಸಕಲ ಗುಣಗಳಲ್ಲಿ (ಸಂಯಮನ); ಸಯುವಿರಬೇಕು ನುಡಿ-ಗಡಣದಲ್ಲಿ; ಎಂದರೆ ಅವನು ಮಂತ್ರಯೋಗವನ್ನಾಚರಿಸಲು ಅರ್ಹನಾಗುವನು. ಯಾವ ಶಾಸ್ತ್ರವೇ ಆಗಲಿ; ಯಾವ ಯೋಗವೇ ಆಗಲಿ, ಅದರ ಆತ್ಯಂತಿಕ

ಪ್ರಯೋಜನವೆಂದರೆ ಶಾಂತಿ ಮತ್ತು ಆನಂದ. ಮಂತ್ರಯೋಗವು ಇದಕ್ಕೆ ಹೊರತಾದುದಲ್ಲ. ಮಂತ್ರಯೋಗದ ಅನುಸಂಧಾನದಿಂದಲೂ ಶಾಂತಿ ಆನಂದಗಳು ಲಭಿಸುವವು, ನಾಮರಸ್ಯವು ಒದಗುವುದು.

ಲಯಯೋಗವು ಶಾಕ್ತಧರ್ಮದ ಕುಂಡಲಿನಿಯೋಗವಾಗಿರುತ್ತದೆ. ಶಕ್ತಿಯು ಸ್ಥಿರ ಮತ್ತು ಚರವೆಂದು ದ್ವಿವಿಧರೂಪ ಧಾರಣಮಾಡುತ್ತದೆ. ಸ್ಥಿರವು ಕುಂಡಲಿನಿ ಶಕ್ತಿಯಾದರೆ ಚರವು ಶರೀರದ ಕಾರ್ಯಶಕ್ತಿಯಾದ ಪ್ರಾಣವಾಗಿದೆ. ಪ್ರತಿ-ಯೊಂದು ಕಾರ್ಯ ಇಲ್ಲವೆ ಗತಿಯು ಹಿನ್ನೆಲೆಯಾಗಿ ಒಂದು ಸ್ಥಿರ ಸಂಗತಿಯಿರು-ತ್ತದೆ. ಮನುಷ್ಯನ ಶರೀರದಲ್ಲಿ ಈ ಸ್ಥಿರ ಕೇಂದ್ರವಾಗಿ ಕುಂಡಲಿನಿ ಶಕ್ತಿಯಿರುತ್ತದೆ. ಈ ಶಕ್ತಿಯು ಅವನಲ್ಲಿ ಅಧೋಮುಖಿಯಾಗಿ ಸುಪ್ತಾವಸ್ಥೆಯಲ್ಲಿ ಆಧಾರ ಸ್ಥಾನದಲ್ಲಿ ಅವಿತುಕೊಂಡಿರುತ್ತದೆ. ಶರೀರ ಮತ್ತು ಪ್ರಾಣದ ಗತಿಗೆ ಆಧಾರವಾಗಿರುವದೂ ಈ ಶಕ್ತಿಯೇ. ಈ ಶಕ್ತಿಯ ಕೇಂದ್ರವು ಜ್ಞಾನದ ತೀರಾ ಸ್ಥೂಲ ರೂಪವಾಗಿದೆ. ಈ ಶಕ್ತಿಯನ್ನು ಜಾಗ್ರತಗೊಳಿಸಿ ಊರ್ಧ್ವಮುಖ ಮಾಡಿದಾಗ ಅದು ಆಧಾರದಿಂದ ಷಟ್‌ಚಕ್ರಗಳನ್ನು ಭೇದಿಸಿ ಮೇಲೆ ಮೇಲೆ ಏರತೊಡಗುತ್ತದೆ. ಕೊನೆಗೆ ಅದು ಸಹಸ್ರಾರವನ್ನು ಸೇರಿ ಅಲ್ಲಿರುವ ಶಿವನೊಡನೆ ಬೆರೆತು ಶಿವ-ಶಕ್ತಿ ಸಂಪುಟವನ್ನೂ ವ್ಯಕ್ತಗೊಳಿಸುತ್ತದೆ. ಜೀವಶಕ್ತಿಯು ಶಿವಶಕ್ತಿಯಲ್ಲಿ ಲಯ ಹೊಂದುವುದರಿಂದ ಶಿವಯೋಗ ಪ್ರದೀಪಿಕೆಯು ಇದನ್ನು ಲಯಯೋಗವೆಂದು ವರ್ಣಿಸುತ್ತದೆ:

> ಯಸ್ಯ ಚಿತ್ತಂ ನಿಜಧ್ಯೇಯೇ ಮನಸಾ ಮರುತಾ ಸಹ ।
> ಲೀನಂ ಭವತಿ ನಾದೇ ವಾ ಲಯಯೋಗೀ ಸ ಏವ ಹಿ ॥

ಶಿವಯೋಗ ಪ್ರದೀಪಿಕೆಯ ಲಯಯೋಗದ ಈ ವಿವರಣೆಯನ್ನು ಸರ್ಪಭೂಷಣ ಶಿವಯೋಗಿಗಳ ಲಯಯೋಗದ ವ್ಯಾಖ್ಯೆಯೊಡನೆ ಹೋಲಿಸಬಹುದು:

> ಬಯಸದೆ ಭೋಗಾಭಿರತಿಗಳ ಪೇಳ್ದ ಚಿನ್
> ಮಯ ಪರತತ್ವದೊಳಗೆ ಚಿತ್ತ ।
> ಲಯಿಸೇಕಮಯವಾಗೆ ನಿರ್ವಾಣವಹುದೆಂದು
> ಲಯಯೋಗವನು ವಾಚಿಸಿದರಿಂದೆ ॥

ಚಿತ್ತವು ಪರತತ್ವದಲ್ಲಿ ಲೀನವಾಗಿ ಒಂದಾಗುವಂತೆ ಮಾಡುವುದೇ ಲಯ-ಯೋಗವು. ಅದರಿಂದ ಮೋಕ್ಷ ಸಿದ್ಧಿಯಾದಪುದು ಎಂದು ಲಯಯೋಗಿಯ ಅನುಭವ.

ಶಿವಯೋಗವನ್ನು ಬಯಸಿದ ಭಕ್ತನು ಜ್ಞಾನದತ್ತ ಅಭಿರುಚಿಯನ್ನು ತಿರುಗಿಸಿ ಆ ಜ್ಞಾನದ ದ್ವಿತೀಯ ಭಾಗದಲ್ಲಿ ಲಯಯೋಗ ಸಾಧನವನ್ನು ಪ್ರಾರಂಭಿಸುತ್ತಾನೆ. ಲಯಯೋಗವು ಅಂತಃಪೂಜೆಯಾಗಿ ಪ್ರಾಣಲಿಂಗ ಪೂಜೆಯಲ್ಲಿ ವಿಕಾಸಗೊಳಿಸುತ್ತದೆ. ಆಧ್ಯಾತ್ಮಿಕ ಸಾಧನೆಯಲ್ಲಿಯ ಸಾಧಕನಿಗೆ ಮುಕ್ತಿಯ ಹಂಬಲದಲ್ಲಿ ಆಂತರಿಕ ಪೂಜೆಯು ಮೊದಲನೆಯ ಮೆಟ್ಟಿಲಾಗಿರುತ್ತದೆ. ಅಂತಃಪೂಜೆಯು ಕಠಿಣವಾದುದೇನೋ ನಿಜ. ಆದ್ದರಿಂದಲೇ ಈ ಪ್ರಾಣಲಿಂಗದ ಪೂಜೆಗಿಂತ ಮೊದಲು ಇಷ್ಟಲಿಂಗ ಪೂಜೆಯ ಆವಶ್ಯಕತೆಯನ್ನು ತಿಳಿಸಿಕೊಟ್ಟಿರುವರು. ಶಿವಯೋಗ ಪ್ರದೀಪಿಕೆಯ ಮೇರೆಗೆ ಆಭ್ಯಂತರ ಪೂಜೆಯು ಬಹು ಮುಖ್ಯವಾಗಿರುತ್ತದೆ. 'ಮುಖ್ಯಾ ಚಾಭ್ಯಂತರೀ ಪೂಜಾ ಸಾ ಚ ಬಾಹ್ಯಾರ್ಚನೋದಿತಾ'. ಬಾಹ್ಯ ಸಂಗತಿಗಳಿಗೆ ಯಾವಾಗಲೂ ಮೋಹಿತವಾದ ಮನಸ್ಸು ಶಾರೀರಿಕ ಸುಖಕ್ಕೋಸುಗ ಹೊರಗಿನ ವಸ್ತುಗಳನ್ನೇ ಅವಲಂಬಿಸುತ್ತದೆ. ಆಂತರಿಕ ಸಾಧನೆಯಿಂದ ಇದನ್ನು ಅಂತರ್ಮುಖಿಯನ್ನಾಗಿ ಮಾಡುವದು ಕಷ್ಟಸಾಧ್ಯವಾಗಿದೆ. ಆದ್ದರಿಂದ ಪೂಜೆಯ ಬಾಹ್ಯಕ್ರಿಯೆಗಳ ಹಿಂದೆ ಅಡಗಿದ ಗೂಢವಾದ ಸಿದ್ಧಾಂತವನ್ನು ವಿಚಾರ ಮಾಡುತ್ತ ಸತ್ಕ್ರಿಯಾಚರಣೆಗೆಯ್ಯುವದರ ಆವಶ್ಯಕತೆಯನ್ನು ತೋರಿಸಿಕೊಟ್ಟಿರುವರು. ಸತ್ಕ್ರಿಯೆಯೇ ಲಿಂಗವೆಂದು ತಿಳಿದು ಅದರ ಅನುಸಂಧಾನದಿಂದ ಸಾಧಕ–ಭಕ್ತನು ಅಂತಃಪೂಜೆಗೆ ಅಥವಾ ಪ್ರಾಣಲಿಂಗದ ಪೂಜೆಗೆ ಅರ್ಹತೆಯನ್ನು ಪಡೆಯುತ್ತಾನೆ. ಸಿದ್ಧಾಂತಶಿಖಾಮಣಿಯಲ್ಲಿ ಚಿಲ್ಲಿಂಗ ಪೂಜೆಯೆಂದು ಇದನ್ನು ಬಹಳ ಸುಂದರವಾಗಿ ವರ್ಣಿಸಲಾಗಿದೆ. ಸರ್ಪಭೂಷಣ ಶಿವಯೋಗಿಗಳ ಪ್ರಾಣಲಿಂಗ ಪೂಜೆಯನ್ನು ತಿಳಿಸುವ 'ಲಿಂಗಪೂಜೆಯ ಮಾಡಿರೊ ನಿಮ್ಮೊಳು ಪ್ರಾಣಲಿಂಗ ಪೂಜೆಯ ಮಾಡಿರೊ' ಎಂಬ ಪದ್ಯವೂ ಅಷ್ಟೇ ಮನೋಹರವೂ ಮಾರ್ಮಿಕವೂ ಆಗಿದೆ. ಶಿವಯೋಗ ಪ್ರದೀಪಿಕೆಯಲ್ಲಿ ಪ್ರಾಣಲಿಂಗ ಪೂಜೆಯ ಅಷ್ಟವಿಧೋಪಚಾರಗಳನ್ನು ಯೋಗದ ಅಷ್ಟಾಂಗಗಳಿಗೆ ಹೋಲಿಸಿದ ಬಹಳ ವಿಸ್ತೃತವಾದ ವರ್ಣನೆಯನ್ನು ಕಾಣುತ್ತೇವೆ. ಷಟ್ಸ್ಥಲದಲ್ಲಿ ಮೊದಲಿನ ಭಕ್ತ ಮಹೇಶ್ವರ ಪ್ರಸಾದಿ ಸ್ಥಲಗಳಲ್ಲಿ ಕ್ರಿಯಾಮಾರ್ಗದ ಬೋಧೆ ಇರುತ್ತದೆ. ಮುಂದೆ ಪ್ರಾಣಲಿಂಗ ಸ್ಥಲದಿಂದ ಜ್ಞಾನಮಾರ್ಗವು ಪ್ರಾರಂಭವಾಗುತ್ತದೆ. ಇಲ್ಲಿ ಆಂತರಿಕ ಚಿಲ್ಲಿಂಗ ಪೂಜೆಯ ಹಾಗು ಧ್ಯಾನದ ಮಹತಿಯನ್ನು ಕುರಿತು ತಿಳಿಯಪಡಿಸಲಾಗುತ್ತದೆ. ಪ್ರಾಣಲಿಂಗ ಪೂಜೆಯ ಮುಖಾಂತರವಾಗಿ ಕುಂಡಲಿನೀ ಶಕ್ತಿಯು ಜಾಗ್ರತವಾಗಿ ಕ್ರಮವಾಗಿ

ಷಟ್‌ಚಕ್ರವನ್ನು ಭೇದಿಸಿ ಸಹಸ್ರಾರದಲ್ಲಿ ಶಿವನೊಡನೆ ಸಾಮರಸ್ಯವನ್ನು ಪಡೆಯುತ್ತದೆ.

'ಶರೀರಮಾದ್ಯಂ ಖಲು ಯೋಗಸಾಧನಂ'; ಯೋಗ ಸಾಧನೆಗೆ ಶರೀರವು ಸುದೃಢವಾಗಿರಬೇಕು. ಬಲಶಾಲಿಯಾದ ಶರೀರದ ಮುಖಾಂತರವಾಗಿ ಸಮಾಧಿ ಸುಖವನ್ನು ಪಡೆಯುವದೇ ಹಠಯೋಗದ ಮುಖ್ಯವಾದ ಉದ್ದೇಶವಾಗಿರುತ್ತದೆ. ಸಮಾಧಿಯಲ್ಲಿ ಜೀವ–ಪರಮರು ಒಂದಾಗುವರು. ಅಲ್ಲಿ ಜೀವನು ಯಾವತ್ತೂ ದುಃಖಬಂಧಗಳಿಂದ ಬಿಡುಗಡೆಯನ್ನು ಹೊಂದಿ ಪರಮ ಜ್ಯೋತಿಸ್ವರೂಪನಾದ, ಆನಂದಮಯನಾದ ಪರಮಾತ್ಮನಲ್ಲಿ ಮಗ್ನನಾಗುವನು. ಈ ಯೋಗದಲ್ಲಿ ಶರೀರ ಸುದೃಢತೆಯ ಬಗೆಗೆ ಸಾಧಕನು ಹೆಚ್ಚು ಲಕ್ಷವನ್ನು ಪ್ರಾರ್ಥಿಸುತ್ತಾನೆ ಎಂಬುದು ಗೋರಕ್ಷನಾಥನು ವಜ್ರಶರೀರಿಯಾಗಿದ್ದನೆಂಬ ಸಂಗತಿಯಿಂದ ವ್ಯಕ್ತವಾಗುತ್ತದೆ. ಹಠಯೋಗ ಪ್ರದೀಪಿಕೆಯ ಅಭಿಪ್ರಾಯದಂತೆ 'ಹ'ಕಾರವು ಇಡಾ ನಾಡಿಯನ್ನೂ 'ಠ'ಕಾರವು ಪಿಂಗಳಾ ನಾಡಿಯನ್ನೂ ಸೂಚಿಸುವುದು. ಪ್ರಾಣಾಯಾಮದ ದ್ವಾರಾ ಇವೆರಡೂ ನಾಡಿಗಳಲ್ಲಿ ಸಂಚರಿಸುವ ಪ್ರಾಣ-ವಾಯುವನ್ನು ಸುಷುಮ್ನಾ ನಾಡಿಯಲ್ಲಿ ಪ್ರವೇಶಿಸುವಂತೆ ಮಾಡುವದು ಹಠಯೋಗದ ಉದ್ದೇಶವಾಗಿದೆ. ಆಗ ಸಹಜವಾಗಿ ಸಮಾಧಿ ನಿಲುಕುವುದು.

ಎಲ್ಲ ಯೋಗಗಳು ಪ್ರಾಣ ಮತ್ತು ಮನಗಳಲ್ಲಿ ಗಾಢವಾದ ಸಂಬಂಧ ವಿರುತ್ತದೆ ಎಂದು ಮಾನಿಸುತ್ತವೆ. 'ಪ್ರಾಣವನ್ನು ನಿನ್ನ ಅಳವಿಯಲ್ಲಿ ತೆಗೆದುಕೊ, ಎಂದರೆ ಮನಸ್ಸು ಸುಲಭವಾಗಿ ನಿನ್ನ ಕೈಯಲ್ಲಿ ಉಳಿಯುತ್ತದೆ' ಎಂದು ಹಠ-ಯೋಗವು ಹೇಳುತ್ತದೆ. ಘಟ (ದೇಹ) ಶುದ್ಧಿಗಾಗಿ ಧೌತಿ ಬಸ್ತಿ ನೇತಿ ನೌಲಿ ತ್ರಾಟಕ ಮತ್ತು ಕಪಾಲಭಾತಿ ಎಂಬ ಆರು ಕರ್ಮಗಳನ್ನು ಆಚರಿಸ ಬೇಕು. ಆಗ ಆಸನ ಮುದ್ರಾದಿಗಳ ಅಭ್ಯಾಸ ಮಾಡಲು ಅನುಕೂಲವಾಗು ವದು. ಇದರಿಂದ ಶರೀರದ ಸ್ವಾಸ್ಥ್ಯವೂ ಸ್ಥಿರತೆಯೂ ಸಿದ್ಧಿಸುವವು. ಹೀಗೆ ದೇಹ ಶುದ್ಧಿಯಾದ ತರುವಾಯ ಪ್ರಾಣಾಯಾಮದ ಮುಖಾಂತರವಾಗಿ ಯೋಗಿಯು ಸಮಾಧಿಗೆ ನಿಲುಕುತ್ತಾನೆ. ಆಸನ ಬಂಧ ಮುದ್ರಾ ಮತ್ತು ಪ್ರಾಣಾಯಾಮ ಗಳು ಹಠಯೋಗದ ನಾಲ್ಕು ಅಂಗಗಳೆಂದೂ ಇವುಗಳ ಮುಖಾಂತರವಾಗಿ ಕೇವಲ ಶರೀರದ ಸ್ವಾಸ್ಥ್ಯವನ್ನು ಪಡೆಯುವದೇ ಈ ಯೋಗದ ಗುರಿಯೆಂದೂ ಕೆಲವು ಯೋಗಿಗಳ ಅಭಿಮತವಿರುತ್ತದೆ. ಹಠಯೋಗದ ಪರಿಣಾಮವು ಎಲ್ಲರಿಗೂ ಒಂದೇ ಬಗೆಯಾಗಿರುವದಿಲ್ಲ. ಅದು ಭಿನ್ನ ಭಿನ್ನ ವ್ಯಕ್ತಿಗಳ ಮೇಲೆ ಭಿನ್ನ ಭಿನ್ನ

ವಾಗುತ್ತದೆ. ಸರ್ಪಭೂಷಣ ಶಿವಯೋಗಿಗಳ ಅಭಿಪ್ರಾಯದಲ್ಲಿ ಘಟ ಶುದ್ಧಿಯೇ ಕೊನೆಯ ಗುರಿಯಲ್ಲ, ಪ್ರಾಣವಾಯು ನಿರೋಧವೂ ಮುಖ್ಯವಲ್ಲ; ಆದರೆ ಪ್ರಾಣವಾಯುವನ್ನು ಕುಂಭಕದಲ್ಲಿ ನಿಲ್ಲಿಸಿ ನಿಟಿಲ ಭ್ರೂಮಧ್ಯದ ಜ್ಯೋತಿಯನ್ನು, ಅಂಗುಷ್ಟಮಾತ್ರ ಪುರುಷನನ್ನು ನಿರೀಕ್ಷಿಸಬೇಕು ಇದುವೆ ನಿಜವಾದ ಹಠಯೋಗ.

ಪಟುವಾಗಿ ಚರಿಸುವ ಪ್ರಾಣವಾಯುವ ನಾನಾ-
ಪುಟದೊಳು ತಡೆದು ಕುಂಭಿಸಿ ತನ್ನ ||
ನಿಟಿಲಜ್ಯೋತಿಯ ನಿರೀಕ್ಷಿಸೆ ಮೋಕ್ಷನಹುದೆಂದು
ಹಠಯೋಗದನುವ ಪೇಳಿದರಿಂದೆ ||

ಶಿವಯೋಗಸಾಧನೆಯಲ್ಲಿ ಹಠಯೋಗಕ್ಕೆ ಗೌಣಸ್ಥಾನವಿರುತ್ತದೆ. ನಾಡಿಶುದ್ಧಿಗಾಗಿ ಅವಶ್ಯವಿರುವಷ್ಟು ಮಾತ್ರ ಆಸನ ಬಂಧ ಮುದ್ರಾದಿಗಳನ್ನು ಪಾಲಿಸಲಾಗುತ್ತದೆ.

ಸಾಧಾರಣವಾಗಿ ಪಾತಂಜಲಯೋಗಶಾಸ್ತ್ರಕ್ಕೆ ರಾಜಯೋಗವೆಂದು ಹೇಳುವದುಂಟು. ಕೈವಲ್ಯಪ್ರಾಪ್ತಿಯೇ ಪಾತಂಜಲಯೋಗದ ಅಂತಿಮ ಉದ್ದೇಶವಾಗಿರುತ್ತದೆ. ಪ್ರಕೃತಿಯಿಂದ ಪುರುಷನು ಸಂಪೂರ್ಣವಾಗಿ ಬಿಡುಗಡೆಯನ್ನು ಹೊಂದಿದರೆ ಅದುವೆ ಕೈವಲ್ಯವೆನಿಸುವದು. ಅದಕ್ಕಾಗಿ ರಾಜಯೋಗವು ಇಂದ್ರಿಯನಿಗ್ರಹ ಮನೋನಿಗ್ರಹಗಳನ್ನು ಗುರಿಯಾಗಿಟ್ಟುಕೊಂಡಿರುತ್ತದೆ. ಕೈವಲ್ಯ ಪ್ರಾಪ್ತಿಗಾಗಿ ಪಾತಂಜಲ ಯೋಗದಲ್ಲಿ ಎಂಟು ಅಂಗಗಳನ್ನು ಹೇಳಲಾಗಿದೆ. ಇದಕ್ಕೆ ಅಷ್ಟಾಂಗಯೋಗವೆಂದೂ ಹೆಸರು. ಈ ಅಷ್ಟಾಂಗಗಳಲ್ಲಿ ಯಮ ನಿಯಮಗಳನ್ನು ಮೊದಲಿಗೆ ಪಾಲಿಸುವದು ಅತ್ಯವಶ್ಯವಿರುತ್ತದೆ. ಆ ಬಳಿಕ ಆಸನ ಪ್ರಾಣಾಯಾಮಗಳನ್ನು ಪಾಲಿಸುವರು. ಇವು ನಾಲ್ಕು ಅಂಗಗಳು ಪ್ರಾರಂಭಿಕ ಯೋಗದ ಅಭ್ಯಾಸವನ್ನು ತಿಳಿಸಿಕೊಡುತ್ತವೆ. ಆದರೆ ನಿಜವಾದ ಯೋಗವು ಈ ನಾಲ್ಕನ್ನು ಪಾಲಿಸಿದ ತರುವಾಯವೇ ಪ್ರಾರಂಭವಾಗುತ್ತದೆ. ನಾನಾಬಗೆಯಾದ ವಿಷಯಗಳು ಇಂದ್ರಿಯಗಳ ಮುಖಾಂತರವಾಗಿ ಮನಸ್ಸನ್ನು ಸದಾ ತಮ್ಮತ್ತ ಎಳೆಯುತ್ತಿರುತ್ತವೆ. ಸಾಧಕನು ಮನವನ್ನು ವಿಷಯಗಳಿಂದ ಬಿಡಿಸಿಕೊಂಡು ಧ್ಯಾನದತ್ತ ಹೊರಳಿಸಬೇಕಾಗುತ್ತದೆ. ಇದಕ್ಕೆ ಪ್ರತ್ಯಾಹಾರವೆಂದು ಹೆಸರು. ಅಷ್ಟಾಂಗದಲ್ಲಿ ಇದು ಐದನೆಯ ಅಂಗವಾಗಿರುತ್ತದೆ. ಆ ತರುವಾಯ ಸಾಧಕನು ಯಾವುದಾದರೊಂದು ವಸ್ತುವಿನಲ್ಲಿ ತನ್ನ ಮನವನ್ನು ಧ್ಯಾನದಲ್ಲಿ ಏಕಾಗ್ರಗೊಳಿಸಬೇಕಾಗುತ್ತದೆ. ಇದುವೆ ಧಾರಣ. ಧಾರಣದಿಂದ ಸಮಾಧಿಯ ಅವಸ್ಥೆಯೊದಗುವದು. ಸಮಾಧಿಯು ಎರಡು

ವಿಧವಾಗಿರುತ್ತದೆ ಸಂಪ್ರಜ್ಞಾತ ಸಮಾಧಿ, ಅಸಂಪ್ರಜ್ಞಾತ ಸಮಾಧಿ ಎಂದು. ಸಂಪ್ರಜ್ಞಾತ ಸಮಾಧಿಗೆ ಸಬೀಜ ಅಥವಾ ಸವಿಕಲ್ಪ ಸಮಾಧಿ ಎಂದೂ ಹೆಸರು. ಈ ಸಮಾಧಿಯಲ್ಲಿ ಯೋಗಿಗೆ ಸತ್ಯದ ಪೂರ್ಣ ರೂಪದಲ್ಲಿ ಜ್ಞಾನೋಪಲಬ್ಧಿಯಾಗುತ್ತದೆ. ನಿರ್ಬೀಜ ಇಲ್ಲವೆ ನಿರ್ವಿಕಲ್ಪ ಸಮಾಧಿಯೆಂದು ಹೆಸರಿರುವ ಅಸಂಪ್ರಜ್ಞಾತ ಸಮಾಧಿಯಲ್ಲಿ ಯೋಗಿಯು ಎಲ್ಲ ಸಂಸ್ಕಾರಗಳ ನಿರೋಧವನ್ನು ಮಾಡಿ ಬ್ರಹ್ಮಾನಂದದಲ್ಲಿ ತೂಗುಯ್ಯಾಲೆಯಾಡುತ್ತಿರುತ್ತಾನೆ. ಅಷ್ಟಾಂಗಯೋಗದಲ್ಲಿ ಮೊದಲಿನ ಈ ಐದು ಅಂಗಗಳಿಗೆ ಪೂರ್ವಭಾಗವೆಂದೂ, ಕಡೆಯ ಧ್ಯಾನ ಧಾರಣ ಸಮಾಧಿ ಇವಕ್ಕೆ ಕೊನೆಯ ಭಾಗವೆಂದೂ ಹೆಸರು. ಯೋಗದ ಈ ಉತ್ತರಭಾಗದ ಅಂಗಗಳ ಏಕತಾನವೇ ಸಂಯಮವು. ಈ ಸಂಯಮವನ್ನು ಯಾವುದೇ ಪದಾರ್ಥ—ವಸ್ತು—ವಿಚಾರ—ಕಲ್ಪನೆ ಇವುಗಳ ಮೇಲಿಟ್ಟು ಸಾಧಿಸಿದರೆ ಆಯಾ ಪದಾರ್ಥ—ವಸ್ತು—ವಿಚಾರ—ಕಲ್ಪನೆಗಳ ಬಗೆಗೆ ಯಥಾರ್ಥ ಜ್ಞಾನವಾಗುವದು. ಜ್ಞಾನವೇ ಶಕ್ತಿಯೆಂದು ಹೇಳುವರಲ್ಲವೇ ? ಯಾವ ವಸ್ತುಗಳ ಅಂತರಂಗದ ಬಗೆಗೆ ಯಥಾರ್ಥ ಜ್ಞಾನವಾಗಿದೆಯೋ ಆ ವಸ್ತುವಿನ ಮೇಲೆ ಸಹಜವಾಗಿ ಪ್ರಭುತ್ವವು ಸಾಧಿಸುವದು. ಆ ಪ್ರಭುತ್ವವೇ ಶಕ್ತಿ. ಯೋಗಿಯು ಸಂಯಮದ ಬಲದಿಂದ ಇಂಥ ಶಕ್ತಿಯನ್ನು ಸಂಪಾದಿಸುವನು. ಇಂಥ ಪ್ರಬಲವಾದ ಸಾಮರ್ಥ್ಯವನ್ನು ಪಡೆದ ಯೋಗಿಯು ಅಣಿಮಾದಿ ಸಿದ್ಧಿಗಳನ್ನು ಪಡೆದವನಾದರೂ ಜಗತ್ತಿನಲ್ಲಿ ಶಾಂತಿಪೂರ್ವಕವಾಗಿ ವ್ಯವಹರಿಸುತ್ತಾನೆ. ಅವನಿಗೆ ದುಃಖ-ದಾರಿದ್ರ್ಯ ಕಷ್ಟ-ನಷ್ಟಗಳ ಸೋಂಕು ಎಷ್ಟೂ ಇರುವುದಿಲ್ಲ. ಪೂರ್ಣವಾದ ಮಾನಸಿಕ ಸಾಮ್ಯಾವಸ್ಥೆಯನ್ನವನು ಹೊಂದುತ್ತಾನೆ. ಸರ್ಪಭೂಷಣ ಶಿವಯೋಗಿಗಳು ಹೇಳುವಂತೆ ಈ ಜಗತ್ತಿನ ಒಳಗೂ ಹೊರಗೂ ಅನುಪಮವಾದ ತೇಜವೊಂದು ಬೆಳಗುತ್ತಿದೆ; ಆ ತೇಜವೇ ತಾನು ಎಂಬ ಅರಿವನ್ನು ರಾಜಯೋಗಿಯು ಅನುಭವಿಸುತ್ತಾನೆ.

ಈ ಜಗದೊಳಹೊರಗೆಲ್ಲೆಲ್ಲಿ ತುಂಬಿಹ
ತೇಜವಾನೆಂದರಿದರಿವನು ।
ಮೂಜಿ ಮೈಮರೆದಿರೆ ನಿಃಶ್ರೇಯವಹುದೆಂದು
ರಾಜಯೋಗವ ತಿಳಿಸಿದರಿಂದೆ ॥

ರಾಜಯೋಗಿಗೆ ಇಂತಹ ತೇಜವೇ ತಾನೆಂಬ ಅರಿವು ಉಂಟಾಗುವದಲ್ಲದೆ ಆ ಅರಿವನ್ನು ಮರೆತು ಇರುವ ಸ್ಥಿತಿಯೊಂದು ಆಳವಡುತ್ತದೆ. ಇಂತಹ ಸ್ಥಿತಿಯು ಮೋಕ್ಷವಲ್ಲದೆ ಇನ್ನೇನು ?

ಶಿವಯೋಗವು ಕೇವಲ ವೀರಶೈವ ಪ್ರಕ್ರಿಯೆಗೆ ಸಂಬಂಧಪಟ್ಟಿರುತ್ತದೆ. ವೀರಶೈವ ಷಟ್ಸ್ಥಲ ಸಿದ್ಧಾಂತಕ್ಕೆ ಶಿವಯೋಗವು ಸಾಧನೆಯ ಸ್ವರೂಪವಾಗಿರು-ತ್ತದೆ. ಲಿಂಗಾಂಗ ಸಾಮರಸ್ಯವೆ ಈ ಸಾಧನೆಗೆ ಸಂವಾದನೆಯಾಗಿರುತ್ತದೆ. ಶಿವಯೋಗಿಯು ಸಾಂಪ್ರದಾಯಬದ್ಧವಾದ ಮಂತ್ರ–ಲಯ–ಹಠ–ರಾಜಯೋಗ ಗಳನ್ನು ಆಚರಿಸಬೇಕೆಂಬುದಿಲ್ಲ. ಆದರೆ ಕಾಮಿಕಾದಿ ವಾತುಲಾಂತವಾದ ೨೮ ಶಿವಾಗಮಗಳ ಯೋಗಪಾದದಿಂದ, ಚೆನ್ನಸದಾಶಿವಯೋಗಿಯ ಶಿವಯೋಗ ಪ್ರದೀಪಿಕೆಯಿಂದ, ನಿಜಗುಣ ಸರ್ವಭೂಷಣರ ಕೈವಲ್ಯ ಗ್ರಂಥಗಳಿಂದ, ಶಿವಶರಣರ ಪ್ರಾಣಲಿಂಗಿ ಸ್ಥಲದ ವಚನಗಳಿಂದ ಈ ನಾಲ್ಕು ಯೋಗಗಳ ವಿವರಣೆಯು ಅಲ್ಲಿ ಬಂದಿರುವುದನ್ನು ಕಾಣಬಹುದಾಗಿದೆ. ಈ ಶಿವಯೋಗದ ಆಚರಣೆಗೆ ಈ ಯೋಗಗಳು ಪೂರ್ವಭಾವಿಯಾಗಿರಬೇಕೆಂಬುದಿಲ್ಲ. ಈ ಯೋಗ-ಗಳಿಗೆ ಹಲಕೆಲವು ಸಿದ್ಧಿಗಳು ಪ್ರಾಪ್ತವಾಗಿ ಅವು ವೈಯಕ್ತಿಕ ಉನ್ನತಿಗೆ, ಆತ್ಮ ಖ್ಯಾತಿಗೆ ಮಾತ್ರ ಅವಕಾಶವನ್ನುಂಟುಮಾಡುವವು. ಶಿವಯೋಗದಲ್ಲಿ ಮಾತ್ರ ವೈಯಕ್ತಿಕ ಸಿದ್ಧಿ ಸಾಮರ್ಥ್ಯಕ್ಕೆ ಅನುವಿಲ್ಲ, ಮಹತ್ವವೂ ಇಲ್ಲ. ತಪೋನಿಷ್ಠೆಯ ಯಾವದೇ ಕ್ರಮಕ್ಕೆ ಸಿದ್ಧಿಪ್ರಾಪ್ತಿಯು ಅನಿವಾರ್ಯವೆನ್ನುವುದಾದರೆ ಲಿಂಗ ಪವಾಡವನ್ನು ಸಿದ್ಧಿಸುವುದೇ ಶಿವಯೋಗದಾಚರಣೆಗೆ ಪರಮಾದರ್ಶವಾಗಿರುತ್ತದೆ. ಈ ಪರಮಾರ್ಶದ ಹೊಂದುಗೆಯಿಂದ ಶಿವಯೋಗಿಯ ನೆರಗನ್ನು ಹಿಡಿದು ಉನ್ನತಿ ಪಥವನ್ನು ಬಯಸುವ ಸಾಧಕರೆಲ್ಲರಿಗೂ ಸುಲಭವಾದ ಅನುಭವಮಾರ್ಗವು ನಿಲುಕುತ್ತದೆ. ಶಿವಯೋಗಿ ಅನಿಮಿಷಯ್ಯನ ಅಮೃತಲಿಂಗ ಯೋಗದಿಂದ ಶಿವಯೋಗ ಬಲ್ಲಿದನಾದ ಅಲ್ಲಮಪ್ರಭುವು ವ್ಯೋಮಕಾಯವನ್ನು ಸಂಪಾದಿಸಿ ಶಿವಯೋಗಿಗಳ ಒಂದು ಪರಂಪರೆಯನ್ನೇ ರೂಢಗೊಳಿಸಿದನು. ತನ್ನ ಸಂಪರ್ಕ ಸನ್ನಿವೇಶದಲ್ಲಿ ಬಂದ ಬಂದ ಮಹಿಮರನ್ನು ಜ್ಯೋತಿ ಮುಟ್ಟಿದ ಜ್ಯೋತಿಯಂತೆ ಪ್ರಭಾಪುಂಜಿತಗೊಳಿಸಿದನು. ಶಿವಯೋಗದಿಂದ ಅವನು ಪಡೆದಿದ್ದ ಬಯಲ ಒಡಲಿನ ಗೂಢವು ಒಂದು ಅನುಪಮವಾದ ಸಂಸ್ಕೃತಿಯನ್ನೇ ತೆರೆದಿಟ್ಟಿರುತ್ತದೆ. ಶಿವಯೋಗಿಗಳ ಪರಂಪರೆಯು ಬೆಳೆದು ಬಂದಿರುವಂತೆ ಇನ್ನುಳಿದ ಯೋಗಸಿದ್ಧರ ಪರಂಪರೆಯು ವಿರಳವಾಗಿ ಕಂಡುಬರುತ್ತದೆ. ವೈಯಕ್ತಿಕವಾದ ಮತ್ತು ಸಾಮೂಹಿಕವಾದ ಮುಕ್ತಿಯ ಕಲ್ಪನೆಯೇ ಅವರವರ ಯೋಗದ ಪರಮಾ-ದರ್ಶಕ್ಕೆ ತಕ್ಕ ಮಾರ್ಗದರ್ಶನವನ್ನು ಮಾಡಿಕೊಟ್ಟಿತೆನ್ನಬೇಕಾಗುವದು.

ಪರವಸ್ತುವು ನಮ್ಮ ಬಾಹ್ಯ ಮನಸ್ಸಿಗೆ ಅಗೋಚರವಾಗಿದೆ, ನಮ್ಮ ಜ್ಞಾನೇಂದ್ರಿಯಗಳಿಗೂ ಆ ದೇವನು ನಿಲುಕಲಾರ— ಎಂದು ಎಲ್ಲ ದೇಶ-ಕಾಲಗಳ ಅನುಭಾವಿಗಳು ನಿರ್ಣಯಿಸಿದ್ದಾರೆ. ಆ ದೇವನು ಅಜ್ಞೇಯನು, ಅವನನ್ನು ಅರಿತುಕೊಳ್ಳುವದು ಆಗದು ಎಂಬುದೇ ಅವರ ಅಭಿಪ್ರಾಯವಾಗಿದೆ. ಹೀಗಿದ್ದರೂ ಆ ಪರವಸ್ತುವು ನಮ್ಮ ಅಂತರಿಂದ್ರಿಯಕ್ಕೆ, ನಮ್ಮ ಜ್ಞಾನದೃಷ್ಟಿಗೆ ಮಾತ್ರ ನಿಲುಕ ಬಲ್ಲುದು ಎಂದು ಅವರು ಭರವಸೆಯನ್ನು ನೀಡುತ್ತಾರೆ. ನಮ್ಮ ಬಾಹ್ಯ ಮನಸ್ಸು ಆ ಪರವಸ್ತುವಿನ ವ್ಯಕ್ತಸ್ವರೂಪವನ್ನು ಮಾತ್ರ ತಿಳಿಯಬಹುದು. ಆದರೆ ಅಂತರಂಗದ ಆಳವಾದ ಮನವು ಎಂದರೆ ಭಾವವು ಮಾತ್ರ ಅವನ ಅವ್ಯಕ್ತ ಸ್ವರೂಪವನ್ನು ಕಾಣಬಲ್ಲುದು. ಶೈವ ಸಿದ್ಧಾಂತದಲ್ಲಿ ಪರವಸ್ತುವಿನ ಈ ಅವ್ಯಕ್ತ ರೂಪಕ್ಕೆ ಶಿವನೆಂದೂ, ವ್ಯಕ್ತ ಸ್ವರೂಪಕ್ಕೆ ಲಿಂಗವೆಂದೂ ಮತ್ತು ಈ ವ್ಯಕ್ತಾವ್ಯಕ್ತ ಸ್ವರೂಪಕ್ಕೆ ಶಿವಲಿಂಗವೆಂದೂ ಕರೆಯಲಾಗಿದೆ. ಇದರಿಂದ ಪರವಸ್ತುವು ಖಂಡಿತ ಮತ್ತು ಅಖಂಡಿತ ಈ ಎರಡೂ ರೂಪಗಳಲ್ಲಿ ಗೋಚರವಾಗುವದೆಂದು ವಿದಿತ ವಾಗುತ್ತದೆ. ಹಣ್ಣಿನ ರಸ ಮತ್ತು ರಸದ ಮಾಧುರ್ಯ ಇವನ್ನು ವಿಂಗಡಿಸಲಿಕ್ಕೆ ಬಾರದಂತೆ ಈ ರೂಪಗಳನ್ನೂ ವಿಂಗಡಿಸಲು ಬರುವದಿಲ್ಲ. ಅನಾದ್ಯನಂತ ವಾದ ಪರವಸ್ತುವಿನ ಅಥವಾ ಶಿವನ ಅವಿಷ್ಕಾರಕ್ಕೆ ಲಿಂಗವು ಒಂದು ವಾಹಕ ವಾಗಿದೆ. ದೇಶ-ಕಾಲ-ಅವಕಾಶ, ನಾಮ-ರೂಪ, ಗತಿ-ಚೈತನ್ಯ ಇತ್ಯಾದಿ ಪರಶಿವನ ಖಂಡಿತ ಸ್ವರೂಪವನ್ನು ವ್ಯಕ್ತಗೊಳಿಸಲು ಆ ಲಿಂಗವು ಒಂದು ಸಹಾಯಕ ಅಷ್ಟೆ ! ಇದರಿಂದ ಲಿಂಗವು ಪರವಸ್ತುವಿನ ಸಗುಣ ನಿಲವನ್ನೂ ಶಿವನು ಅದರ ನಿರ್ಗುಣ ನಿಲವನ್ನೂ ಪ್ರತಿನಿಧಿಸುತ್ತದೆಂದ ಹಾಗಾಯಿತು. ಅನುಭಾವಿಯು ಪರವಸ್ತುವಿನ ಈ ಎರಡೂ ಸ್ವರೂಪಗಳನ್ನು ತನ್ನಲ್ಲಿ ಕಂಡು ಅವನ್ನು ಅಳವಡಿಸಿಕೊಳ್ಳುವನು. ಅವನು ಒಂದನ್ನು ಕಾಣುವಲ್ಲಿ ಇನ್ನೊಂದನ್ನು ಕಡೆಗಣಿಸನು. ಅವನ ಇಡಿಯ ಸಾಧನೆಯ ರಹಸ್ಯವು ಈ ಸ್ವರೂಪ ಸಾಕ್ಷಾ-ತ್ಕಾರವನ್ನು ಪಡೆದುಕೊಳ್ಳುವುದರಲ್ಲಿ ಅಭಿವ್ಯಕ್ತವಾಗಿರುತ್ತದೆ.

ಪರವಸ್ತುವು ನಿರಾಕಾರವಾಗಿದೆ, ಅದು ಅನಂತವೂ ಆಗಿದೆ ಎಂಬ ಅಭಿಪ್ರಾಯವನ್ನು ಶೈವ ಮತ್ತು ವೀರಶೈವಗಳು ಒಪ್ಪಿಕೊಳ್ಳುತ್ತವೆ. ಆದರೆ

ಲಿಂಗತತ್ವದ ಅಥವಾ ಪರವಸ್ತುವಿನ ವ್ಯಕ್ತ ಸ್ವರೂಪದ ವಿವರಣೆಯಲ್ಲಿ ವೀರ-ಶೈವರು ಶೈವರಿಗಿಂತ ಭಿನ್ನವಾದ ಅಭಿಪ್ರಾಯವುಳ್ಳವರಾಗಿದ್ದಾರೆ. ಶಿವನು ಅಷ್ಟಮೂರ್ತಿ ಸ್ವರೂಪನಾಗಿದ್ದಾನೆ. ಅವನು ಎಂಟು ವಿಧದ ರೂಪಗಳಲ್ಲಿ ವ್ಯಕ್ತವಾಗುತ್ತಾನೆ ಎಂದರೆ ಇಡಿಯ ವಿಶ್ವವೇ ಅವನ ಸ್ವರೂಪವಾಗಿದೆ ಎಂದು ಶೈವರು ತಿಳಿಯುತ್ತಾರೆ. ವಿಶ್ವವು ಕಣ್ಣಿಗೆ ಅರ್ಧ ಗೋಲದಂತೆಯೂ ಒಂದಾ-ನೊಂದು ವಸ್ತುವಿನ ಮೇಲೆ ಅದನ್ನು ಇಟ್ಟಂತೆಯೂ ಕಾಣುತ್ತದೆ; ಇದುವೆ ಲಿಂಗ ಎಂದು ಅವರು ನಂಬುತ್ತಾರೆ. ಲಿಂಗದ ಈ ಬಗೆಯಾದ ವಿವರಣೆಯು ಅರ್ಥ-ಬ್ರಹ್ಮವನ್ನು ಕುರಿತು ಮಾತ್ರ ಇರುವದೆಂದು ತಿಳಿಯಬಹುದು. ಆದರೆ ಲಿಂಗದ ವಿವರಣೆಯ ಇನ್ನೊಂದು ಮಗ್ಗಲೂ ಇರುತ್ತದೆ, ಅದನ್ನು ಶಬ್ದಬ್ರಹ್ಮವೆಂದು ಕರೆಯಬಹುದು. ಪರವಸ್ತುವು ವಿಶ್ವಕ್ಕೆಲ್ಲ ಆತ್ಮವಾಗಿರುತ್ತದೆ. ಆತ್ಮ-ವಿಮರ್ಶೆ ಅಥವಾ ಸ್ವ-ಪರಾಮರ್ಶೆ ಆ ವಸ್ತುವಿಗುಂಟು. ಸೃಷ್ಟಿಯ ರಚನೆಗಾಗಿ ಪರಮಾತ್ಮನು ತನ್ನ ಅಂತರಂಗದಲ್ಲಿ ಮೊಟ್ಟಮೊದಲು ಸಂಕಲ್ಪಿಸುತ್ತಾನೆ. ಅವನಲ್ಲಿ ಉಂಟಾದ ಈ ಸಂಕಲ್ಪ ಈ ಸ್ಪಂದನ ಈ ತರಂಗದಲ್ಲಿ ನಾದವು ಒಡ-ಮೂಡುತ್ತದೆ. ಇದರಿಂದ ನಾಮದ ಅರಿವು ನಮಗಾಗುವದು. ಈ ನಾದದಿಂದ ಬಿಂದು ಅಥವಾ ಸ್ವರೂಪವು ಹೊರಹೊಮ್ಮುವದು. ನಾದ-ಬಿಂದುಗಳು ನಾಮ ರೂಪಗಳು ಒಂದನ್ನೊಂದು ಬೆರೆತು ಓಂಕಾರ ಇಲ್ಲವೆ ಪ್ರಣವದ ಉತ್ಪತ್ತಿಗೆ ಅವಕಾಶವುಂಟಾಗುತ್ತದೆ. ಬಿಂದುವು ಚಕ್ರದ ಆಕಾರದ ಸ್ಥಾನವನ್ನೂ ನಾದವು ಪೀಠವನ್ನನುಸರಿಸಿದ ರೇಖೆಯನ್ನೂ ಸೂಚಿಸುವದು. ರೇಖೆಯು ಬಿಂದುವಿನ ಮೇಲೆ ದುಂಡಗಿನ ತುದಿಯುಳ್ಳ ಕೊಳಗದಂತೆ ನಿಲ್ಲುತ್ತದೆ. ಇದು ಲಿಂಗದ ರಚನೆಯನ್ನು ನಿರೂಪಿಸಿರುತ್ತದೆ. ಈ ಶಬ್ದ—ಬ್ರಹ್ಮಾತ್ಮಕ ವಿವರಣೆಯತ್ತ ವೀರಶೈವರ ಒಲವಿರುತ್ತದೆ; ಆದುದರಿಂದ ಲಿಂಗದ ಬಗೆಗಿನ ಅವರ ವಿವರಣೆಯು ಆಧ್ಯಾತ್ಮಿಕ ಮತ್ತು ವ್ಯಕ್ತಿಗತವನ್ನು ಸೂಚಿಸುತ್ತದೆ. ಕಾಲ-ಅವಕಾಶಗಳ ಧರ್ಮವೊಂದಿದೆ; ರೂಪ-ಗತಿಗಳ ಧರ್ಮವೊಂದಿದೆ; ಇದು ವಿಶ್ವವ್ಯಾಪಕವಾಗಿದೆ. ಇದು ವಿಶ್ವದ ಅನಂತವಾದ ತಾಲ-ಲಯಬದ್ಧವಾದ ಕ್ರಮವನ್ನು ನಡೆಸುತ್ತಿದೆ. ಮತ್ತು ಈ ಧರ್ಮವು ಕಾಲಕಾಲಕ್ಕೆ ತಲೆದೋರುವ ಅನಂತ ಬದಲಾವಣೆ ಅನಂತ ರೂಪಗಳಲ್ಲಿ ಎಡೆಬಿಡದೆ ವ್ಯಕ್ತವಾಗುತ್ತದೆ— ಎಂಬ ಸಂಗತಿಯನ್ನು ಲಿಂಗದ ಬಗೆಗಿನ ಈ ವಿವರಣೆಯು ಸ್ಪಷ್ಟಗೊಳಿಸುತ್ತದೆ.

ಆಧ್ಯಾತ್ಮಿಕ ಮತ್ತು ವೈಯಕ್ತಿಕ ನಿಲುವಿನಲ್ಲಿ ಕಾಣುವ ಲಿಂಗದ ತಿಳುವಳಿಕೆಯು ವೀರಶೈವವು ಶೈವದಿಂದ ಭಿನ್ನವಾಗಿದೆಯೆಂಬುದನ್ನು ತಿಳಿಸುತ್ತದೆ. ಶೈವರು ಅರ್ಥ-ಬ್ರಹ್ಮದಲ್ಲಿ ಅಥವಾ ಭೌತಿಕ ಸ್ವರೂಪದಲ್ಲಿ ಕಲ್ಪಿಸಿದ ಶಿವನನ್ನು ಲಿಂಗರೂಪದಲ್ಲಿ ಗುಡಿ ಗುಂಡಾರಗಳಲ್ಲಿ ಪೂಜಿಸುವರು. ಆದ್ದರಿಂದ ಇದಕ್ಕೆ ಸ್ಥಾವರಪೂಜೆ ಎಂದು ಹೆಸರು. ಆದರೆ ವೀರಶೈವರು ಶಬ್ದ ಬ್ರಹ್ಮದಲ್ಲಿ ಅಥವಾ ಆಧ್ಯಾತ್ಮಿಕ ಸ್ವರೂಪದಲ್ಲಿ ಕಂಡ ಶಿವನನ್ನು ಲಿಂಗರೂಪವನ್ನಾಗಿ ಅಂಗದ ಮೇಲಿರಿಸಿಕೊಂಡು ಪೂಜಿಸುವರು. ಆದುದರಿಂದ ಅವರ ಈ ಪೂಜೆಗೆ ಇಷ್ಟಲಿಂಗ ಪೂಜೆಯೆಂದು ಹೆಸರು. ಸ್ಥಾವರಲಿಂಗ ಪೂಜೆಯು ಶೈವ ಧರ್ಮದ ಒಂದು ವಿಶಿಷ್ಟವಾದ ಲಕ್ಷಣವಾಗಿದೆ. ಹಾಗೆಯೇ ಇಷ್ಟಲಿಂಗಪೂಜೆಯು ವೀರಶೈವ ಧರ್ಮದ ಒಂದು ಅಸಾಮಾನ್ಯವಾದ ವೈಶಿಷ್ಟ್ಯವಾಗಿದೆ. ಅಂದರೆ ಪರವಸ್ತುವಿನ ಸಾಕಾರವಾದ ಲಿಂಗವನ್ನು ಅಂಗದ ಮೇಲೆ ಅಗಲಲಾರದಂತೆ ಧರಿಸಿಕೊಳ್ಳಬೇಕು; ಮತ್ತು ಮಾನವ ದೇಹವು ದೇವನ ವಾಸಕ್ಕಾಗಿ ದೇವಾಲಯವಾಗಬೇಕು— ಎಂಬ ತತ್ವವನ್ನು ವೀರಶೈವರು ಎತ್ತಿ ಹಿಡಿಯುವರು. ಅಂಗದ ಮೇಲೆ ಧರಿಸಿದ ಲಿಂಗವು ಪರಮಾತ್ಮನು ದೂರದಲ್ಲಿಹ ಕೈಲಾಸದಲ್ಲಿಲ್ಲ, ಅವನು ಅಣುಅಣುವಿನಲ್ಲಿ ಅಂಗದ ಕಣಕಣದಲ್ಲಿ, ನಾಳನಾಳದಲ್ಲಿ, ರೋಮರೋಮಗಳಲ್ಲಿ ವ್ಯಾಪಿಸಿ ಸನ್ನಿಹಿತನಾಗಿದ್ದಾನೆ ಎಂಬುದರ ಕುರುಹಾಗಿದೆ. ಇದರಿಂದ ದೇಹವೇ ದೇವಾಲಯವಾಗಬೇಕು, ಅದರಲ್ಲಿ ಪವಿತ್ರತೆಯು ಒಡಮೂಡಬೇಕು, ಅದರಲ್ಲಿ ದೇವದೇವನು ಆವಾಸಗೊಳ್ಳಬೇಕು ಎಂಬ ವೀರಶೈವ ಸಿದ್ಧಾಂತವು ಹೊರಹೊಮ್ಮುತ್ತಿದೆ.

ಲಿಂಗದ ಬಗೆಗೆ ಹಲವಾರು ವ್ಯಾಖ್ಯೆಗಳುಂಟು. ಲಿಂಗವೆಂದರೆ ಚಿಹ್ನೆ, ಲಕ್ಷಣ, ಗುರುತು. ಲಿಂಗವೆಂದರೆ ಆಕಾರ, ಲಿಂಗವೆಂದರೆ ಪರಾತ್ಪರವಸ್ತು. 'ಲೀಯತೆ ಗಮ್ಯತೆ ಅಸ್ಮಿನ್ ಇತಿ ಲಿಂಗಃ'. ಜಗದ್ವಿಲಾಸವು ಚಿತ್-ಅಚಿತ್, ಚೇತನ-ಜಡಗಳಿಂದ ಕೂಡಿಕೊಂಡಿರುತ್ತದೆ ಚಿದಚಿದಾತ್ಮಕವಾದ ಈ ಸೃಷ್ಟಿಯು ಯಾವುದರಿಂದ ಹೊರಹೊಮ್ಮಿ, ಯಾವುದರ ಸಹಾಯದಿಂದ ಬಾಳಿ ಬೆಳಗಿ ಯಾವುದರಲ್ಲಿ ಕೊನೆಗೆ ಅಡಗುವುದೋ ಅದುವೆ ಲಿಂಗವೆನಿಸಿದೆ. ಚೆನ್ನಬಸವಣ್ಣನ ಅಭಿಮತದಂತೆ

ಲಿಕಾರವೇ ಶೂನ್ಯ, ಬಿಂದುವೇ ಲೀಲೆ, ಗಕಾರವೇ ಚಿತ್;
ಈ ತ್ರಿವಿಧದೊಳಗೆ ಲಿಂಗವೆಂಬ ಸಕೀಲ.

ಇದರ ಸಂಚವ ಬಲ್ಲಾತನೇ ಲಿಂಗಸಂಗಿ,
ಕೂಡಲ ಚೆನ್ನಸಂಗಮದೇವಾ.

ಜಡವಾದ ಪ್ರಕೃತಿ ಮತ್ತು ಚೇತನಾತ್ಮಕರಾದ ಜೀವರು ಸೃಷ್ಟಿಯ ಪೂರ್ವದಲ್ಲಿ ಶೂನ್ಯದಲ್ಲಡಗಿದ್ದು, ಸೃಷ್ಟಿಯಾದೊಡನೆ ಪರಶಿವನ ಲೀಲೆಗಾಗಿ ಕಟಿಬದ್ಧರಾಗಿ ತಮ್ಮ ಪಾತ್ರವನಾಡಿ ಆ ಲೀಲೆಗೊಂದು ಮೆರುಗನ್ನು ತಂದು, ಲೀಲೆ ತಪ್ಪಿದಡೆ ಮತ್ತೆ ಆ ಸ್ವಯಂಭುವಿನಲ್ಲಿ ಲೀನವಾಗುವರು. ಶಿವನು ಶೂನ್ಯವಾಚಕನಾಗಿದ್ದಾನೆ. ಹಾಗೆಯೇ ಶಕ್ತಿಯು ಜ್ಞಾನವಾಚಕವಾಗಿದೆ. ಶಿವಶಕ್ತಿಯರ ಮಧ್ಯದಲ್ಲಿ ಎಂದರೆ ಶಿವನ ಸಂಕಲ್ಪ ಶಕ್ತಿಯ ಮುಖಾಂತರವಾಗಿ ರೂಪಗೊಂಡ ಈ ಸೃಷ್ಟಿಯು ಶಿವನಿಂದನ್ಯವಲ್ಲ. ಶಿವ-ಶಕ್ತಿಯರಂತೆಯೇ ಸತ್ಯವಾಗಿ ಪರಿಣಮಿಸಿ ಇದು ಶಿವಲೀಲೆಯನ್ನು ಸ್ಫುಟಗೊಳಿಸುವದು. ಶಿವ-ಶಕ್ತಿ-ಸೃಷ್ಟಿ ಈ ಮೂರರ ರಹಸ್ಯವನ್ನು ಗರ್ಭೀಕರಿಸಿಕೊಂಡಿರುತ್ತದೆ ವ್ಯಾಪಕವಾದ ಲಿಂಗ ಪದವು. ಇದು ನಿರಾಕಾರವಾದ ಪರತತ್ವದ ಪರವಾಗಿ ಲಿಂಗಪದದ ವಿವರಣೆ. ನಿರಾಕಾರವು ಸಾಕಾರವನ್ನೈದುವುದಾದರೆ ಅದು ವಿಶ್ವ ರೂಪದಲ್ಲಿಯೇ. ವಿಶ್ವವು ಗೋಳಕವಾಗಿರುವುದರಿಂದ ಲಿಂಗವೂ ಗೋಳಕ, ಆಕಾರವಲ್ಲದ ನಿರಾಕಾರ ಮೂರ್ತಿಯದು.

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ:
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ,
ಬ್ರಹ್ಮಾಂಡದಿಂದತತ್ತ ನಿಮ್ಮ ಶ್ರೀಮುಕುಟ!
ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ,
ಕೂಡಲ ಸಂಗಮದೇವಯ್ಯಾ,
ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ!

ಎಂದು ಹಾಡಿಕೊಂಡಿರುವ ಬಸವಣ್ಣನವರ ವಚನದಲ್ಲಿ ಅಖಂಡ ವಿಶ್ವವ್ಯಾಪಿಯಾಗಿ ನಿರಾಕಾರದಿಂದಿರುವ ಲಿಂಗವು ಭಕ್ತನ ಭಕ್ತಿಗಾಗಿ ಆಕಾರವನ್ನು ತಾಳಿ ಅಂಗೈಯ ತಳಕ್ಕೆ ಬಂದಿದೆ ಎಂಬ ಅಭಿಪ್ರಾಯವು ಒಡಮೂಡಿದೆ.

ಬ್ರಹ್ಮಾಂಡದ ದೃಷ್ಟಿಯಿಂದ ಗೋಳಕವಾಗಿ ತೋರುವ ಲಿಂಗವು ಪಿಂಡದ ದೃಷ್ಟಿಯಿಂದ ಗೋಳಕ ಗೋಮುಖ ಪೀಠಗಳನ್ನು ಒಳಕೊಂಡಿದೆ. ದೇಹದಲ್ಲಿ ಆತ್ಮನಿದ್ದಾನೆ. ಅದಕ್ಕಾಗಿ ಪ್ರಾರಂಭದಲ್ಲಿ ಅವನನ್ನು ದೇಹದ ಸ್ವರೂಪದಲ್ಲಿಯೇ

ಕಾಣುವರು. 'ಮುನ್ನನಾದಿಯ ಶರಣ ತನ್ನಯ ಸ್ವರೂಪವನು ಭಿನ್ನವಿಲ್ಲದೆ ವಾಮಕರದಿ ಪಿಡಿದು ಇನ್ನೊಂದು ಕಾಮಿಸದೆ ನನ್ನಿಯಿಂ ಪೂಜಿಸುವ'ನು. 'ಮರವೆಯಿಂ ಮುಸುಕಿಕ್ಕಿದರಿವಿನೊಳಗಿಹ ತಮ್ಮ ಗುರು ಬಹಿಷ್ಕರಿಸಿ ಕೊಡೆ ಭರದಿ ಬಂದು' ಆದು ಕರಕಮಲದೊಳು ಹೊಳೆವುದು. ಎನ್ನ (ಶಿಷ್ಯ) ನಿನ್ನ (ಗುರು) ಅರಿವಿನ ಬೆಂಬಳಿಯಲ್ಲಿ ಲಿಂಗವು ಕಾಣಬಂದಿತ್ತು, ಅರಿವೇ ಲಿಂಗವಾದ ಕಾರಣ. ಸದಾಚಾರವೇ ಲಿಂಗ, ಸತ್ಕ್ರಿಯೆಯೆ ಲಿಂಗ ಎಂದು ನೀತಿ ಕಾಯಕಗಳ ಉನ್ನತ ಮಟ್ಟದಲ್ಲಿಯೂ ಲಿಂಗದ ನಿಲವನ್ನು ಕಾಣುವ ಹವಣಿಕೆ ವ್ಯಕ್ತವಾಗುತ್ತದೆ ಲಿಂಗವಂತನ ನಿತ್ಯಜೀವನದಲ್ಲಿ. ದೇವರ ದಾಸಿಮಯ್ಯನು

ಕರಸ್ಥಲದ ಜ್ಯೋತಿಯದು, ಕರುವಿಟ್ಟ ಎರಕವದು,
ಅದರ ನೆಲೆಯ ತಿಳಿದರೆ ನಿಜಾನಂದವಹುದು.
ಹೊಲಬುದೋರದಿಹ ನಿಸ್ಸೀಮನ ಹೊಲಬನರಿದು
ಕೂಡಿದಾತನೆ ಮೃಡನು, ಕಾಣಾ ರಾಮನಾಥಾ.

ಎಂದು ಲಿಂಗದ ನಿಲವನ್ನು ಅನುಭವಿಸಿದ್ದಾನೆ.

ಲಿಂಗವು ವಿದ್ಯುತ್‌ಸ್ವರೂಪವಾಗಿದೆ. ಎರಕ ಹೊಯ್ದಂತೆ ಅದನ್ನು ರಚಿಸಿ ಧ್ಯಾನ ಪೂಜೆಗಳಿಗೆ ಅನುಕೂಲವಾಗಲಿ ಎಂದು ಅದನ್ನು ಕರಿಯ ಬಣ್ಣದ ಕಾಂತಿಯಿಂದ ರೂಪಿಸುವರು. ಘರ್ಷಣೆ ಸ್ಪರ್ಶನ ಪ್ರೇರಣೆಗಳಿಂದ ವಿದ್ಯುತ್ತನ್ನು ಪಡೆಯುವಂತೆ ವಿದ್ಯುತ್ತಿನ ಮೂಲ ತತ್ವವನ್ನು ಗರ್ಭೀಕರಿಸಿಕೊಂಡ ಕೇರಿಸ ಅಂಶದಿಂದ ನಿರ್ಮಿತವಾದ ಕರಿಯ ಬಣ್ಣದ ಕಾಂತಿಯಿಂದ ಹೊದಿಸಲ್ಪಟ್ಟ, ವಿಶ್ವದ ಆಕಾರದಲ್ಲಿ ಸಾಕಾರಕ್ಕೆ ಬಂದ, ಸ್ವ-ಸ್ವರೂಪವನ್ನು ಕಾಣಿಸಿಕೊಡುವ ಈ ಲಿಂಗದ ಘರ್ಷಣೆ ಸ್ಪರ್ಶದ ಪ್ರೇರಣೆಗಳಿಂದ ಹೊಂದುವ ಜ್ಞಾನವು ನಿಜಾನಂದ ವನ್ನು ನೀಡುವದು. ತನ್ನಯ ಸ್ವರೂಪವನ್ನು ಅರಿತುಕೊಳ್ಳುವಲ್ಲಿ ಈ ಲಿಂಗವು ದರ್ಪಣದೋಪಾದಿಯಲ್ಲಿ ಕಾಣಬರುವದು. 'ಕಡಲೊಳಗೆ ಕಲ್ಲೊಳಗೆ ಮರದೊ-ಳಗೆ ಮಾನವರ ಒಡಲೊಳಗೆ ಕಾಮಿಗಳ ಮನದೊಳಗೆ ಜ್ಞಾನಿಗಳ ನುಡಿಯೊಳಗೆ ಯೋಗಿಗಳ ಕಣ್ಣೊಳಗೆ ರಾಜಿಪ ಅಮಲತರ ಜ್ಯೋತಿರ್ಲಿಂಗ' ಎಂದು ಜ್ಯೋತಿಯ ವಿಕಾಸವನ್ನು ವಿವರಿಸಿರುವರು. ಒಂದೊಂದು ವಸ್ತುವಿನಲ್ಲಿ ಅವ್ಯಕ್ತವಾಗಿ ಅಡ ಗಿದ ಆ ಜ್ಯೋತಿಯು ಯೋಗಿಗಳ ಕಣ್ಣಿನಲ್ಲಿ ಹೇಗೆ ಸ್ಫುಟವಾಗಿ ವ್ಯಕ್ತವಾಗುವ ದೆಂಬುದು ಈ ವರ್ಣನೆಯಲ್ಲಿ ಒಡಮೂಡಿದೆ. ಯೋಗಿಜನರ ಕಣ್ಣಿನಲ್ಲಿ ವ್ಯಕ್ತ

ವಾಗುವ ಈ ಜ್ಯೋತಿಗೇನೆ ಲಿಂಗವೆಂದು ಕರೆಯಲಾಗಿದೆ. ಇದನ್ನೇ ಮೈಲಾರ ಬಸಲಿಂಗ ಶರಣರು "ನೇತ್ರ ಪ್ರಕಾಶದ ಸೂತ್ರವಿಡಿದು ಜ್ಞಾನ ಮಾತ್ರವಾಗಿಹ ಪ್ರಾಣಲಿಂಗದಂಘ್ರಿಗಳೆನ್ನ ಸಲಹಲಿ" ಎಂದು ಬೇಡಿಕೊಂಡಿರುವರು, ಜ್ಞಾನವು ಆತ್ಮಜ್ಞಾನವು ವಿಕಾಸವಾಗುತ್ತ ನಡೆದಂತೆ, ಕಣ್ಣಿನ ಕಾಂತಿಯು ಅರಳಿ ಶಿವ-ಶರಣರ ಮಾತಿನಲ್ಲಿ ಹೇಳುವುದಾದರೆ ಪ್ರಾಣಲಿಂಗದ ನಿಲವು ಅನುಭವಗೋಚರ ನಾಗುವದು. ಕರಿಯ ಕಾಂತಿಯುತ ಲಿಂಗದ ನಿರ್ನಿಮೇಷ ನಿರೀಕ್ಷಣೆಯಿಂದ ಕಣ್ಣಿನ ಕರಿಯ ಗುಡ್ಡಿಯಿಂದ ಹೊಮ್ಮುವ ಪ್ರಕಾಶ ಲಿಂಗದ ಪ್ರಕಾಶಕಿರಣದಲ್ಲಿ ಕೀಲಿಸಿ ನಾಥವರ್ಣ್ಯದ ಸೊಬಗಿನ ಪರಿಣಾಮವನ್ನು ಬಿತ್ತರಿಸುವದು. ಗೋಕರ್ಣದಲ್ಲಿದ್ದುದು ಜ್ಯೋತಿರ್ಲಿಂಗವೆನ್ನುವರಷ್ಟೆ. ಆಧ್ಯಾತ್ಮಿಕವಾಗಿ ಈ ಜೋತಿರ್ಲಿಂಗಕ್ಕೆ ಬಹು ಮನೋಹರವಾದ ಅರ್ಥವುಂಟು. ಗೋ ಮತ್ತು ಕರ್ಣ ಎಂದರೆ ಕಣ್ಣು ಮತ್ತು ಕಿವಿಗಳು. ಕಣ್ಣಿನಲ್ಲಿ ಕಾಂತಿ, ಕಿವಿಯಲ್ಲಿ ನಾದ ಏಕ-ಕಾಲಕ್ಕೆ ಕಂಡು ಕೇಳಿಬರಬೇಕಾದರೆ ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟು ಧ್ಯಾನಿಸಿದಾಗಲಿ ! ಅಲ್ಲಿ ನಾದಾನುಸಂಧಾನವೂ ಬಿಂದುಸಾಕ್ಷಾತ್ಕಾರವೂ ಕಳಾನುಭೂತಿಯ ಪರಮಾನಂದವೂ ಉಂಟಾಗಿ, ನಾದ ಬಿಂದು ಕಳೆಯೇ ಲಿಂಗ, ಅದುವೆ ಜೋತಿರ್ಲಿಂಗ ಎಂಬ ಅನುಭವ ಗಮ್ಯವಾಗುವದು.

ಜೇಡರ ದಾಸಿಮಯ್ಯನು ತನ್ನ ಇನ್ನೊಂದು ವಚನದಲ್ಲಿ ಲಿಂಗವನ್ನು 'ಕರಸ್ಥಲವೆಂಬ ದಿವ್ಯ ವಿಭೂತಿ' ಎಂದು ಕರೆದಿದ್ದಾನೆ. ಚಿತ್‌ಕಳೆಯೇ ಈ ವಿಭೂತಿಯಾಗಿದೆ. ಆದ್ದರಿಂದ ಚಿತ್ಕಳೆಯೇ ಲಿಂಗವೆಂದು ಭಾವಿಸಲಾಗಿದೆ. ಹಾಗೆಯೇ ಇದನ್ನು 'ದಿವ್ಯ ನಿಕ್ಷೇಪ' ಹುಗಿದಿಟ್ಟ ದ್ರವ್ಯ ಎಂದು ಬಣ್ಣಿಸಿದ್ದಾನೆ. ಅಂಜನ ಸಿದ್ಧಿಯಿಂದ ಹುಗಿದಿಟ್ಟ ದ್ರವ್ಯವನ್ನು ಕಾಣುವಂತೆ ನಿರ್ಮಲ ಮತಿ-ಯೆಂಬ ಅಂಜನದಿಂದ ಲಿಂಗವೆಂಬ ನಿಕ್ಷೇಪವನ್ನು ಕಾಣಬಹುದಾಗಿದೆ. ಇದನ್ನೊಂದು ಲಿಪಿ ಎಂದು ಹೆಸರಿಸಲಾಗಿದೆ. ಅಕ್ಷರವೆನಿಸಿದ ಲಿಂಗವನ್ನು ಲಿಂಗ ಜ್ಞಾನವನ್ನು ಅಕ್ಷರ ಮುಖಾಂತರವಾಗಿ ಗುರುತಿಸಿ ಅಳವಡಿಸಿಕೊಳ್ಳಲವಕಾಶ-ವುಂಟೆಂಬುದನ್ನು ಅವನು ಸೂಚಿಸಿದ್ದಾನೆ. ಶಿವಶರಣರ ಪರಿಭಾಷೆಯಲ್ಲಿ ಮಂತ್ರವೇ ಲಿಂಗವೆನಿಸಿದೆ. ಷಡಕ್ಷರ ಮಂತ್ರವು.'ಓಂ ನಮಃ ಶಿವಾಯ' ಎಂಬ ಅಕ್ಷರಗಳಿಂದ ಕೂಡಿದ ಈ ಮಂತ್ರವು ಸಾಧನೆಯಿಂದ ಅಧ್ಯಾತ್ಮವಿಕಾಸವನ್ನು ವ್ಯಕ್ತಗೊಳಿಸುವ ಷಟ್‌ಸ್ಥಲಕ್ಕೆ ಹೃದಯವಂತಿದೆ. ಆರು ಸ್ಥಲಗಳಲ್ಲಿ ಆಚಾರ–ಗುರು–ಶಿವ–

ಪ್ರಸಾದ–ಜಂಗಮ–ಮಹಾಲಿಂಗಗಳೆಂಬ ಆರು ಲಿಂಗಗಳ ಅನುಭವವನ್ನು ಪಡೆಯುತ್ತ ಸಾಧಕನು ಮುನ್ನಡೆಯುವನು. ಶಿವಯೋಗಿಯು ಶಕ್ತಿಯ ಕೇಂದ್ರಗಳೆನಿಸಿದ ಅಂತರಂಗದ ಷಟ್‌ಚಕ್ರಗಳಲ್ಲಿ ಈ ಅನುಭವವನ್ನು ಕಂಡು ಸಹಸ್ರಾರದ ಅನುಭವಕ್ಕೆ ಸಾಗುವನು. ಸಹಸ್ರಾರದಲ್ಲಿ ಅಮೃತಲಿಂಗವಿಹುದು. ಯೋಗಿಯು ಅದನ್ನು ಲಕ್ಷಿಸಿ ಅಮೃತರಸ ಪಾನಮಾಡಿ ಜನನ ಮರಣಗಳನ್ನು ನೀಗುವನು. ಹಾಗೆಯೇ ಸಹಸ್ರಾರದಾಚೆಗೆ ಶಿಖಾಚಕ್ರ ಪಶ್ಚಿಮ ಚಕ್ರಗಳೆಂಬ ಶಕ್ತಿಯ ಕೇಂದ್ರಗಳನ್ನು ಕಂಡು ಅಲ್ಲಿ ನಿಶೂನ್ಯ ನಿರಂಜನ ಲಿಂಗಗಳನ್ನು ಕಂಡಿಪ್ಪಾರೆ ಶಿವಯೋಗಿಗಳು. ಇದರಿಂದ ಅಂತರಂಗದ ಅನುಸಂಧಾನದಲ್ಲಿ ಅವರಿಗೆ ಗೋಚರವಾಗುವ ಲಿಂಗಗಳು ಆತ್ಮಶಕ್ತಿಯ ಪ್ರತೀಕಗಳಾಗಿ ಅದ್ಭುತ ಸಾಮರ್ಥ್ಯ ಸಿದ್ಧಿಗಳ ನಿಕೇತನಗಳಾಗಿ ಅವರಿಗೆ ಆನಂದ–ಶಾಂತಿಗಳ ಅನುಭೂತಿಯನ್ನು ನೀಡಿವು-ವೆಂದು ಹೇಳಬಹುದು. ಆಗೊಮ್ಮೆ ಈಗೊಮ್ಮೆ ಕ್ಷಣರುಚಿಯಾಗಿ ಮಿಂಚಿ ಮಾಯವಾಗುವ ಜ್ಞಾನವು ಸಂತತಧಾರೆಯಾಗುವಂತೆ, ಓತ–ಪ್ರೋತವಾಗಿ ಸುರಿಯುವಂತೆ ಮಾಡಿಕೊಳ್ಳುವ ರಹಸ್ಯವು ಲಿಂಗಮುಖವಾಗಿ ಸಾಧಿಸುವ ಶಿವ-ಯೋಗದಲ್ಲಿರುತ್ತದೆ. ದಾಸಿಮಯ್ಯನೇ ಮತ್ತೊಮ್ಮೆ ಲಿಂಗವನ್ನು 'ನಮ್ಮ ಹೆತ್ತಯ್ಯ' ನೆಂದು ಹೇಳಿಕೊಂಡಿರುವನು. ಅನೇಕರು ಲಿಂಗವನ್ನು ತಂದೆ ತಾಯಿ ಮಗು ಸತಿ ಪತಿ ಬಂಧು ಬಳಗಕ್ಕೆ ಹೋಲಿಸಿ ವರ್ಣಿಸಿದ್ದುಂಟು. ಕೌಟುಂಬಿಕ ಜೀವನದಲ್ಲಿ ಕಂಡುಬರುವ ಆತ್ಮೀಯತೆ ಪ್ರೀತಿ ವಿಶ್ವಾಸ ಭಕ್ತಿ ನಂಬಿಗೆಗಳು ಲಿಂಗದೇವನ ಒಡನಾಟದಲ್ಲಿ ಕುದುರಬೇಕೆಂಬ ಭಾವವನ್ನೇ ಅವು ಸೂಚಿಸುತ್ತವೆ. ಸಮಸ್ತವೂ ಶಿವಮಯವೆಂಬ 'ಸರ್ವಂ ಶಿವಮಯಂ ಜಗತ್' 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಭಾವಲಿಂಗ ಪ್ರತೀತಿಯನ್ನು ಅಲ್ಲಿ ಲಿಂಗಭಾವನೆಯು ಉಂಟು ಮಾಡುತ್ತದೆ.

ವಿಶ್ವ–ವ್ಯಕ್ತಿಗಳ, ಬ್ರಹ್ಮಾಂಡ–ಪಿಂಡಾಂಡಗಳ ಆತ್ಮವೆನಿಸಿದ ಜ್ಯೋತಿ-ರ್ಲಿಂಗ ಇಷ್ಟಲಿಂಗಗಳು ಪರಸ್ಪರ ಅನ್ಯೋನ್ಯವಾದವುಗಳು. ಆದುದರಿಂದ ಅವುಗಳಲ್ಲಿ ಒಂದು ಸುಮಧುರವಾದ ಸಮನ್ವಯವಾದ ಹೊಂದಿಕೆಯಿರುತ್ತದೆ. ಬ್ರಹ್ಮಾಂಡಗತವಾದ ಆತ್ಮನಿಗೇ ಲಿಂಗವೆಂದು ಹೆಸರು. ಅದು ಸದ್ರೂಪವಾಗಿದೆ. ಅದು ಶುದ್ಧವಾದ ಇರುಹಿನಿಂದ ಬೆರೆತಿಹುದು. ಪಿಂಡಗತ ಆತ್ಮನಿಗೆ ಅಂಗನೆಂದು ಹೆಸರು. ಅದು ಚಿದ್ರೂಪವಾಗಿರುತ್ತದೆ. ಅದು ಶುದ್ಧವಾದ ಅರುಹಿನಿಂದ ಕೂಡಿಕೊಂಡಿರುತ್ತದೆ. ಲಿಂಗ–ಅಂಗಗಳಲ್ಲಿ ಅಭಿನ್ನತೆಯಿರುತ್ತದೆ. ಅವು

ಒಂದೇ ಆಗಿರುವವೆಂಬುದು 'ಅಹಂಗ್ರಹೋಪಾಸನೆ' ಯಿಂದ ಸ್ಪಷ್ಟವಾಗುವದು. ಅನಂತವಾದ ಅನೇಕತ್ವದಲ್ಲಿ ಏಕತ್ವದ ಇರವಿನ ಬಗೆಯನ್ನು ಅಳವಡಿಸಿಕೊಂಡರೆ ಅದುವೆ ಸಮರಸವೆನಿಸುವದು. ಈ ಸಮರಸದ ಆನಂದವು ಉಪಮಾತೀತ ವಾಗಿರುತ್ತದೆ. ವಿಶ್ವದಲ್ಲಾಗಲಿ ವ್ಯಕ್ತಿಯಲ್ಲಾಗಲಿ, ಬ್ರಹ್ಮಾಂಡದಲ್ಲಾಗಲಿ ಪಿಂಡಾಂಡದಲ್ಲಾಗಲಿ ಒಡಲುಗೊಂಡ ಆತ್ಮವು ಅನಂತವಾದ, ಅವಿಭಾಜ್ಯವಾದ ಇರುಹನ್ನು ವ್ಯಕ್ತಗೊಳಿಸುವವು. ಈ ಇರುಹಿನ ಪ್ರಮುಖವಾದ ಲಕ್ಷಣವು ಸ್ವಾನುಭಾವ ಜೀವಿಯ ಅನಂತವಾದ ಅವಿನಾಶಿಯಾದ ಶಕ್ತಿಯಲ್ಲಿ ವ್ಯಕ್ತ-ವಾಗುವದು ಹಾಗು ಈ ಸ್ವಾನುಭವಕ್ಕೆ ಅನಂತವಾದ ಅವಿಚ್ಛಿನ್ನವಾದ ಶಾಂತಿ ಆನಂದಗಳ ಅನುಭೂತಿಯೇ ಮುಖ್ಯ ಲಕ್ಷಣವಾಗಿರುವದು. ವಿಶ್ವಜೀವನವು ಸೃಷ್ಟಿ ಸ್ಥಿತಿ ಲಯಗಳ ತಾಳಮೇಳದಿಂದ ಕೂಡಿಕೊಂಡಿದೆ. ಮತ್ತು ಅದು ಪರವಸ್ತುವಿನ ಪರಮಾನಂದದ ಲೀಲೆಯಾಗಿದೆ. ಅನಂತವಾದ ಆ ದೇವನ ಅಪಾರವಾದ ಪ್ರೇಮ ಆನಂದದಲ್ಲಿ, ಅನಂತವಾದ ಶಾಂತಿಯಲ್ಲಿ ಪಾಲುಗಾರನಾಗಿ ಶಾಶ್ವತವಾದ ಒಂದು ದಿವ್ಯ ಜೀವನದಲ್ಲಿ ಹೊಂದಿಕೊಂಡು ಮುನ್ನಡೆಯಿಡ ಬೇಕೆಂಬುದು ಲಿಂಗವಂತನ ಪರಮಾದರ್ಶವಾಗಿರುತ್ತದೆ. ಶಿವಯೋಗ ದೃಷ್ಟಿ-ಯಲ್ಲಿ ತಾನು ಕಂಡ ಲಿಂಗದ ನಿರ್ನಿಮೇಷ ನೋಟದ ಅನುಸಂಧಾನದಿಂದ ಈ ಆದರ್ಶವನ್ನು ಈಡೇರಿಸಿಕೊಳ್ಳಲು ಲಿಂಗಧಾರಿಯು ಕಾರ್ಯಪ್ರವೃತಿಯುಳ್ಳವ-ನಾಗುತ್ತಾನೆ.

ಇಂತಹ ಪರವಸ್ತುವೆನಿಸಿದ ಶಿವನೊಡನೆ ಲಿಂಗದೊಡನೆ ಸಮರಸವನ್ನು ಹೊಂದುವ ವಿಧಾನಕ್ಕೆ, ಸಾಧನೆಯ ಕ್ರಮಕ್ಕೆ ಶಿವಯೋಗ ಎಂದು ಕರೆಯು-ವರು. ಶಿವಯೋಗ ಪ್ರದೀಪಿಕೆಯಲ್ಲಿ,

ಜ್ಞಾನಂ ಶಿವಮಯಂ ಭಕ್ತಿಃ ಶೈವೀಧ್ಯಾನಂ ಶಿವಾತ್ಮಕಂ ।
ಶಿವವ್ರತಂ ಶಿವಾರ್ಚೇತಿ ಶಿವಯೋಗೋ ಹಿ ಪಂಚಧಾ ॥

ಎಂದರೆ ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತ ಮತ್ತು ಶಿವಪೂಜೆ ಎಂಬ ಐದು ಅಂಗಗಳಿಂದ ಕೂಡಿದುದಾಗಿದೆ ಶಿವಯೋಗ ಎಂದು ತಿಳಿಸ-ಲಾಗಿದೆ. ಈ ಐದು ಪ್ರಕಾರಗಳಲ್ಲಿ ಶಿವಪೂಜೆಯೇ ಲಿಂಗವಂತನ ದಿನದಿನದ ಆ ಧಾರ್ಮಿಕ ಆಧ್ಯಾತ್ಮಿಕ ಜೀವನದಲ್ಲಿ ಬಹು ಪ್ರಮುಖವಾದ ಸಾಧನೆಯಾಗಿದೆ. ಇದು ಶಿವಯೋಗದ ಅತಿ ಶ್ರೇಷ್ಠವಾದ ಲಕ್ಷಣವಾಗಿದೆ; ಅದೇಕೆ ಶಿವಪೂಜೆಯೇ ಶಿವಯೋಗವೆನಿಸಿದೆ. ಇದರಿಂದ ಶಿವಯೋಗವೆಂದರೆ ಶಿವಪೂಜೆ ಅಥವಾ ಇಷ್ಟಲಿಂಗಾರ್ಚನೆಯೇ ಸರಿ. ಇಷ್ಟಲಿಂಗಾರ್ಚನೆಯನ್ನು ದಿನಕೊಮ್ಮೆ ಎರಡು ವೇಳೆ ಇಲ್ಲವೆ ಮೂರು ಸಾರೆ ಮಾಡಬೇಕೆಂದು ವಿಧಿಸಲಾಗಿದೆ.

ತ್ರಿಕಾಲಂ ವಾ ದ್ವಿಕಾಲಂ ವಾಪ್ಯೇಕಕಾಲಮಥಾಪಿ ವಾ ।
ಭಕ್ತ್ಯಾ ಗುರೂಕ್ತಮಂತ್ರೇಣ ಪೂಜಯೇತ್ ಚಿನ್ಮಯಂ ಶಿವಂ ॥

ಇಂತಹ ರಹಸ್ಯವನ್ನು ಗರ್ಭೀಕರಿಸಿಕೊಂಡ ಲಿಂಗವು ಶಿವಯೋಗ ಸಾಧನೆಗೆ ಅಗತ್ಯವಾಗಿದೆ, ಅನಿವಾರ್ಯವಾಗಿದೆ.

ಶಿವಪೂಜೆಯಲ್ಲಿ ಶಿವಧ್ಯಾನವು ಅತ್ಯವಶ್ಯವಾಗಿದೆ. ಧ್ಯಾನಕ್ಕೆ ಅನುಕೂಲ-ವಾಗುವಂತೆ ದೀಕ್ಷೆಯ ಕಾಲದಲ್ಲಿ ಗುರುವು ಶಿಷ್ಯನ ಸ್ವ-ಸ್ವರೂಪವನ್ನು ಆಹ್ವಾನಿಸಿ ಕಳೆಯನ್ನು ತುಂಬಿ ಲಿಂಗರೂಪವಾಗಿ ಅವನ ಕೈಯಲ್ಲಿರಿಸುವನು. ಲಿಂಗವಂತ-ರಲ್ಲಿ ದೀಕ್ಷೆಯೊಂದೇ ಒಂದು ಸಂಸ್ಕಾರವುಂಟು. ಇನ್ನುಳಿದ ಧಾರ್ಮಿಕ ಸಂಸ್ಕಾರ-ಗಳಿಗೆ ಅಲ್ಲಿ ಅವಕಾಶವಿಲ್ಲ. ಶಿವಜ್ಞಾನದ ಬಗೆಗೆ ಈ ಪೂರ್ವದಲ್ಲಿಯೇ ತಿಳಿಸಿದೆ. ಶಿವವ್ರತವು ಶಿವನ ಬಗೆಗಿನ ವರ್ತನೆಯನ್ನು ಸೂಚಿಸುವದು. ಈ ವರ್ತನೆ-ಯಲ್ಲಿ ನಿಷ್ಕಾಮಕರ್ಮವೂ ಅಡಕವಾಗಿರುತ್ತದೆ. ಯಾಕಂದರೆ ವೀರಶೈವ ಅನುಭಾವಿಯು ಕಾಯಕವಿಲ್ಲದೆ ಆಲಸಿಯಾಗಿರುವುದನ್ನು ಎಂದೂ ಶಕ್ತಿ

ಒಂದೇ ಆಗಿರುವವೆಂಬುದು 'ಅಹಂಗ್ರಹೋಪಾಸನೆ' ಯಿಂದ ಸ್ಪಷ್ಟವಾಗುವದು. ಅನಂತವಾದ ಅನೇಕತ್ವದಲ್ಲಿ ಏಕತ್ವದ ಇರವಿನ ಬಗೆಯನ್ನು ಅಳವಡಿಸಿಕೊಂಡರೆ ಅದುವೆ ಸಮರಸವೆನಿಸುವದು. ಈ ಸಮರಸದ ಆನಂದವು ಉಪಮಾತೀತ ವಾಗಿರುತ್ತದೆ. ವಿಶ್ವದಲ್ಲಾಗಲಿ ವ್ಯಕ್ತಿಯಲ್ಲಾಗಲಿ, ಬ್ರಹ್ಮಾಂಡದಲ್ಲಾಗಲಿ ಪಿಂಡಾಂಡದಲ್ಲಾಗಲಿ ಒಡಲುಗೊಂಡ ಆತ್ಮವು ಅನಂತವಾದ, ಅವಿಭಾಜ್ಯವಾದ ಇರುಹನ್ನು ವ್ಯಕ್ತಗೊಳಿಸುವವು. ಈ ಇರುಹಿನ ಪ್ರಮುಖವಾದ ಲಕ್ಷಣವು ಸ್ವಾನುಭಾವ ಜೀವಿಯ ಅನಂತವಾದ ಅವಿನಾಶಿಯಾದ ಶಕ್ತಿಯಲ್ಲಿ ವ್ಯಕ್ತ-ವಾಗುವದು ಹಾಗು ಈ ಸ್ವಾನುಭವಕ್ಕೆ ಅನಂತವಾದ ಅವಿಚ್ಛಿನ್ನವಾದ ಶಾಂತಿ ಆನಂದಗಳ ಅನುಭೂತಿಯೇ ಮುಖ್ಯ ಲಕ್ಷಣವಾಗಿರುವದು. ವಿಶ್ವಜೀವನವು ಸೃಷ್ಟಿ ಸ್ಥಿತಿ ಲಯಗಳ ತಾಳಮೇಳದಿಂದ ಕೂಡಿಕೊಂಡಿದೆ. ಮತ್ತು ಅದು ಪರವಸ್ತುವಿನ ಪರಮಾನಂದದ ಲೀಲೆಯಾಗಿದೆ. ಅನಂತವಾದ ಆ ದೇವನ ಅಪಾರವಾದ ಪ್ರೇಮ ಆನಂದದಲ್ಲಿ, ಅನಂತವಾದ ಶಾಂತಿಯಲ್ಲಿ ಪಾಲುಗಾರನಾಗಿ ಶಾಶ್ವತವಾದ ಒಂದು ದಿವ್ಯ ಜೀವನದಲ್ಲಿ ಹೊಂದಿಕೊಂಡು ಮುನ್ನಡೆಯಿಡ ಬೇಕೆಂಬುದು ಲಿಂಗವಂತನ ಪರಮಾದರ್ಶವಾಗಿರುತ್ತದೆ. ಶಿವಯೋಗ ದೃಷ್ಟಿ-ಯಲ್ಲಿ ತಾನು ಕಂಡ ಲಿಂಗದ ನಿರ್ನಿಮೇಷ ನೋಟದ ಅನುಸಂಧಾನದಿಂದ ಈ ಆದರ್ಶವನ್ನು ಈಡೇರಿಸಿಕೊಳ್ಳಲು ಲಿಂಗಧಾರಿಯು ಕಾರ್ಯಪ್ರವೃತಿಯುಳ್ಳವ-ನಾಗುತ್ತಾನೆ.

ಇಂತಹ ಪರವಸ್ತುವೆನಿಸಿದ ಶಿವನೊಡನೆ ಲಿಂಗದೊಡನೆ ಸಮರಸವನ್ನು ಹೊಂದುವ ವಿಧಾನಕ್ಕೆ, ಸಾಧನೆಯ ಕ್ರಮಕ್ಕೆ ಶಿವಯೋಗ ಎಂದು ಕರೆಯುವರು. ಶಿವಯೋಗ ಪ್ರದೀಪಿಕೆಯಲ್ಲಿ,

ಜ್ಞಾನಂ ಶಿವಮಯಂ ಭಕ್ತಿಃ ಶೈವೀಧ್ಯಾನಂ ಶಿವಾತ್ಮಕಂ ।
ಶಿವವ್ರತಂ ಶಿವಾರ್ಚೇತಿ ಶಿವಯೋಗೋ ಹಿ ಪಂಚಧಾ ॥

ಎಂದರೆ ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತ ಮತ್ತು ಶಿವಪೂಜೆ ಎಂಬ ಐದು ಅಂಗಗಳಿಂದ ಕೂಡಿದುದಾಗಿದೆ ಶಿವಯೋಗ ಎಂದು ತಿಳಿಸಲಾಗಿದೆ. ಈ ಐದು ಪ್ರಕಾರಗಳಲ್ಲಿ ಶಿವಪೂಜೆಯೇ ಲಿಂಗವಂತನ ದಿನದಿನದ ಆ ಧಾರ್ಮಿಕ ಆಧ್ಯಾತ್ಮಿಕ ಜೀವನದಲ್ಲಿ ಬಹು ಪ್ರಮುಖವಾದ ಸಾಧನೆಯಾಗಿದೆ. ಇದು ಶಿವಯೋಗದ ಅತಿ ಶ್ರೇಷ್ಠವಾದ ಲಕ್ಷಣವಾಗಿದೆ; ಆದೇಕೆ ಶಿವಪೂಜೆಯೇ ಶಿವಯೋಗವೆನಿಸಿದೆ. ಇದರಿಂದ ಶಿವಯೋಗವೆಂದರೆ ಶಿವಪೂಜೆ ಅಥವಾ ಇಷ್ಟಲಿಂಗಾರ್ಚನೆಯೇ ಸರಿ. ಇಷ್ಟಲಿಂಗಾರ್ಚನೆಯನ್ನು ದಿನಕೊಮ್ಮೆ ಎರಡು ವೇಳೆ ಇಲ್ಲವೆ ಮೂರು ಸಾರೆ ಮಾಡಬೇಕೆಂದು ವಿಧಿಸಲಾಗಿದೆ.

ತ್ರಿಕಾಲಂ ವಾ ದ್ವಿಕಾಲಂ ವಾಪ್ಯೇಕಕಾಲಮಥಾಪಿ ವಾ ।
ಭಕ್ತ್ಯಾ ಗುರೂಕ್ತಮಂತ್ರೇಣ ಪೂಜಯೇತ್ ಚಿನ್ಮಯಂ ಶಿವಂ ॥

ಇಂತಹ ರಹಸ್ಯವನ್ನು ಗರ್ಭೀಕರಿಸಿಕೊಂಡ ಲಿಂಗವು ಶಿವಯೋಗ ಸಾಧನೆಗೆ ಆಗತ್ಯವಾಗಿದೆ, ಅನಿವಾರ್ಯವಾಗಿದೆ.

ಶಿವಪೂಜೆಯಲ್ಲಿ ಶಿವಧ್ಯಾನವು ಅತ್ಯವಶ್ಯವಾಗಿದೆ. ಧ್ಯಾನಕ್ಕೆ ಅನುಕೂಲವಾಗುವಂತೆ ದೀಕ್ಷೆಯ ಕಾಲದಲ್ಲಿ ಗುರುವು ಶಿಷ್ಯನ ಸ್ವ-ಸ್ವರೂಪವನ್ನು ಆಹ್ವಾನಿಸಿ ಕಳೆಯನ್ನು ತುಂಬಿ ಲಿಂಗರೂಪವಾಗಿ ಅವನ ಕೈಯಲ್ಲಿರಿಸುವನು. ಲಿಂಗವಂತರಲ್ಲಿ ದೀಕ್ಷೆಯೊಂದೇ ಒಂದು ಸಂಸ್ಕಾರವುಂಟು. ಇನ್ನುಳಿದ ಧಾರ್ಮಿಕ ಸಂಸ್ಕಾರಗಳಿಗೆ ಅಲ್ಲಿ ಅವಕಾಶವಿಲ್ಲ. ಶಿವಜ್ಞಾನದ ಬಗೆಗೆ ಈ ಪೂರ್ವದಲ್ಲಿಯೇ ತಿಳಿಸಿದೆ. ಶಿವವ್ರತವು ಶಿವನ ಬಗೆಗಿನ ವರ್ತನೆಯನ್ನು ಸೂಚಿಸುವದು. ಈ ವರ್ತನೆಯಲ್ಲಿ ನಿಷ್ಕಾಮಕರ್ಮವೂ ಅಡಕವಾಗಿರುತ್ತದೆ. ಯಾಕಂದರೆ ವೀರಶೈವ ಅನುಭಾವಿಯು ಕಾಯಕವಿಲ್ಲದೆ ಆಲಸಿಯಾಗಿರುವುದನ್ನು ಎಂದೂ ಪತ್ತಿ

ಹಿಡಿಯುವದಿಲ್ಲ. ಮನುಷ್ಯನು ಯಾವಾಗಲೂ ತಾಳ್ಮೆ ನಿಷ್ಠೆಗಳಿಂದ, ನಿರ್ವಂಚನೆ ನಿಷ್ಕಾಮಗಳಿಂದ ಕೂಡಿಕೊಂಡು ಸತತೋದ್ಯೋಗಿಯಾಗಿರಬೇಕೆಂದೂ, ಮಾಡುವ ಉದ್ಯೋಗವೆಲ್ಲ ಶಿವಪೂಜೆಯೇ ಆಗಿದೆಯೆಂದೂ ಅವನು ಹೇಳುತ್ತಾನೆ. ಕಾಯಕವೇ ಕೈಲಾಸ, 'Work is worship' ಎಂಬ ಮಾತು ಲಿಂಗವಂತ ಅನುಭಾವಿಗಳ ಜೀವನದಲ್ಲಿ ಹಾಸುಹೊಕ್ಕಾಗಿರುತ್ತದೆ. ವೀರಶೈವನು ನಿಷ್ಕಾಮ ಕರ್ಮದ ಕಲಿಯಾಗುವುದರ ಜೊತೆಗೆ ಪಾತಂಜಲ ಯೋಗಸೂತ್ರದ ಅಷ್ಟಾಂಗ ಗಳಲ್ಲಿ ಯಮ-ನಿಯಮಗಳ ಎಲ್ಲ ಪ್ರಕಾರದ ನಿಯಮಪಾಲನೆಯಲ್ಲಿ ನಿರತನಾಗಿರ ಬೇಕೆಂಬುದನ್ನೂ ಶಿವತ್ರತವು ಸಂಕಲ್ಪಿಸುತ್ತಿದೆ.

ಶಿವಭಕ್ತಿಯು ಶಿವ-ಜೀವರಲ್ಲಿಯ, ಲಿಂಗ-ಅಂಗರಲ್ಲಿಯ ಉಪಾಸ್ಯ-ಉಪಾಸಕ ಭಾವವನ್ನು ಸೂಚಿಸುವದು. ಪೂಜಾಸಮಯದಲ್ಲಿ ಪೂಜ್ಯ-ಪೂಜಕ ವ್ಯಕ್ತಿಗಳು ಪರಸ್ಪರವಾಗಿ ದೃಷ್ಟಿ ದೃಷ್ಟಿಯನ್ನು ಕೂಡಿಸುವವರಾಗುತ್ತಾರೆ. ಯಾಕಂದರೆ ಲಿಂಗಪೂಜೆಯ ಕಾಲಕ್ಕೆ ಸಾಧಕನು ಲಿಂಗವನ್ನು ತನ್ನ ಎಡದ ಅಂಗೈಯಲ್ಲಿರಿಸಿ ಕೊಂಡು ಭ್ರೂಮಧ್ಯದ ಎದುರಿಗೆ ನೇರವಾಗಿ ನಿಲ್ಲಿಸಿ ಗುರುವು ಕಾಣಿಸಿಕೊಟ್ಟ ಸ್ವ-ಸ್ವರೂಪವನ್ನೇ ಧ್ಯಾನಿಸುತ್ತಾನೆ. ಪೂಜಕನು ಪೂಜ್ಯ ವಸ್ತುವಿಗಿಂತ ಯಾವ ದೃಷ್ಟಿಯಿಂದಲೂ ಭಿನ್ನವಲ್ಲ, ಅನನ್ಯವಾಗಿದ್ದಾನೆ ಎಂಬ ರಹಸ್ಯವು ಪೂಜೆಯಲ್ಲಿ ಹುದುಗಿರುತ್ತದೆ. ಇಂತಹ ತಿಳಿವಳಿಕೆಗೆ 'ಅಹಂಗ್ರಹೋಪಾಸನೆ' ಎಂದು ಲಿಂಗ ಧಾರಣ ಚಂದ್ರಿಕೆಯಲ್ಲಿ ಹೇಳಲಾಗಿದೆ. ಅಹಂಗ್ರಹೋಪಾಸನೆಯಲ್ಲಿ ಭಕ್ತನಲ್ಲಿ ಕೆಲ ಸಮಯ ಭಿನ್ನನೆಂಬ ತಿಳಿವಳಿಕೆ ಮೂಡಿದ್ದರೂ ತಾನು ಪೂಜ್ಯ ವಸ್ತುವಿನ ಅಂಶವೇ ಆಗಿರುವೆನೆಂಬ ದೃಢಭಾವದಿಂದ ಅವನು ಸಾಗುತ್ತಾನೆ. ಇಂತಹ ವರ್ತನೆಯು ದೇವ ಭಕ್ತರಲ್ಲಿಯ 'ಸಹಮಾರ್ಗ'ವನ್ನು ನಿರೂಪಿಸುವದು. ಇಲ್ಲಿ ಲಿಂಗವು ತನ್ನ ಸಂಗಾತಿ, ಸ್ನೇಹಿತ, ಸಂರಕ್ಷಕನೆಂದು ತಿಳಿಯುತ್ತಾನೆ ಅಂಗನು. ಮೂರ್ತಿಪೂಜೆಯಲ್ಲಿರುವಂತೆ ಆ ಲಿಂಗವು ತನ್ನಿಂದ ಅನ್ಯವಾಗಿದೆ ಎಂಬ ಭಾವನೆಗೆ ಅವನಲ್ಲಿ ಇಂಬಿಲ್ಲ. ಲಿಂಗವೆನಿಸಿದ ಪರವಸ್ತುವಿನಲ್ಲಿ ಆ ಪರವಸ್ತುವಿನ ಅಂಶವೆಂಬ ಗೂಢವಾದ ನಂಬುಗೆಯಿಂದ ಕೂಡಿಕೊಂಡವನಾಗಿ ಅವನು ಸಾಮ ರಸ್ಯವನ್ನು ಬೆಳೆಸಿಕೊಳ್ಳುತ್ತಾನೆ.

ಶಿವಧ್ಯಾನವು ಶಿವಯೋಗದ ಅಂಗಗಳಲ್ಲಿ ಕಲಶಪ್ರಾಯವಾಗಿದೆ. ಶಿವ ಧ್ಯಾನದಲ್ಲಿ ಅಂಗ ಅಥವಾ ಭಕ್ತನು ಲಿಂಗ ಅಥವಾ ದೇವನಲ್ಲಿ ತನ್ನ ತನು ಕರಣಾದಿಗಳನ್ನು ಕೇಂದ್ರೀಕರಿಸಿ ಬೆರಿಸುತ್ತಾನೆ. ಅದರಿಂದ ಆತ್ಯಂತಿಕವಾಗಿ ಅವ

ನಲ್ಲಿ ಸಾಮರಸ್ಯವನ್ನು ಹೊಂದಬಯಸುತ್ತಾನೆ. 'ಸೋಹಮಸ್ಮಿ–ಅವನೇ ನಾನು' ಎಂಬ ವಿಚಾರದಲ್ಲಿ ಅಹಂಗ್ರಹೋಪಾಸನೆಯ ಕ್ರಮದಿಂದ ಪರಶಿವನಲ್ಲಿ ಸಂಗಮ ಅಥವಾ ವಿಚಾರಕೇಂದ್ರೀಕರಣವನ್ನು ಮೂಡಿಸಿಕೊಳ್ಳುವುದೇ ಭಕ್ತನಿಗೆ ಆಧ್ಯಾತ್ಮಿಕ ಪರಮಾದರ್ಶವಾಗಿದೆ. ಪರವಸ್ತುವು ಇಂದ್ರಿಯ ಮನಗಳಿಗೆ ಮೀರಿದೆ ಅಗೋಚರವಾಗಿದೆ, ಆದರೆ ಘನಮನಕ್ಕೆ ಸನ್ಮನಕ್ಕೆ ಅದು ಸಿಲುಕುತ್ತದೆ— ಎಂದು ನಿರೂಪಿಸುವ ಸತ್ಯವನ್ನು ಅನುಭಾವಿಯು ಸಾಕ್ಷಾತ್ಕರಿಸಿಕೊಳ್ಳುವುದು ಈ ಪರಮಾದರ್ಶನ ಸಾಧನೆಯಲ್ಲಿವೆ. ಪರವಸ್ತುವಿನಲ್ಲಿರಿಸಿದ ಅವಿರಳವಾದ ಅನನ್ಯವಾದ ಲಕ್ಷ್ಯವು ಜ್ಞಾನಶಕ್ತಿಯನ್ನು ನೇರವಾದ ಸಾಧಕನ ಎದುರಿಗೆ ತೆರೆದಿರಿಸುವುದು; ತರ್ಕಬುದ್ಧಿ ವಿಕಲ್ಪಭಾವನೆಗಳನ್ನೆಲ್ಲ ಬದಿಗಿರಿಸುವುದು. ಅಹಂಗ್ರಹೋಪಾಸನೆಯಿಂದ, ಎಡದ ಅಂಗೈಯಲ್ಲಿರಿಸಿದ ಲಿಂಗದ ನಿರ್ನಿಮೇಷ ನೋಟದಿಂದ, ಅನನ್ಯವಾದ ಲಕ್ಷ್ಯದಿಂದ ಭಕ್ತನು ತನ್ನ ಆತ್ಮಶಕ್ತಿಯನ್ನು ಜಾಗ್ರತಗೊಳಿಸಿ ಬೆಳಿಸಿಕೊಳ್ಳುತ್ತಾನೆ. ಇದರಿಂದಾಗಿ ಅವನಲ್ಲಿಯ ಆತ್ಮಶಕ್ತಿಯು ತಪಸ್ ಶಕ್ತಿಯಾಗಿ ಮಾರ್ಪಟ್ಟು ಅವನ ಇಡಿಯ ಜೀವನ ಕ್ರಮವನ್ನೇ ಸಚೇತನಗೊಳಿಸುವದು.

ಈ ತಪಸ್ ಶಕ್ತಿಯು ಮೂಲಾಧಾರದಲ್ಲಿ ಎಂದರೆ ಬೆನ್ನುಹುರಿಯ ಕೆಳಗಿನ ತುದಿಯಲ್ಲಿ ಸುಪ್ತವಾಗಿ ಸುರಳಿಯಾಗಿ ಅವಿತುಕೊಂಡಿರುವ ಕುಂಡಲಿನಿ ಶಕ್ತಿಯನ್ನು ಜಾಗ್ರತಗೊಳಿಸಿ ನವಚೈತನ್ಯವನ್ನು ಮೂಡಿಸುವುದು. ಜಾಗ್ರತವಾದ ಕುಂಡಲಿನಿ ಶಕ್ತಿಯು ಮೇರುದಂಡದ ಅಥವಾ ಬೆನ್ನುಹುರಿಯ ಮುಖಾಂತರವಾಗಿ ಮಾರ್ಗ ಕ್ರಮಣಮಾಡಿ ಎರಡು ಹುಬ್ಬುಗಳ ನಡುವಿನ ಆಜ್ಞಾಚಕ್ರಕ್ಕೆ ಬಂದು ನಿಲ್ಲುವದು. ಇದಕ್ಕೇನೇ ಕುಂಡಲಿನಿ ಶಕ್ತಿಯ ಊರ್ಧ್ವಗಮನ ಅಥವಾ ಅಂಗನ ಶಕ್ತಿ ಎಂದೂ ಹೆಸರು. ಪರಶಿವನು ಅಥವಾ 'ಪರಾ' ಸಂವಿತ್ತು ಮಾನವನ ಶಿರೋಮಧ್ಯದ ಸಹಸ್ರಾರ ಚಕ್ರದಲ್ಲಿ ವಾಸಿಸುವನು. ಅಲ್ಲಿಂದ ಅವನು ಅಂಗನೆನಿಸಿದ ಜೀವನನ್ನು ಸಂಧಿಸಲು ಆಜ್ಞಾಚಕ್ರಕ್ಕೆ ಜೋಡಣೆಯಾಗಿರುವ ಕಣ್ಣುಗಳು ನರಗಳ ಮುಖಾಂತರವಾಗಿ ಅನಿಮಿಷ ದೃಷ್ಟಿಯ ಸಾಧನೆಯ ಫಲವಾಗಿ ಕೆಳಕ್ಕಿಳಿಯುವನು. ಇದಕ್ಕೆ ಕಾರುಣ್ಯ ಅಥವಾ ಅನುಗ್ರಹ ಶಕ್ತಿಯ (Grace) ಅವತಾರವೆಂದು ಕರೆಯುತ್ತಾರೆ. ಮೇಲಕ್ಕೇರುವ ಅಂಗನ ಶಕ್ತಿಯೂ (Force) ಕೆಳಕ್ಕೆ ಇಳಿಯುವ ಪ್ರಭುವಿನ ಕಾರುಣ್ಯ ಶಕ್ತಿಯೂ ಒಡವೆರೆದು ಪರಮ ಶಾಂತಿಯಾಗಿ (Transcendent Peace)

ಮಾರ್ಪಟ್ಟು ಹೊರಹೊಮ್ಮುವದು. ಆದುದರಿಂದ ಭ್ರೂಮಧ್ಯ ಸ್ಥಾನವು ಅಂಗ–ಲಿಂಗ ಜೀವ–ಶಿವ ಭಕ್ತ–ದೇವರ ಬೆಸುಗೆಯು ಆತ್ಯಂತಿಕ ಸ್ಥಾನವಾಗಿ ಸಾಮರಸ್ಯದ ನಿಲವಾಗಿ ಬೆಳಗುವದು. ಅಂಗ–ಲಿಂಗ ಸಾಮರಸ್ಯವನ್ನು ಕುರಿತು ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಸಹಸ್ರ ದಲದಿಂದ ಶೋಭಿತವಾದ ಬ್ರಹ್ಮಚಕ್ರದಲ್ಲಿ ಮೂವತ್ತೆಂಟು ಕಳೆಗಳಿಂದೊಡಗೂಡಿದ ಕುಂಡಲಿನೀ ಮಂಡಲದ ಮೇಲೆ ಲಿಂಗಾಂಗ ಸಾಮರಸ್ಯ ಲಕ್ಷಣವನ್ನು ವ್ಯಕ್ತಗೊಳಿಸುವ ಶಿವಯೋಗ ಸಂಪನ್ನನಾದ ಪ್ರಾಣ-ಲಿಂಗಿಗೆ ಶಿವಾನಂದವು (ಕರತಲಾಮಲಕವಾಗುವದು)– ಎಂದು ಹೇಳಲಾಗಿದೆ.

ಶಿವನು ಲಿಂಗರೂಪವಾಗಿರುವದರಿಂದ ಶಿವಯೋಗಿಯ ಅರ್ಚನೆಗಾಗಿ ಶಿವ-ಲಿಂಗವು ವಿಕಾಸ ಹೊಂದಿ ಶಕ್ತಿಯ ಕೇಂದ್ರಗಳಾದ ಚಕ್ರಗಳಲ್ಲಿ ವಿವಿಧ ಲಿಂಗರೂಪವಾಗಿ ವ್ಯಕ್ತವಾಗುವದು. ಸಾಮಾನ್ಯವಾಗಿ ಷಟ್‌ಚಕ್ರಗಳನ್ನು ಗುರುತಿಸಿ ಸಾಧಾರಣವಾಗಿ ಎಲ್ಲ ಯೋಗಸಾಧಕರೂ ಕೇಂದ್ರಿಕೃತ ಶಕ್ತಿಯನ್ನು ಕಾಣುವರು. ಅಲ್ಲದೆ ಬ್ರಹ್ಮರಂಧ್ರವೆನಿಸುವ ಸಹಸ್ರಾರ ಚಕ್ರವೂ ಶಿವನಿಂದೊಡಗೂಡಿದ ಶಕ್ತಿಗೆ ಆವಾಸಸ್ಥಾನವಾಗಿ ಸಪ್ತಮ ಚಕ್ರವೆಂದು ಪರಿಗಣಿತವಾಗಿದೆ. ವೀರಶೈವ ಶಿವ-ಯೋಗಿಗಳು ಮಾತ್ರ ಈ ಶಕ್ತಿಯ ಕೇಂದ್ರಗಳು ಒಂಬತ್ತು ಎಂದು ಕಂಡಿರುವರು. ಇದರಿಂದ ಯೋಗಿಯು ತನ್ನ ದಿವ್ಯ ದೃಷ್ಟಿಯಿಂದ ವಿವಿಧ ಶಕ್ತಿಗಳ ಕೇಂದ್ರ ಸ್ಥಳಗಳನ್ನು ಸಾಧನೆಯ ಕ್ರಮದಲ್ಲಿ ಕಂಡು ಅಲ್ಲಿ ನೆಲೆನಿಂತು ಪಡೆಯುವ ಪರಮಾ-ನಂದದಲ್ಲಿ ತಲ್ಲೀನನಾಗುವನೆಂಬುದು ಗೊತ್ತಾಗುವದು. ಸಾಧನೆಯು ಉಗ್ರವೂ ಆಳವೂ ಆದಂತೆ ಬೇರೆ ಬೇರೆ ಶಕ್ತಿಗಳನ್ನೂ ಅವುಗಳ ಕೇಂದ್ರ ಸ್ಥಾನಗಳನ್ನೂ ಕಾಣಲವಕಾಶವಿದೆಯೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಶಿವಯೋಗದ ಲಕ್ಷಣವನ್ನು ತಿಳಿಸುತ್ತ, ಸರ್ಪಭೂಷಣ ಶಿವಯೋಗಿಗಳು ತೇಜೋಮಯವಾದ ಪರವಸ್ತುವು ಈ ಒಂಬತ್ತು ಚಕ್ರಗಳಲ್ಲಿ ಶಿವಲಿಂಗ ಸ್ವರೂಪದಿಂದ ಕಂಗೊಳಿಸು-ವದು; ಆಯಾ ಸ್ಥಾನದಲ್ಲಿ ಅದರ ಅನುಸಂಧಾನದಿಂದ ಸಾಧಕನಲ್ಲಿ ಒಂದೊಂದು ಬಗೆಯಾದ ಶಕ್ತಿಯು ಜಾಗ್ರತವಾಗಿ ಕೊನೆಗೆ ಹಿಂಭಾಗದ ಪಶ್ಚಿಮ ಚಕ್ರದಲ್ಲಿ ಪರವಸ್ತುವಿನೊಡನೆ ಉರಿಕರ್ಪುರದಂತೆ ಬೆರೆಯುವನು— ಎಂದು ಹೇಳುತ್ತಾರೆ.

ನವ ಚಕ್ರಗತ ತೇಜೋಮಯ ಗುರುಸಿದ್ಧನೆ
ಶಿವಲಿಂಗವಾಗಿಹನಿದನೊಂದಿ ।
ಅವಿರಳನಾಗಿರಲಪವರ್ಗವಹುದೆಂದು
ಶಿವಯೋಗವನು ಕಾಣಿಸಿದರಿಂದೆ ॥

ಲಿಂಗಾಂಗ ಸಾಮರಸ್ಯವು ವೀರಶೈವದ ಧ್ಯೇಯವಾಗಿದೆ. ಶಿವಯೋಗವು ಇದನ್ನು ಸಾಧಿಸಿಕೊಡುವದು. ಪರಶಿವನಿಗಾಗಿ ಅಂತರಂಗದಲ್ಲಿ ಮೊಳಕೆಯೊಡೆದ ಮಮತೆ ಆಸಕ್ತಿ ಪ್ರೀತಿ ಒಟ್ಟಾರೆ, ಭಕ್ತಿಯಿಂದಾಗಿ ಜೀವನಿಗೆ 'ಅಂಗ'ನೆಂದು ಸಂಬೋಧಿಸಲಾಗಿದೆಯಷ್ಟೆ! ಜೀವನು ಸಾಮಾನ್ಯವಾಗಿ ಮೂಲಾಧಾರದಲ್ಲಿ ಅವಿತುಕೊಂಡು ಸಂಸಾರದ ಸಿಹಿ ಕಹಿ ಫಲಗಳನ್ನು ಉಣ್ಣುತ್ತ ತೊಳಲುತ್ತಿರು-ವನು. ನಾನಾರು, ನಾನೆಲ್ಲಿಂದ ಬಂದೆ, ಮುಂದೆ ನಾನೇನಾಗಬೇಕಾಗಿದೆ—ಎಂಬ ಆಲೋಚನೆ ಎಚ್ಚರವಿಲ್ಲದೆ ಕೀಳು ದೃಷ್ಟಿಯುಳ್ಳವನಾಗಿ ಕನಿಷ್ಠವಾದ ಬಾಳನ್ನು ಸಾಗಿಸುತ್ತಿರುತ್ತಾನೆ ಅವನು. 'ಲಿಂಗ' ಎಂದು ಸಂಬೋಧಿತನಾದ ಪರಶಿವನಾದರೋ ಮೇಲೆ ಸಹಸ್ರಾರದಲ್ಲಿ ಸ್ವ-ಲೀಲಾನಂದದಲ್ಲಿ ಮೇಲುಮುಖದ ನೋಟವುಳ್ಳವನಾಗಿ ಉಳಿದುಬಿಡುತ್ತಾನೆ. ಶಿವ–ಜೀವರ ಈ ಇರವಿನಿಂದಾಗಿ ಪರಸ್ಪರ ದೃಷ್ಟಿಗಳಲ್ಲಿ ಮೇಳವಾಗುವಂತಿಲ್ಲ. ಅವರಲ್ಲಿ ಸಾಮರಸ್ಯದ ನಿಲುವು ಅಳವಡುವಂತಿಲ್ಲ. ಸಾಮರಸ್ಯದ ಹಂಬಲು ಅವಶ್ಯವಾಗಿರಬೇಕಾದುದು ಜೀವನ-ದಲ್ಲಿ. ಅದರೆ ಜೀವನು ತನ್ನ ಇರುವಿಕೆಗಾಗಿ ಮನಸ್ಸೊಂದು ಬಹಿರ್ಮುಖ ಪ್ರವೃತ್ತಿಯಿಂದ ಪರಾವರ್ತನೆಯನ್ನು ಪಡೆದು ತುಸುವೆ ಆಗಲಿ ಮುಖ ತಿರುಗಿಸಿದಾಗ ಮಾತ್ರ ಪರಶಿವನೂ ಒಂದಿಷ್ಟು– ಜೀವನಲ್ಲಿ ಮೂಡಿದ ಲವಲವಿಕೆಗೆ ತಕ್ಕಷ್ಟು– ಕರುಣಾದೃಷ್ಟಿಯನ್ನು ಹೊರಳಿಸುತ್ತಾನೆ. ಭಗವದಭಿಮುಖನಾದ ಜೀವನ–ಅಂಗನ ಭಕ್ತಿಯು ಉತ್ಕಟವೂ ಏಕಮುಖವೂ ಪರಿಪೂರ್ಣವೂ ಆಗುತ್ತ ನಡೆದಂತೆ ಪ್ರಭುವಿನ ಕಾರುಣ್ಯವೂ ಆದರಿಂದ ಆಕೃಷ್ಟವಾಗಿ ಅಷ್ಟು ಅಷ್ಟು ಮಟ್ಟಿಗೆ ಕೆಳಗೆ ಹರಿಯುತ್ತ ಬರುವದು. ಜೀವನ ಬಹಿರ್ಮುಖ ಪ್ರವೃತ್ತಿಯು ಕೇವಲ ಅಂತರ್ಮುಖಕ್ಕೆ ಇಳಿದರೆ ತೀರಲಿಲ್ಲ; ಅದು ತನು ಪ್ರಾಣಗಳನ್ನೆಲ್ಲ ವ್ಯಾಪಿಸಿ ಪರಿಪೂರ್ಣ ಪರಿವರ್ತನೆಯನ್ನು ಪಡೆಯುವ ಸಾಮರ್ಥ್ಯವುಳ್ಳದ್ದಾಗಬೇಕು. ಇದಕ್ಕಾಗಿ ಸಂತತವಾದ ಸತ್ವಯುತವಾದ ಪುರುಷ ಪ್ರಯತ್ನವು ಬೇಕು.

ತನ್ನನ್ನು ಕೆಳಗೆ ಎಳೆದು ಜಗ್ಗುವ ಪ್ರವೃತ್ತಿಗಳು ತನ್ನಲ್ಲಿಯೇ ಇರುತ್ತವೆ. ಪುರುಷ ಪ್ರಯತ್ನದಿಂದ ಅವನ್ನೆಲ್ಲ ಕೊಡಹಿ ಬಿಟ್ಟು, ಅವುಗಳಿಂದ ತನ್ನನ್ನು ಬಿಡುಗಡೆ ಮಾಡಿಕೊಂಡು ನಿಶ್ಚಿತವಾಗಿ ಪ್ರಭುವಿನ ಕಾರುಣ್ಯಕ್ಕೋಸುಗ ಪರಿತಪಿಸಬೇಕು. ಪ್ರಭುಕಾರುಣ್ಯದ ಬಯಕೆಯು ಪ್ರಬಲವಾದ ಅಭೀಪ್ಸೆಯಲ್ಲಿ

ಮಾರ್ಪಡಬೇಕು; ಅದು ಅಚ್ಚಳಿಯದ ನಿಚ್ಚ ಆಕಾಂಕ್ಷೆಯಾಗಿ ಪರಿಣಮಿಸಬೇಕು. ಬಸುರಿ ಹೆಣ್ಣುಮಗಳಿಗೆ ಬಯಕೆ ಹತ್ತುವಂತೆ ಭಕ್ತನಿಗೆ ದೇವನ ಬಗೆಗಿನ ಬಯಕೆ ಅನವರತವಾಗಿ ಬೆಳೆಯಹತ್ತಿದರೆ, ಆ ಹಂಬಲವು ಹಲವು ತೆರನಾಗಿ ಹಬ್ಬಹತ್ತಿ-ದರೆ ಭಗವದಭಿಮುಖವಾದ ಜೀವನಿಗೆ, ಅಂಗನಿಗೆ ಶಿವಯೋಗದ ಮೊದಲ ಮೆಟ್ಟಲು ಸನಿಹವಾಗುವದು. 'ದೇವನು ಕಣ್ಣಿಗಿಂತಲೂ ನಿನಗೆ ಸಮೀಪವಾಗಿ-ದ್ದಾನೆ; ಉಸುರಿಗಿಂತಲೂ ಆತನು ನಿಕಟನಾಗಿದ್ದಾನೆ' ಎಂದು ಉಪನಿಷತ್ತು ಹೇಳುವದು. ಇಷ್ಟು ಹತ್ತಿರದಲ್ಲಿರುವ ದೇವನನ್ನು ಜೀವನು ಪ್ರವೃತ್ತಿಗಳ ಎಳೆ, ದಾಟ ತುಳಿದಾಟಗಳಲ್ಲಿ ಮರೆತುಬಿಟ್ಟಿದ್ದಾನೆ. ಅವನು ಕೆಳಗೆ ನೋಡುವುದನ್ನು ಬಿಟ್ಟು ಮೇಲೆ ನೋಡಹತ್ತಬೇಕು, ಅಧೋಮುಖಿಯಾಗದೆ ಊರ್ಧ್ವಮುಖಿ-ಯಾಗಬೇಕು. ಅಧಃಪ್ರವೃತ್ತಿಗಳ ಉರುಳಿನೊಳಗಿಂದ ಪಾರಾಗಿ ಸಂತತ ವಾಗಿ ಸರ್ವಾಂಗೀಣವಾಗಿ ಸಂಪೂರ್ಣವಾಗಿ ಪರಶಿವನ ಕುರಿತು ಪ್ರೀತಿ ಆಸಕ್ತಿ ಮಮತೆ ವಿಶ್ವಾಸಗಳನ್ನಿಟ್ಟುಕೊಂಡು ಮುಂನ್ನಡೆಯಿಡಬೇಕೆಂಬುದೇ ಭಕ್ತಿಪ್ರಧಾನ-ವಾದ ಶಿವಯೋಗದ ಆದ್ಯ ಸೂತ್ರವಾಗಿದೆ.

ಕೆಳಗೆ ಹರಿಯುವ ನೀರಿನ ಪ್ರವಾಹವನ್ನು ಹೈಡ್ರೋಲಿಕ್ ಪಂಪಿನ ಸಹಾಯದಿಂದ, ಟರ್ಬಾಯಿನ್ ಯಂತ್ರೋವಕರಣದ ನೆರವಿನಿಂದ ಮೇಲಕ್ಕೆತ್ತಿ ಅದರಿಂದ ವಿದ್ಯುತ್ತನ್ನೂ ತನ್ಮೂಲಕ ತೇಜಸ್ಸನ್ನೂ ಉಂಟುಮಾಡಿಕೊಳ್ಳುವಂತೆ ನಿರಂತರವಾದ ಪುರುಷ ಪ್ರಯತ್ನದಿಂದ ಮನಸ್ಸಿನ ಅಧೋಗಮನ ಪ್ರವೃತಿಯನ್ನು ತಡೆಹಿಡಿದು ಅದನ್ನು ಮೇಲುಮುಖಗೊಳಿಸಿ ಅದರಲ್ಲಿ ಓಜಸ್ಸನ್ನು ನಿರ್ಮಿಸ ಬಹುದಾಗಿದೆ. ಮಾನವನನ್ನು ಮೇಲೆ ಮೇಲಕ್ಕೆ ಒಯ್ಯಬಲ್ಲ ಯೋಗಿಕ ಶಕ್ತಿಯೇ ಓಜಸ್ಸು. ಶಿವಯೋಗದಲ್ಲಿ ಇದಕ್ಕೆ ಶಿವಶಕ್ತಿ ಎಂದು ಹೆಸರು. ಅನುಭವದ ಅಳವಡಿಕೆಯಲ್ಲಿ ಅಂಗನ ಭಕ್ತಿಯು ಮೇಲಕ್ಕೆ ಏರುತ್ತ ಏರುತ್ತ ಪರಶಿವನನ್ನು ಸೇರಲು ತವಕಿಸುವದು. ಪ್ರಭುಪ್ರಸಾದವು, ಶಿವಶಕ್ತಿಯು ಕೆಳಗೆ ಇಳಿಯುತ್ತ ಇಳಿಯುತ್ತ ಭಕ್ತನನ್ನು ತಕ್ಕೈಸಿ ಅವನ ಜೀವನವನ್ನು ಪಾವನಗೊಳಿಸಲು, ಅಂತೆಯೇ ಸವಿಗೊಳಿಸಲು ಹಾತೊರೆಯುವದು. ಶಿವಶಕ್ತಿಯು ಅಂಗನಲ್ಲಿ ಇಳಿದು ತುಂಬಾ ತುಂಬಿ ಕಾರ್ಯಕಾರಿಯಾಗಬೇಕಾದರೆ ಸತ್ಸಂಗವು ಅತ್ಯಗತ್ಯವಾಗಿರು ತ್ತದೆ. ಸತ್ಸಂಗವೆಂದರೆ ಶರಣರ ಅನುಭಾವ, ಸಂಗಸುಖ. ಶರಣರ ಅನುಭಾವ ಗೋಷ್ಠಿಯಲ್ಲಿ ಒಂದು ನಿಮಿಷ ಕಳೆಯುವದೂ ಸ್ವಪ್ರಯತ್ನದ ಸಾಧನೆಯಲ್ಲಿ ಹಲವಾರು ವರ್ಷಗಳನ್ನು ಕಳೆಯುವದೂ ಒಂದೆ ಆಗಿದೆ. ಕೆಳಗಿಳಿದು ಬರುವ

ಅನುಗ್ರಹ ಶಕ್ತಿಯು ಶರಣರ ಸಂಗದಲ್ಲಿ ಮೂರ್ತಿಮತ್ತಾಗಿ ಬಂದು ನಿಲ್ಲುತ್ತದೆ. ಸತ್ಸಂಗದಲ್ಲಿ ಕಾಲ ಕಳೆಯುವುದರಿಂದ ಆ ಶಿವಶಕ್ತಿಯನ್ನು ಅನವರತವಾಗಿ ಮೈಮನಗೂಡಿಸಿಕೊಳ್ಳಲೂ ಅನುಕೂಲ ಅವಕಾಶ ದೊರೆಯುತ್ತದೆ. ಆದರಿಂದ ಶಿವಯೋಗದಲ್ಲಿ ಶಿವಶಕ್ತಿಯನ್ನು ಇಳಿಸಿಕೊಳ್ಳುವಾಗ ಪುರುಷ ಪ್ರಯತ್ನ, ಪ್ರಭು ಕಾರುಣ್ಯ, ಶರಣರ ಸತ್ಸಂಗಗಳಿಗೆ ವಿಶಿಷ್ಟವಾದ ಸ್ಥಾನವನ್ನು ನೀಡಲಾಗಿದೆ.

ಶಿವಯೋಗವಾಚರಣೆಯಲ್ಲಿ ಭಕ್ತಿಕಾರಣವಾಗಿ ಮೂಡಿಕೊಳ್ಳುವ ಪರಿವರ್ತನೆಯನ್ನು ಹೀಗೆ ವಿವರಿಸಬಹುದು : ಜೀವನ ತನು ಮನ ಭಾವಗಳು ಸಾಧನೆಯ ಪೂರ್ವದ ಸ್ಥಿತಿಯಲ್ಲಿ ತುಕ್ಕುಹಿಡಿದ ಕಬ್ಬಿಣದ ಹಾಗೆ ಇರುತ್ತವೆ. ಪರುಷವು ಕಬ್ಬಿಣವನ್ನು ಮುಟ್ಟಿದೊಡನೆ ಆ ಕಬ್ಬಿಣವು ಅಪರಂಜಿಯಾಗಿ ಮಾರ್ಪಡುವದೆಂಬ ಒಂದು ಮಾತನ್ನು ಹೇಳುತ್ತಾರಷ್ಟೆ ! ಕಬ್ಬಿಣಕ್ಕೆ ತುಕ್ಕು ಹಿಡಿಯುವದು, ಅದಕ್ಕಾಗಿ ಅದು ಅವಲೋಹವೆನಿಸಿಕೆವಳ್ಳುವದು. ಆದರೆ ಬಂಗಾರವು ಜಂಗನ್ನು ಹಿಡಿಯುವದಿಲ್ಲ. ಆದ್ದರಿಂದ ಅದು ಉತ್ತಮ ಲೋಹವು. ಪ್ರಭುವಿನ ಕಾರುಣ್ಯ ಶಕ್ತಿಯ ಪ್ರಭಾವದಿಂದ ಜೀವನ ಗುಣಗಳು ಪರಿವರ್ತನೆಯನ್ನು ಹೊಂದಿ ಚಿನ್ನದಂತೆ ಶೋಭಾಯಮಾನವಾಗುವವು. ಪ್ರಭುವಿನ ಅನುಗ್ರಹ ಶಕ್ತಿಯಿಂದ ಪುನೀತವಾದ ತನು ಮನ ಭಾವಗಳೊಂದೊಡಗೂಡಿ ಇಹದ ಬಾಳುವೆಯಲ್ಲಿ ವ್ಯವಹರಿಸಿದರೂ ಬಾಧಕವಿಲ್ಲ. ಇಷ್ಟೇ ಅಲ್ಲ, ಇಂತಹ ವ್ಯವಹಾರದಿಂದ ಅನುಭವ ಸಂಪಾದನೆಗೆ ಹೆಚ್ಚಿನ ಮೆರಗು ಉಂಟಾಗಿ ಸಾಧಕನ ಬಾಳಬಟ್ಟೆ ಹಸನಾಗಿ ಬೆಳಗುವದು. ಶಿವಯೋಗದ ಸಾಧನೆಯಲ್ಲಿ ಭಕ್ತಿಯೇ ಶಕ್ತಿ, ಶಕ್ತಿಯೇ ಭಕ್ತಿ; ಭಕ್ತಿ ಶಕ್ತಿಗಳಲ್ಲಿ ಅಭ್ಯಂತರವಿಲ್ಲ. ಅನುಭವದ ಏರಪಾವಟಿಗೆಗಳಲ್ಲಿ ಪುರುಷ ಪ್ರಯತ್ನವೇ ಭಕ್ತಿಯಾಗಿ, ಪ್ರಭುಕಾರುಣ್ಯವೇ ಶಕ್ತಿಯಾಗಿ ಹೊರಹೊಮ್ಮುವವು. ಅನುಭವದ ಆತ್ಯಂತಿಕ ಅಳವಡಿಕೆಯ ಅವಸ್ಥೆಯಲ್ಲಿ ಪುರುಷ ಪ್ರಯತ್ನ ಪ್ರಭುಕಾರುಣ್ಯಗಳಲ್ಲಿ ವಿಂಗಡಿಕೆಯಳಿದು ಪುರುಷಪ್ರಯತ್ನವೇ ಪ್ರಭುಕಾರುಣ್ಯವೆನ್ನುವಷ್ಟು ಮಟ್ಟಿಗೆ ತಾದಾತ್ಮ್ಯವು ತಲೆದೋರುವದು. ಇಂತಹ ಅವಸ್ಥೆಯಲ್ಲಿ ಮುಕ್ತಿಯ ಲಾಭ ಲೋಭಕ್ಕೆ ಎಡೆಯೇ ಇಲ್ಲ. ಅಕ್ಕಮಹಾದೇವಿಯ ಅನುಭವದಲ್ಲಿ ನಿರೂಪಿತವಾಗಿರುವಂತೆ ಭಕ್ತಿಯ ಸಂಭಾಷಣೆಯಲ್ಲಿ ಮುಕ್ತಿಯ ಹಂಬಲವು ಹಿಂಗಿ ಹೋಗುವದು. ಕಾಯದಾಶೆ, ಜೀವದ ಜಂಜಡ, ಮಾಯೆಯ ಪಾಶ ಇವೆಲ್ಲ ಅಳಿದುಹೋಗುವವು. ಅಂತರಂಗದಲ್ಲಿ ಅರಿವು ಪರಿಪೂರ್ಣವಾಗಿ ಬಹಿರಂಗದಲ್ಲಿ ಭಕ್ತಿಸಂಪನ್ನವಾಗಿ ಇರುವ ಆ ಉನ್ನತ ನಿಲವಿನಲ್ಲಿ ಮುಕ್ತಿಯ ಫಲವು ಕಿಂಚಿತ್.

ಅಂತಹ ಬಯಕೆ-ಭೋಗಗಳನ್ನೆಲ್ಲ ಮೀರಿ ಪ್ರಭುವಿನ ಅನನ್ಯವಾದ ಚಿಂತನೆ-ಯಿಂದ ಜೀವನ ಸಾರ್ಥಕ್ಯವು ಒದಗುವದು :

ಭಕುತಿ ರತಿಯ ಸಂಭಾಷಣೆಯಿಂದವೆ
ಮುಕುತಿಯ ಮರೆದೆನು ಕಾಯದ ಭೇದವ
ಪ್ರಕೃತಿಯ ತೊರೆದನು ಸುತ್ತಿದ ಮಾಯಾಪಾಶವ ಹರಿದೆನಲಾ !
ಸುಕೃತಿಯಾಯ್ತು, ನಿಮ್ಮಯ ನೆನಹಿಂದವೆ
ಮುಕುತಿಯ ಫಲಗಳ ದಾಂಟಿಯೆ ಬಂದೆನು
ಶಕುತಿಯಾದೆನ್ನೈ ಪ್ರಾಣಲಿಂಗಕ್ಕೆ ಮಿಗೆ ಒಲಿದಾರತಿಯ ||

ಶಿವಯೋಗವು ವೀರಶೈವದ ಸಾಧನೆಯೂ ಅಹುದು, ಸಾಧ್ಯವೂ ಅಹುದು ಸಾಮರಸ್ಯದ ಸಾಕ್ಷಾತ್ಕಾರವನ್ನು ಪಡೆಯುವುದಕ್ಕೆ ಶಿವಯೋಗದ ಹೃದಯ-ದಂತಿಹ ಲಿಂಗಪೂಜೆಯು ಒಂದು ಪ್ರಭಾವಿಯಾದ ಸಾಧನವಾಗಿದೆ. ಭಕ್ತನು ಮುಂಜಾನವಲೆದ್ದು ಒಂದು ಸಲವಾದರೂ ಲಿಂಗಾರ್ಚನೆಯನ್ನು ಮಾಡ-ಬೇಕೆಂದು ವಿಧಿಸಲಾಗಿದೆ :

ಹೊತ್ತಾರೆ ಎದ್ದು ಅಗ್ಗವಣಿ ಪತ್ರಿಯ ತಂದು
    ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ.
ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು ?
ಹೊತ್ತು ಹೋಗದ ಮುನ್ನ, ಮೃತ್ಯುವೊಯ್ಯದ ಮುನ್ನ,
    ತೊತ್ತುಗೆಲಸವ ಮಾಡು ಕೂಡಲ ಸಂಗಮದೇವನ.

ಸುಪ್ರಭಾತ ಸಮಯದಲ್ಲಿ ಅರ್ತಿಯಲಿ ಲಿಂಗವ ನೆನೆದರೆ
    ತಪ್ಪುವವು ಅಪಮೃತ್ಯು ಕಾಲಕರ್ಮಂಗಳಯ್ಯ !
    ದೇವ ಪೂಜೆಯು ಮಾಟ: ದುರಿತ ಬಂಧನದೋಟ !

ಹೊತ್ತಾರೆ ಎದ್ದು ಶಿವಲಿಂಗದೇವನ
    ದೃಷ್ಟಿಯಾರೆ ನೋಡದವನ ಸಂಸಾರವೇನವನ ?
    ಬಾಳುವೆಣನ ಬೀಳುವೆಣನ ಸಂಸಾರವೇನವನ ?
    ನಡೆವೆಣನ ನುಡಿವೆಣನ ಸಂಸಾರವೇನವನ ?
ಕರ್ತೃ ಕೂಡಲ ಸಂಗಮದೇವಾ.
    ನಿಮ್ಮ ತೊತ್ತುಗೆಲಸವ ಮಾಡದವನ ಸಂಸಾರವೇನವನ ?

ಎಂಬ ಅಣ್ಣ ಭಕ್ತಿಭಾಂಡಾರಿ ಬಸವಣ್ಣನ ಅಮೃತವಾಣಿಯಲ್ಲಿ ಬೆಳಗಿನ ಲಿಂಗ-ಪೂಜೆಯ ಉನ್ನತಿಯು ಹೊರಹೊಮ್ಮಿದೆ. ಪ್ರಾತರ್ವಿಧಿ ಸ್ನಾನವಿಧಿ ಮುಂತಾದವುಗಳನ್ನು ತೀರಿಸಿ ಏಕಾಂತವಾದ ಸ್ಥಾನವೊಂದರಲ್ಲಿ ಸ್ವಸ್ಥ ಪದ್ಮಾಸನವನ್ನು ಇಲ್ಲವೆ ತನಗೆ ಅಭಿರುಚಿಯೆನಿಸುವ ಸುಖಾಸನವನ್ನು ಹಾಕಿಕೊಂಡು ಸಾಧಕನು ಲಿಂಗಪೂಜೆಗೆ ಪ್ರಾರಂಭಿಸುವನು. ವಿಧಾನಪೂರ್ವಕವಾಗಿ ಲಿಂಗಪೂಜೆಯನ್ನು ಪೂರೈಸಿ, ನಂಬುಗೆ ನಿಷ್ಠೆ ಗೌರವ ಭಾವನೆಯಿಂದ ವಂದನೆಗಳನ್ನು ಅರ್ಪಿಸಿ ಅವನು ಕಳೆಯಿಂದೊಡಗೂಡಿದ ಅಂಗೈಯ ಲಿಂಗದ ನಿರ್ನಿಮೇಷ ಧ್ಯಾನಕ್ಕೆ ತೊಡಗುವನು. ಮಂತ್ರವೇ ಲಿಂಗವೆನಿಸಿರುವದರಿಂದ ಗುರುದತ್ತವಾದ ಮಂತ್ರೋಚ್ಚಾರ, ನಿರ್ನಿಮೇಷ ಧ್ಯಾನ, ವಿಧಿಯುಕ್ತವಾದ ಪೂಜಾರತಿಯಿಂದಾಗಿ ಲಿಂಗಪೂಜೆಯು ನಾದ ಬಿಂದು ಕಲಾಯುಕ್ತವಾಗುವದು. ಈ ನಾದ ಬಿಂದು ಕಲಾಯುಕ್ತವಾದ ಲಿಂಗಪೂಜೆಯು ಶಿವಯೋಗದಲ್ಲಿ ಮಹತ್ವದ ಸ್ಥಾನವನ್ನು ಪಡೆದಿರುತ್ತದೆ.

'ಕಲ್ಲಿನಲ್ಲಿ ಕಳೆಯನ್ನಿಟ್ಟವನೇ ಗುರು' ಎಂಬ ಒಂದು ಅನುಭವದ ನುಡಿ ವೀರಶೈವರಲ್ಲಿ ಬಳಕೆಯಲ್ಲಿದೆ. ಇದರಿಂದ ಅರ್ಚನೆ ಧ್ಯಾನಗಳಿಗೆ ಕಳೆಯಿಂದ ಕೂಡಿದ ಇಷ್ಟಲಿಂಗವು ಯೋಗ್ಯವಾಗಿದೆ ಎಂಬ ಮಾತು ನಿಷ್ಪನ್ನವಾಗುತ್ತದೆ. ಲಿಂಗದ ಕವಚವಾಗಿ ಬಂದು ಮೆರುಗುವ ಲಿಂಗದ ಕಂತೆ (ಕಾಂತಿ)ಯು ಆ ಕಳೆಗೆ ಇನ್ನೂ ಹೆಚ್ಚಿನ ಶೋಭೆಯನ್ನೂ ಮಹತ್ವವನ್ನೂ ನೀಡುತ್ತದೆ. ಧ್ಯಾನದ ಸಮಯದಲ್ಲಿ ಕಣ್ಣಿನ ಕರಿಯ ಗುಡ್ಡೆಗಳ ಮುಖಾಂತರವಾಗಿ ಹೊರಹೊಮ್ಮುವ ಕಿರಣಗಳನ್ನು ಆಕರ್ಷಿಸಲು ಮತ್ತು ಆಧ್ಯಾತ್ಮ ತೇಜಸ್ಸನ್ನು ಬೆಳಗಿಸಲು ಲಿಂಗದ ಕರಿಯ ಕಂತೆಯು ಸಹಾಯಕವಾಗುತ್ತದೆ. ಸಮ-ವಿಷಮಗಳ ಆಕರ್ಷಣವು ಭೌತ ಶಾಸ್ತ್ರದ ಸಿದ್ಧಾಂತವಾದರೆ ಸಮವು ಸಮವನ್ನು ಆಕರ್ಷಿಸುವದು ಮನಃ ಶಾಸ್ತ್ರದ ಸಿದ್ಧಾಂತವಾಗಿರುತ್ತದೆ, ಆಧ್ಯಾತ್ಮ ಅನುಭವ ಶಾಸ್ತ್ರಗಳ ಸೊಬಗಿನ ತತ್ವವೂ ಆಗಿರುತ್ತದೆ. ಕಪ್ಪು ಎಲ್ಲ ಬಣ್ಣಗಳನ್ನೂ ಇಂಗಿಸಿಕೊಳ್ಳುವ ಬಣ್ಣ. ಕಣ್ಣು ಕರದಿಷ್ಟವನ್ನು ಏಕಾಗ್ರತೆಯಿಂದ ನಿರೀಕ್ಷಿಸುವಾಗ ಕಣ್ಣಿನ ಗುಡ್ಡೆಗಳ ಮುಖಾಂತರ ಹೊರಬರುವ ಪ್ರಕಾಶ ಕಿರಣಗಳು ಬಣ್ಣದ ಸಾಧರ್ಮ್ಯದಿಂದ ಇಷ್ಟದ ಕಪ್ಪು ಬಣ್ಣದ ಮೇಲೆ ಕೇಂದ್ರೀಕೃತವಾಗಿ ಅವು ವ್ಯರ್ಥ ವ್ಯಯವಾಗದೆ ಒಬ್ಬುಳಿಗೊಳ್ಳುವವು. ಪ್ರಕಾಶದ ಅಲೆಗಳು ಉದ್ದವಾಗುತ್ತ ಹೋದಂತೆ ಅವುಗಳ ಶಕ್ತಿಯು ಕುಂದುವದು; ಅವು ಕ್ರಮಿಸುವ ಅಂತರವು ಕಡಿಮೆಯಾದಷ್ಟು ಪ್ರಕಾಶವು ಪ್ರಖರವಾಗುವದು. ಅದಕ್ಕಾಗಿ ಕರದಿಷ್ಟವನ್ನು ಕಣ್ಣಿನಿಂದ ಹನ್ನೆರಡು ಅಂಗುಲ

ಪ್ರಮಾಣದ ಅಂತರದಿಂದ ಭ್ರೂಮಧ್ಯಕ್ಕೆ ನೇರವಾಗಿ ಬರುವಂತೆ ಹಿಡಿದು ನಿರೀಕ್ಷಿಸುವುದುಂಟು, ಧ್ಯಾನಿಸುವುದುಂಟು. ಹೀಗೆ ನಿರುಕಿಸಿ ಧ್ಯಾನಿಸುವ ಕಾಲಕ್ಕೆ ಕರದಿಷ್ಟಸಹಿತವಾಗಿ ಮುಖಕ್ಕೆ ಮುಸುಕನ್ನೂ ಹಾಕಿಕೊಳ್ಳುವದುಂಟು. ಅನಿಮಿಷ ದೃಷ್ಟಿಯ ನೋಟದಿಂದ ಕಣ್ಣಿನ ಗುಡ್ಡಿಗಳ ಕಪ್ಪು ಬಣ್ಣ ಕರಸ್ಥಲದ ಕರಿಯ ಕಾಂತಿ ಎರಡೂ ಸಮರಸವಾಗಿ ಅದರಿಂದ ಉಸಿರಿನ ಎಡೆಯಾಟವೂ ತನ್ಮೂಲಕ ಮನದ ಸಂಚಲನವೂ ಸ್ಥಿರವಾಗುವವು.

ಪ್ರಭುಲಿಂಗಲೀಲೆಯ ಸಾಧಕಾಂಗದ ಗತಿಯಲ್ಲಿ ಶಿವಯೋಗ ಸಾಧನೆಯ ಬಗೆಗೆ ಬಹು ಅಮೌಲ್ಯವಾದ ಮಾತುಗಳು ಬಂದಿರುತ್ತವೆ:

ಆಲಿ ನಿಂದೊಡೆ ಸುಳಿದು ಸೂಸುವ
ಗಾಳಿ ನಿಲುವುದು, ಗಾಳಿ ನಿಲೆ ಮನ
ಮೇಲೆ ನಿಲುವುದು, ಮನವು ನಿಂದೊಡೆ ಬಿಂದು ನಿಂದಿಹುದು ।
ಲೀಲೆಯಿಂದಾ ಬಿಂದು ನಿಂದೊಡೆ
ಕಾಲ ಕರ್ಮವ ಗೆದ್ದು ಮಾಯೆಯ
ಹೇಳ ಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ ॥

ಎಂದು ಚಾಮರಸನು ಅನುಭವಾತ್ಮಕವಾಗಿ ತಿಳಿಸಿರುವ ಮಾತುಗಳು ಶಿವಯೋಗದ ಸಕೀಲವನ್ನೇ ತೆರೆದಿಟ್ಟಿರುತ್ತವೆ. ದೃಷ್ಟಿಯು ಸ್ಥಿರೀಕರಣ ಹೊಂದುತ್ತ ನಡೆದಂತೆ ಶ್ವಾಸಗತಿಯು ತಾಲಬದ್ಧವಾಗುವದು. ಶ್ವಾಸಗತಿಗೆ ಅನುಗುಣವಾಗಿ ಮಂತ್ರೋಚ್ಚಾರವೂ ಆಗಬೇಕು. ಶ್ವಾಸದ ಆರೋಹಣ ಅವರೋಹಣ ಕ್ರಮ ದಲ್ಲಿ ಮಂತ್ರವನ್ನಿರಿಸಿದರೆ ಮನವು ಸ್ಥಿರವೂ ಪ್ರಶಾಂತವೂ ಆಗುವದು. ಜ್ಞಾನೋದಯವದು. ಪ್ರಶಾಂತವಾದ ಇಂತಹ ಊರ್ಧ್ವಮನದಲ್ಲಿಯೇ, ಇಂತಹ ಉನ್ಮನದಲ್ಲಿಯೇ ! ವ್ಯವಹಾರಗಳು (ಸಕೃದ್ದರ್ಶನಕ್ಕೆ) ಅಲ್ಲೋಲ ಕಲ್ಲೋಲವಾಗಿ ತೋರುತ್ತಿವೆ ಎಂದೆನಿಸಿದರೂ ಅವು ತುಂಬಾ ತಾಲ-ಲಯ ಬದ್ಧವಾಗಿರುತ್ತವೆ. ನೀರು ಗಾಳಿ ಬೆಳಕು ಮುಂತಾದ ಪ್ರತಿಯೊಂದು ತೋರಿಕೆಯಲ್ಲಿಯೂ ಈ ತಾಲಬದ್ಧತೆ, ಈ ಲಯಬದ್ಧತೆ ಒಡೆದು ಕಾಣುತ್ತಿದೆ. ತಾಲ-ಲಯ ತಪ್ಪಿದ ಸ್ಥಿತಿಯು ಕಂಡುಬರುವದು ಮಾನವನ ಪ್ರಕೃತಿಯಲ್ಲಿ, ಅವನ ಅಂತಃಕರಣಗಳಲ್ಲಿ. ಅವನಲ್ಲಿ ಶ್ವಾಸಗತಿಯು ಕ್ರಮವಾಗಿ ಇಲ್ಲದುದೇ ಇದಕ್ಕೆ ಕಾರಣವಾಗಿದೆ. ಅವನ ಶ್ವಾಸಗತಿಯು ತಾಲ ಲಯ ಬದ್ಧವಾಗುತ್ತ ನಾಗಿದಂತೆ ಅವನ

ಅಂತರಂಗ ಬಹಿರಂಗವೆಲ್ಲ ಪರಿಶುದ್ಧವಾಗಿ ಸುತ್ತೆಲ್ಲ ಅರಿವಿನ ಪ್ರಭೆಯೇ ಬೆಳಗ-ತೊಡಗುವದು, ಪರಿಮಳವು ಹೊರಸೂಸಿ ಸುತ್ತೆಲ್ಲ ಸದ್ವಾಸನೆಯೇ ಬೀರತೊಡಗುವದು. ಇಂತಹ ಅವಸ್ಥೆಯಲ್ಲಿ ಪ್ರಕೃತಿಧರ್ಮಕ್ಕೆ ಸಹಜವಾದ ರೋಗ ರುಜಿನಗಳು ಹುಟ್ಟಿಕೊಳ್ಳದೆ ಮಾನವನು ಸವೃಢಕಾಯನಾಗಿ ಹಲವಾರು ವರ್ಷಗಳ ವರೆಗೆ ತುಂಬು ಜೀವನದ ಬಾಳನ್ನು ಬಾಳಬಲ್ಲನು.

ಜ್ಞಾನೇಂದ್ರಿಯಗಳಲ್ಲಿ ಕಣ್ಣಿನ ಧರ್ಮವೂ ಕರ್ಮೇಂದ್ರಿಯಗಳಲ್ಲಿ ಕಾಲಿನ ಧರ್ಮವೂ ಒಂದೇ ಆಗಿರುತ್ತವೆ. ಕಣ್ಣು ನೋಡುತ್ತದೆ, ಕಾಲು ಓಡುತ್ತದೆ. ಎರಡರಲ್ಲಿಯೂ ಓಟವೇ ಮೂಲ ಧರ್ಮವಾಗಿರುವದು. ನೇತ್ರದ ಓಟವು ಪಾದದ ಓಟಕ್ಕಿಂತ ಮಿಗಿಲಾದದ್ದು, ತೀವ್ರತರವಾದದ್ದು ಇರುತ್ತವೆ. ಮನಸ್ಸಿನ ಮೇಲೆ ಈ ಓಟದ ಪ್ರತಿಕ್ರಿಯೆಯು ಬಹಳ ಪ್ರಬಲವಾಗಿ ಮೂಡಿಕೊಳ್ಳುವದು. ಅದಕ್ಕಾಗಿ ಮೊದಲು ಈ ಕಣ್ಣಿನ ಈ ನೋಟದ ಈ ದೃಷ್ಟಿಯ ಶುದ್ಧಿಯನ್ನು ಪಡೆದುಕೊಳ್ಳಬೇಕು. ದೃಷ್ಟಿಯ ಶುದ್ಧಿಯಿಂದ ಮನಃಶುದ್ಧಿಯೂ ಪ್ರಾಣಶುದ್ಧಿಯೂ ಸಹಜವಾಗಿ ಸಿದ್ಧಿಸುವವು. ಶಿವಯೋಗದ ಪರಿಧಿಯಲ್ಲಿ ಶುದ್ಧದೃಷ್ಟಿಸಾಧನದ ಮೂಲಕ ತನುಶುದ್ಧಿಗೆ ಮಹತ್ವವನ್ನು ಕೊಡಲಾಗಿದೆಯಾದರೂ ಅದೇ ಕಾಲಕ್ಕೆ ಪ್ರಾಣಶುದ್ಧಿ ಭಾವಶುದ್ಧಿಗಳ ವಿಷಯದಲ್ಲಿಯೂ ತುಂಬಾ ಲಕ್ಷವನ್ನೀಯಲಾಗಿದೆ. ಸ್ವರೂಪ ವಿಸ್ಮೃತಿಯೊಡನೆ ಅಂಟಿಕೊಂಡಿದ್ದ ಮಲಾವರಣಕ್ಕೆ, ಆಣವ–ಮಾಯಾ–ಕರ್ಮವೆಂಬ ಮಲತ್ರಯದ ಮುಸುಕಿಗೆ ಪರಿಹಾರವನ್ನು ಕಾಣಬೇಕಾದರೆ ಮಾನವನಲ್ಲಿ ಸತ್ಕ್ರಿಯೆಯೂ ಸುಮನವೂ ಸದ್ಭಾವವೂ ಅಂಕುರಗೊಂಡು ಅವನ ಬಾಳುವೆಯಲ್ಲಿ ಅವು ಆಳವಾಗಿ ಇಳಿದು ಹಾಸು-ಹೊಕ್ಕಾಗಬೇಕು. ವೀರಶೈವ ಪರಿಭಾಷೆಯಲ್ಲಿ ತಿಳಿಸುವುದಾದರೆ ಇಷ್ಟ–ಪ್ರಾಣ–ಭಾವಲಿಂಗಗಳ ಅನುಸಂಧಾನದಿಂದ ಮಲವನ್ನು ಪರಿಹರಿಸಿಕೊಂಡು ಮಾನವನು ನಿರ್ಮಲ ತನುವನ್ನು ಅಥವಾ ಪ್ರಸಾದ ಕಾಯವನ್ನು ಪಡೆಯಬೇಕು. ಇಂತಾದಾಗ ಮಾನವನು ಮಾನವತ್ವವನ್ನು ಅಳಿದುಕೊಂಡು ದೇವತ್ವದೆಡೆಗೆ ಸಾಗುತ್ತಿರುವನೆನ್ನಬೇಕು. ಅವನು ಜನನ ಜರೆ ಮರಣಗಳನ್ನು ಮೀರಿ ಅಮೃತತ್ವನ್ನೈದಹತ್ತಿದವನೆನ್ನಬೇಕು. (ಅಮೃತತ್ವಾಯ ಕಲ್ಪತೆ). ಮೈಲಾರ ಬಸವಲಿಂಗ ಶಿವಯೋಗಿಯು ಈ ವಿಷಯದಲ್ಲಿ ಹಾಡಿಕೊಂಡಿರುವ ಸ್ವರ ವಚನವನ್ನಿಲ್ಲಿ ಗಮನಿಸಬೇಕು:

ತೂಗಿರೆ ಶರಣ ಸತಿಯರು ಶಿವ- |
ಯೋಗ ಸಂಪದೊಳು ಬಿಡದೆ ಲಿಂಗವನು || ಪಲ್ಲವಿ ||

ಗುರುವರ ಹಸ್ತಾಬ್ಜ ಮಧ್ಯದೊಳೊಪ್ಪುವ
ನಿರುಪಮ ಸತ್ಕ್ರಿಯ ಲಿಂಗ ಗುರುಮೂರ್ತಿ |
ಪರಮ ಸತ್ಕ್ರಿಯಸ್ಥಾನ ಭರಿತ ಶರಣರಿಗೆ
ವರವೀವ ಪರತರ ಇಷ್ಟಲಿಂಗವನು || ೧ ||

ಪರಮಮನ್ಮೈಕ ಕರಾಬ್ಜಾಂತರದೊಳು
ಮೆರೆವ ಶ್ರೀ ಶಿವಲಿಂಗ ಚರಲಿಂಗ ಸಂಗ |
ಪರಿಪೂರ್ಣ ನಡೆನುಡಿ ಸಮರಸ ಭಕ್ತರ
ಪೊರೆವ ದಯಾಪಾಂಗ ಪ್ರಾಣಲಿಂಗವನು || ೨ ||

ನಿರುತ ಸದ್ಭಾವ ಪಾಣಿಪೀಠದೊಳಿಹ
ಚರ ಶೇಷಲಿಂಗ ಚಿನ್ಮಯಲಿಂಗ ಮೂರ್ತಿ |
ನಿರಘ ನಿರಂಜನ ನಿರವಯ ನಿತ್ಯ ಶ್ರೀ-
ಗುರು ಚೆನ್ನವೀರ ಮದ್‌ಭಾವಲಿಂಗವನು || ೩ ||

ಶಿವಯೋಗ ಸಾಧನೆಯ ಪ್ರಾರಂಭದಲ್ಲಿ ದೃಷ್ಟಿಯ ನೋಟವು ಸ್ಥಿರಗೊಂಡು ಬೆಳೆಯಲೋಸುಗ ಮತ್ತು ವಿದ್ಯುತ್‌ಪ್ರಭೆ ಪಸರಿಸಲೋಸುಗ ಅಂಗೈಯ ಲಿಂಗದ ಕಾಂತಿಯ ಮೇಲೆ ಪ್ರಕಾಶದ ಪ್ರತಿಬಿಂಬವು ಬೀಳುವಂತೆ ಶಿರದ ಹಿಂಭಾಗದಲ್ಲಿ ಮೇಲಿನ ಮಗ್ಗಲು ಆಕಳ ಅದರಲ್ಲಿಯೂ ವಿಶೇಷವಾಗಿ ಕರಿಯ ಬಣ್ಣದ ಆಕಳ ತುಪ್ಪದ ದೀವಿಗೆಯನ್ನಿರಿಸಿ ಸಾಧನೆಯಿಂದ ಆ ಪ್ರಕಾಶದ ಪ್ರತಿಬಿಂಬವನ್ನು ನಿರೀಕ್ಷಿಸುವ ಕ್ರಮವೊಂದುಂಟು. ನಿರೀಕ್ಷಣೆ ಧ್ಯಾನಗಳ ಕಾಲಕ್ಕೆ ದೇಹವೂ ಮನವೂ ಬಿಗುವು ಭಾರಗಳಿಗೆ ಒಳಗಾಗಕೂಡದು. ಭಾರ(Tension) ಇಲ್ಲದಿದ್ದರೆ ಅವಧಾನವು (Attention) ಹತ್ತುವದು. ಈ ಕಾಲಕ್ಕೆ ಕಣ್ಣು ತುಂಬಾ ತೆರೆದರೂ ಭಾರವೆನಿಸುವದು, ತುಂಬಾ ಮುಚ್ಚಿದರೂ ಭಾರವೆನಿಸುವದು. ಆದ್ದರಿಂದ ಅರೆತೆರೆದ ದೃಷ್ಟಿಯಿಂದ, ಅನಿಮಿಷ ದೃಷ್ಟಿಯಿಂದ ಲಿಂಗ ನಿರೀಕ್ಷಣೆಯನ್ನು ಮಾಡುವ ವಿಧಾನವುಂಟು. ಇಂತಹ ನಿರೀಕ್ಷಣೆಯಿಂದ ಶಿವಶರಣರ ವಚನಗಳಲ್ಲಿ ತಿಳಿಸಿರುವಂತೆ ಕುರುಹುವಿಡಿದು ಕುರುಹುಗೆಡುವ ಸ್ಥಿತಿಯೊಂದು ಒದಗುವದು. ನೇತ್ರಪ್ರಕಾಶದ ಸೂತ್ರವಿಡಿದು ಜ್ಞಾನ ಸೂತ್ರವಾಗುತ್ತ ಸಾಗಿದಂತೆ ಅಕ್ಷಿ

ಪುರುಷನ ದರ್ಶನವಾಗುವದು; ಅಂಗುಷ್ಠ ಮಾತ್ರದ ತುಂಗ ದೀಪ ಜ್ವಾಲೆಯು ಥಳಥಳಿಸುವದು; ಅರ್ಥಾತ್ ಅಂಗುಷ್ಠಪುರುಷನ, ಆತ್ಮನ ಸಾಕ್ಷಾತ್ಕಾರವಾಗುವದು. ಈ ಸಾಕ್ಷಾತ್ಕಾರ ಕ್ರಮದಲ್ಲಿ ಬಗೆಬಗೆಯ ನಾದಗಳು ಕೇಳಿಬರುವವು. ಬಗೆಬಗೆಯ ಪ್ರಕಾಶವು ಕಂಡುಬರುವುದು; ತೇಜೋಬಿಂದು ಸಾಕ್ಷಾತ್ಕಾರವಾಗಿ ಆನಂದ ಕಳೆಯು ಅಮಿತವಾಗಿ ಹೊರಹೊಮ್ಮುವದು. ಆಗ ದೂರದರ್ಶನ ದೂರ ಶ್ರವಣಗಳು ಸಿದ್ಧಿಸುವವಲ್ಲದೆ, ಅನ್ಯರ ವಿಚಾರಗಳನ್ನು ಅರಿತು ಆಕಲನ-ಗೊಳ್ಳುವ ಮತ್ತು ಅನ್ಯರಲ್ಲಿ ತನ್ನ ವಿಚಾರಗಳನ್ನು ಪ್ರೇರೇಪಿಸುವ ಸಾಮರ್ಥ್ಯವನ್ನೂ ಸಾಧಕನು ಪಡೆದುಕೊಳ್ಳುವನು. ಆಗೊಮ್ಮೆ ಈಗೊಮ್ಮೆ ತೋರುವ ಅಲೌಕಿಕವಾದ ನಾದ ಬಿಂದು ಕಳಾನಂದವು ಅಪಾರವಾದ ಅಖಂಡವಾದ ಆನಂದಾನುಭೂತಿಯಲ್ಲಿ ವ್ಯಕ್ತವಾಗುವದು :

ಸಾಕು ಸಾಕಿನ್ನಿದಕೆ ಬೇರೊಂದು ಸುಖಮುಂಟೆ
ನೇಕರಿಸಬಾರದಾತ್ಮಾನುಭವ ರತಿಯೋ || ಪಲ್ಲವಿ ||

ಹೊರಗಿಂದ್ರಿಯಗಳ ಚೇಷ್ಟೆಯನುಪೇಕ್ಷಿಸಿ ಹೃದಯ-
ಸರಸಿಜದ ದಳಗತಿಯನುಳಿದು ಕಾಲದೊಳು ||
ಮೊರೆವ ಝೇಂಕೃತಿಯ ದಶ **ನಾದ**ಗಳೆಂದೆಂಬ
ಶರಧಿಯೊಳು ಮುಳುಗಿ ಮೈ ಮರೆದ ಪರಿಣಾಮವೇ || ೧ ||

ಅರೆಮುಗಿದ ಕಣ್ಗಳೆರಡರ ತಾರೆಗಳ ನಡುವೆ
ತರಣಿ ಶಶಿ ಶಿಖಿ ಬಿಂಬದಲ್ಪ ರಂಧ್ರದೊಳೆ ||
ಪೊರಪೊಣ್ಮಿ ಕೋಟಿ ಮಿಂಚುಗಳಂತೆ ಝಗಝಗಿಸಿ
ಮೆರೆವ **ಬಿಂದು** ಪ್ರಭೆಯ ನೋಳ್ಪ ಸಂತಸವೇ || ೨ ||

ತನುವಿನೊಳಹೊರಗಿಂತು ತೋರ್ಪ ತನ್ನನೆ ಕಾಣ್ಬ
ಮನಕೆ ಚೇತನವಾಗಿ ಜಗವನೊಳಕೈದು ||
ಇನಿತು ವಿಷಯಗಳ ಬೇರಿಟ್ಟರಿವ ಗುರುಸಿದ್ಧ-
ನೆನಿಪ **ಕಳೆ**ಯಾನೆಂಬ ಪರಿಪೂರ್ಣಾನುಭವವೇ || ೩ ||

ಲಿಂಗಪೂಜೆಯು ನಾದ ಬಿಂದು ಕಲಾತ್ಮಕವಾಗಿ ಸಾಗಬೇಕು ಎಂದು ಹೇಳುವಂತೆ ಅದು ಷಟ್ಸ್ಥಲಾತ್ಮಕವಾಗಿಯೂ ಇರಬೇಕೆಂದು ಶಿವಯೋಗದ

ಆಚರಣೆಯು ಹೇಳುತ್ತದೆ. ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಇವೇ ಆ ಆರು ಸ್ಥಲಗಳು. ಷಟ್ಸ್ಥಲದ ಆಚರಣೆಯು ಬಹಿರಂಗದ ಜ್ಞಾನ-ಕರ್ಮೇಂದ್ರಿಯಗಳು ಹಾಗು ಅಂತರಿಂದ್ರಿಯಗಳಾದ ಅಂತಃಕರಣಗಳು ಪರಿಶುದ್ಧವಾಗಬೇಕೆಂದು ಉದ್ದೇಶಿಸುತ್ತದೆ. ಅಂತರ್‌ಬಾಹ್ಯ ಇಂದ್ರಿಯಗಳಿಗೆ ಆವರಿಸಿದ ತಮಸ್ಸು ಅಳಿದು ತೇಜಸ್ಸು ಬೆಳಗಬೇಕೆಂಬುದೇ ಷಟ್ಸ್ಥಲ ಸಾಧಕನ ಗುರಿಯಾಗಿರುತ್ತದೆ. ಶಿವಯೋಗವು ಷಟ್ಸ್ಥಲದ ಹೃದಯವಾಗಿದೆ. ಆದ್ದರಿಂದ ಅನುಭಾವಿಗಳು ಶಿವಯೋಗದಲ್ಲಿ ಷಟ್ಸ್ಥಲದ ಆಚರಣೆಯನ್ನು ಯೋಜಿಸಿಕೊಂಡಿದ್ದಾರೆ. ನಾಸಿಕ ರಸನೆ ನೇತ್ರ ಕರ್ಣ ತ್ವಚ ಎಂಬೀ ಪಂಚ ಜ್ಞಾನೇಂದ್ರಿಯಗಳು ಮತ್ತು ಇವಕ್ಕೆಲ್ಲ ಅಧಿಷ್ಠಾತೃವೆನಿಸಿದ ಭ್ರೂಮಧ್ಯ, ಹಾಗೆಯೇ ಗುದ ಗುಹ್ಯ ಪಾದ ಹಸ್ತ ಮುಖ ಎಂಬೀ ಪಂಚ ಕರ್ಮೇಂದ್ರಿಯಗಳು ಮತ್ತು ಇವಕ್ಕೆಲ್ಲ ಅಧಿಷ್ಠಾತೃವೆನಿಸಿದ ಆಧಾರಸ್ಥಾನ, ಇದರಂತೆಯೇ ಚಿತ್ತ ಬುದ್ಧಿ ಮನ ಅಹಂಕಾರ ಜ್ಞಾನ ಎಂಬೀ ಅಂತಃಕರಣ ಪಂಚಕ ಮತ್ತು ಇವಕ್ಕೆಲ್ಲ ಅಧಿಷ್ಠಾತೃವೆನಿಸಿದ ಭಾವ—ಈ ಎಲ್ಲ ಸ್ಥಾನಗಳಲ್ಲಿ ವ್ಯಾಪಿಸಿದ ಕಾವಳವಡಗಲು ಸಾಧಕನು ಆಯಾ ಸ್ಥಾನದಲ್ಲಿ ಅರಿವನ್ನು ಸ್ಥಾಪ್ಯಗೊಳಿಸಿಕೊಳ್ಳುವನು; ಅರ್ಥಾತ್ ಇಂದ್ರಿಯ ವ್ಯವಹಾರದಲ್ಲೆಲ್ಲ ತುಂಬಾ ಅರಿವನ್ನು ಬೆರಸಿ ಸಾಗುವನು. ವೀರಶೈವದ ಪರಿವಿಡಿಯಲ್ಲಿ ತಿಳಿಸುವುದಾದರೆ ಅಲ್ಲೆಲ್ಲ ಲಿಂಗಭಾವವನ್ನೇ ವ್ಯಕ್ತಗೊಳಿಸುವನು. ಆಚಾರಲಿಂಗ ಗುರುಲಿಂಗ ಶಿವಲಿಂಗ ಪ್ರಸಾದಲಿಂಗ ಜಂಗಮಲಿಂಗ ಮಹಾಲಿಂಗ ಎಂಬ ಷಡ್ಲಿಂಗಗಳನ್ನು ಆಯಾಸ್ಥಾನಗಳಲ್ಲಿ ಕ್ರಮವಾಗಿ ಗುರುತಿಸಿ ನಿಲಿಸಿ, ಅಂದರೆ ಅರಿವಿನ ವಿಕಾಸಕ್ರಮದಲ್ಲಿಯ ಉತ್ತರೋತ್ತರ ಅಧಿಕತರವಾದ ಅವಸ್ಥೆಯಲ್ಲಿ ನಿಂದು ಸಾಧನೆಯನ್ನು ಮಾಡುವನು ಶಿವಯೋಗಿಯು. ಮಾನವನ ಇಂದ್ರಿಯಗಳಲ್ಲಿ ಒಂದೊಂದು ಶಕ್ತಿಯ ಕೇಂದ್ರವೇ ಆಗಿದೆ. ಆದರೆ ಈ ಶಕ್ತಿಯು ಸ್ಫುರದ್ರೂಪಿಯಲ್ಲ, ಜಡವಾದುದು. ಅಲ್ಲಿ ಆವರಿಸಿದ ತಮಂಧದಿಂದಾಗಿ ಅದು ಅಂಧವಾಗಿದೆ. ಈ ಕಂಗಳತನವನ್ನು ಅಳಿದುಕೊಳ್ಳುವದಕ್ಕಾಗಿ ಅನುಸಂಧಾನದ ಅವಶ್ಯಕತೆಯಿದೆ. ಆಯಾ ಸ್ಥಾನದಲ್ಲಿಯ ಕುರುಡು ಶಕ್ತಿಯನ್ನು ಅರಿವಿನ ಪ್ರಕಾಶದಿಂದ, ಆಯಾ ಲಿಂಗದ ನೆನಹಿನ ಸಾಮರ್ಥ್ಯದಿಂದ, ವ್ಯಕ್ತ-ವಾಗುವ ಭಕ್ತಿಯ ಬಲದಿಂದ ಸ್ಫುರದ್ರೂಪಗೊಳಿಸುವನು ಶಿವಯೋಗಿಯು. ಮೇಲೆ ಕೊಟ್ಟ ಮೈಲಾರ ಬಸವಲಿಂಗ ಶಿವಯೋಗಿಯ ಸ್ವರವಚನದಲ್ಲಿ ಈ ಪರಿವರ್ತನೆಯ ಗೌಪ್ಯವಡಗಿರುವುದನ್ನೂ ಗಮನಿಸಬಹುದು, ಮನಗಾಣಬಹುದು.

ವೀರಶೈವ ಶಿವಯೋಗಿಗಳ ಯೋಗದೃಷ್ಟಿಗೆ ಸಹಸ್ರಾರದಿಂದಾಚೆಗೆ ಇನ್ನೆರಡು ಚಕ್ರಗಳಿರುವುದು ಕಂಡು ಬಂದಿದೆಯಷ್ಟೆ! ಭ್ರೂಮಧ್ಯದ ಆಜ್ಞಾಚಕ್ರದ ಆಚೆಗಿನ ಸಹಸ್ರಾರ, ಶಿಖಾ ಹಾಗು ಪಶ್ಚಿಮಚಕ್ರಗಳಲ್ಲಿ ನಿಂತಾಗ ಅವರು ಕಂಡ ಅನುಭವಕ್ಕೆ ಬಹಳ ಮಹತ್ವವನ್ನು ಕೊಟ್ಟಿರುವರೆಂಬುದು ಅವರ ಅನುಭವದ ವಚನಗಳಿಂದ ತಿಳಿದುಬರುತ್ತದೆ. ಅರಿವಿನ ಆಳದಲ್ಲಿ ಹೆಚ್ಚುಹೆಚ್ಚಾಗಿ ಮುಳುಗುತ್ತ ಅವರು ಈ ಶಕ್ತಿಯ ಕೇಂದ್ರಗಳಲ್ಲಿ ನಿಂತು ಪಡೆದುಕೊಂಡ ಅನುಭವದಲ್ಲಿಯೂ ಲಿಂಗಭಾವನೆಯೇ ತುಂಬಾ ವ್ಯಾಪಿಸಿರುತ್ತದೆ. ಅಲ್ಲಿ ಅವರು ಕ್ರಮವಾಗಿ ನಿಷ್ಕಲಲಿಂಗ, ನಿಃಶ್ಯೂನ್ಯಲಿಂಗ ನಿರಂಜನಲಿಂಗಗಳನ್ನು ಗುರುತಿಸಿ ಸ್ವಾಧ್ಯವ ಮಾಡಿ ಪಡೆದುಕೊಂಡ ಅನುಭವವು ಷಟ್ಸ್ಥಲದ ಅನುಭವದ ಆಚೆಗಿನ ನಿರವಯ ಸ್ಥಲದ ಅನುಭವವನ್ನು ವ್ಯಕ್ತಗೊಳಿಸುತ್ತದೆ. ಷಟ್ಸ್ಥಲದ ಯೋಜನೆಯಲ್ಲಿ ಐಕ್ಯಸ್ಥಲದ ವರೆಗಿನ ಅನುಭವದಲ್ಲಿಯೂ ಲಿಂಗ–ಅಂಗ, ದೇವ–ಭಕ್ತ, ಶಿವ–ಜೀವ, ನಾನು–ನೀನು ಎಂಬ ಭಾವನೆಗೆ ಅವಕಾಶವುಂಟು; ಯಾಕಂದರೆ ಆರುಸ್ಥಲದ ಅನುಭವವು ಭಕ್ತಿಯ ಸೆರಗಿನಿಂದಲೇ ಸಾಗುತ್ತಿದೆ. ಐಕ್ಯಸ್ಥಲದಲ್ಲಿಯೂ ಸಮರಸವೆಂಬ ಭಕ್ತಿಯನ್ನು ಹೇಳಿದ್ದಾರೆ ಶಿವಶರಣರು. ಐಕ್ಯಸ್ಥಲದ ಆಚೆಗಿನ ನಿರವಯ ಸ್ಥಲದ ನಿಲವಿನಲ್ಲಿ ನಾನು ತಾನೆಂಬುದಕೆ ತೆರಹೇ ಇರುವದಿಲ್ಲ. ಅಲ್ಲಿರುವದು ಕೇವಲ ತಾನೇ ತಾನು. ಭಕ್ತಿ ಜ್ಞಾನ ವೈರಾಗ್ಯಗಳಲ್ಲಿ ಷಟ್ಸ್ಥಲದ ಅನುಭವದಲ್ಲಿ ವೈರಾಗ್ಯದೊಡಸಿಹ ಭಕ್ತಿಯ ವೈಭವವನ್ನು ಕಾಣುವುದಾದರೆ ನಿರವಯಸ್ಥಲದ ಅನುಭವದಲ್ಲಿ ವೈರಾಗ್ಯದಿಂದ ಒಡಮೆರೆದ ಜ್ಞಾನದ, ಸುಜ್ಞಾನದ, ಸಮ್ಯಕ್‌ಜ್ಞಾನದ ಸೊಬಗನ್ನು ಗುರುತಿಸಬಹುದು. ಯೋಗಮಾರ್ಗದ ಆಚರಣೆಯಿಂದ ಪಡೆದುಕೊಳ್ಳುವ ಆನಂದದ ಅನುಭೂತಿಯು ಎಲ್ಲರಿಗೂ ಸಾಧ್ಯವಾಗಲಿಕ್ಕಿಲ್ಲ. ಆದರೆ ಯಾವುದೇ ತರಹದ ಪರಿಪಾಕ ಪ್ರವೃತ್ತಿಯುಳ್ಳವರಿರಲಿ ಅವರೆಲ್ಲರಿಗೂ ಹೊಂದಿಕೆಯಾಗುವಂತೆ ವೈರಾಗ್ಯಯುಕ್ತವಾದ ಭಕ್ತಿ–ಜ್ಞಾನಗಳಿಂದ ಷಟ್ಸ್ಥಲ ಮತ್ತು ನಿರವಯ ಸ್ಥಲ ಇವುಗಳ ನಿಲವನ್ನು ಕಾಣುವ ಯೋಜನೆಯನ್ನು ಸ್ಫುಟವಾಗಿ ರೂಪುಗೊಳಿಸಿದುದು ಶಿವಶರಣರ ಒಂದು ಮೇಲ್ಮೆಯನ್ನು ವ್ಯಕ್ತಗೊಳಿಸುವದು !

ಶೈವ ಧರ್ಮವು ನಮ್ಮೀ ನಾಡಿನಲ್ಲಿ ಬಹಳ ಪುರಾತನ ಕಾಲದಿಂದಲೇ ರೂಢವಾಗಿತ್ತೆಂಬುದು ೫೦೦೦ ವರ್ಷಗಳ ಹಿಂದಣ ಸಂಸ್ಕೃತಿಯನ್ನು ತಿಳಿಯಪಡಿಸುವ ಮೊಹೆಂಜೊದಾರೊ ಮತ್ತು ಹರಪ್ಪಗಳ ಅಗೆತಗಳಲ್ಲಿ ದೊರೆತ ಅವಶೇಷ-

ಗಳಿಂದ ಗೊತ್ತಾಗುವುದು. ಐತಿಹಾಸಿಕ ಕಾಲದ ಶೈವ ಧರ್ಮದಲ್ಲಿ, ವಿಶೇಷ ವಾಗಿ ದಕ್ಷಿಣ ಭಾರತದ ಶೈವ ಧರ್ಮದ ಇತಿಹಾಸದಲ್ಲಿ ಮಾತ್ರ ಶೈವ ಭಕ್ತಿಯ ವಿಸ್ತಾರ ವೈಭವಗಳನ್ನು ಸೂಚಿಸುವ ಭವ್ಯವಾದ ಶಿವಾಲಯಗಳ ರಚನೆಯನ್ನು ಕಾಣುತ್ತೇವೆ. ಇಂತಹ ಪ್ರಸಿದ್ಧವಾದ ಶೈವ ಕ್ಷೇತ್ರಗಳಲ್ಲಿ ಭಾರತದ ನಾನಾ ಭಾಗಗಳಲ್ಲಿ ಸ್ಥಾಪ್ಯವಾಗಿರುವ ದ್ವಾದಶ ಜ್ಯೋತಿರ್ಲಿಂಗಗಳನ್ನು ಬಹುದಿನಗಳಿಂದ ಬಹಳ ಭಕ್ತಿಭಾವನೆಗಳಿಂದ ಕಾಣುತ್ತ ಬಂದಿದ್ದಾರೆ. ಆದರೆ ವೇದಋಷಿಗಳು ಬಾಹ್ಯ ಪ್ರಕೃತಿಯಲ್ಲಿ ದೇವನ ಅಸ್ತಿತ್ವವನ್ನು ಗುರುತಿಸಲು ಯತ್ನಿಸಿದ ತರುವಾಯ ಉಪನಿಷತ್ತಿನ ಋಷಿಗಳು ಅವನನ್ನು ಅಂತರಂಗದಲ್ಲಿ ಕಾಣಲು ಹಂಬಲಿಸಿದಂತೆ, ಬಹಿರ್ರಂಗದಲ್ಲಿ ದೇವನನ್ನರಸುವದನ್ನು ಬಿಟ್ಟು ಅಂತರಂಗದಲ್ಲಿ ಅವನನ್ನು ಕಾಣುವ ತವಕ ಶಿವಶರಣರ ಕಾಲದಲ್ಲಿ ಹುಟ್ಟಿಕೊಂಡುದನ್ನು ಅರಿಯಬಲ್ಲೆವು. ಅವರಲ್ಲಿ ಅನೇಕರು ತಮ್ಮ ಇಷ್ಟದೇವತೆಗಳಾಗಿದ್ದ ಸ್ಥಾವರಲಿಂಗಗಳನ್ನು ತಮ್ಮ ಅಂಗದ ಮೇಲಣ ಇಷ್ಟಲಿಂಗದಲ್ಲಿ ಅಡಗಿಸಿಕೊಂಡರು; ಮಾತ್ರವಲ್ಲದೆ, ಆ ಕ್ಷೇತ್ರ ಲಿಂಗಗಳನ್ನು ತಮ್ಮ ಅಂತರಂಗದಲ್ಲಿಯೇ ಕಂಡುಕೊಂಡರು. ಅನುಭವದ ಪರಿವಿಡಿಯಲ್ಲಾಗಲಿ, ಯೋಗದ ನಿಲವಿನಲ್ಲಾಗಲಿ ಶಿವಯೋಗಿಗಳು ಕಂಡ ಜ್ಯೋತಿರ್ಲಿಂಗಗಳ ಪ್ರಕಾಶದ ಸೊಬಗು ಒಂದು ಅನ್ಯಾದೃಶವಾದ ನಾವಿನ್ಯತೆ ಯಿಂದ ಕೂಡಿಕೊಂಡಿರುತ್ತದೆ. ಅಲ್ಲಮಪ್ರಭುದೇವರನ್ನು ಸಂಧಿಸುವ ಪೂರ್ವದಲ್ಲಿ ರಾಜಯೋಗಾನುಸಂಧಾನದಿಂದ ಸೊನ್ನಲಿಗೆಯ ಸಿದ್ಧರಾಮೇಶ್ವರನು ಕಂಡು ಕೊಂಡಿದ್ದ ಜೋತಿಲಿಂಗ, ಉಭಯಪ್ರತಿಷ್ಠ ಲಿಂಗ, ಅಮೃತಲಿಂಗಗಳ ಪ್ರಭೆ ಗಿಂತಲೂ ಮಹತ್ತರವಾದ ಪ್ರಭಾವ ಅಂತರಂಗದ ಈ ದ್ವಾದಶ ಜ್ಯೋತಿರ್ಲಿಂಗ ಗಳಲ್ಲಿ ನಿಗೂಹನವಾಗಿರುವುದೆಂಬುದನ್ನು ಅರಿತುಕೊಂಡನು ಶಿವಯೋಗಿ ಸಿದ್ಧ-ರಾಮೇಶ್ವರನು. ವೈಲಾರ ಬಸವಲಿಂಗ ಶಿವಯೋಗಿಗಳು ಕಂಡಿದ್ದ ಈ ಜ್ಯೋತಿ ಲಿಂಗಗಳ ಬೆಡಗನ್ನು ನೋಡಬೇಕು ಈ ಅವರ ಪದ್ಯದಲ್ಲಿ:

ಅಂಗದ ಲತೆ ಕಮಲಂಗಳೊಳಗೆ ನವಲಿಂಗ–ತುಂಬಿ ।
ಮಂಗಳ ಘೋಷದಿ ಝೇಂಕರಿಸುತಲಿದೆ ಲಿಂಗ–ತುಂಬಿ ॥ ಪಲ್ಲ ॥

ಚಾರು ಚೌದಳದರವಿಂದದೊಳಾಚಾರಲಿಂಗ–ತುಂಬಿ ।
ಆರು ದಳದ ಸರಸಿಜದೊಳು ಶ್ರೀಗುರುಲಿಂಗ–ತುಂಬಿ ।
ಮೀರಿ ದ್ವಾದಶದಳ ನಳಿನದೊಳು ಜಂಗಮಲಿಂಗ–ತುಂಬಿ ॥ ೧ ॥

ಪದಿನಾರೆಸಳ ಪದುಮದೊಳು ಸುಪ್ರಸಾದಲಿಂಗ-ತುಂಬಿ ।
ದ್ವಿದಳ ಸರೋಜದ ಸೌರಭದೊಳು ಮಹಲಿಂಗ-ತುಂಬಿ ॥
ವಿದಿತ ಸಾಸಿರ ದಳದಬ್ಜದಿ ನಿಷ್ಕಳಲಿಂಗ-ತುಂಬಿ ।
ತ್ರಿದಳ ತಾಮರಸದೊಳು ನಿಃಶೂನ್ಯಲಿಂಗ-ತುಂಬಿ ॥ ೨ ॥

ಏಕೈಕ ದಳದ ಕಂಜದೊಳು ನಿರಂಜನಲಿಂಗ-ತುಂಬಿ ।
ಸಾಕಾರಾಂಗದ ವಾಮಕರಪೀಠದೊಳಗಿಷ್ಟಲಿಂಗ-ತುಂಬಿ ॥
ತ್ರೈಕರಣಾದಿ ಸರ್ವಾಂಗದೊಳಗೆ ಪ್ರಾಣಲಿಂಗ-ತುಂಬಿ ।
ಶ್ರೀಕರ ಗುರು ಚೆನ್ನವೀರ ತಾನಾದುದ ಲಿಂಗ-ತುಂಬಿ ॥ ೩ ॥

ಇಲ್ಲಿ ಲಿಂಗವನ್ನು ತುಂಬಿ (ಭ್ರಮರ) ಗೆ ಹೋಲಿಸಿದೆ; ಅದು ಎಲ್ಲೆಡೆಯಲ್ಲಿಯೂ ತುಂಬಾ ತುಂಬಿಕೊಂಡಿದೆ; ಪೂರ್ಣತೆಯಿಂದ ಕೂಡಿದ ಆ ಪರವಸ್ತುವು ಸಾಧಕ-ಭಕ್ತನ ಅಂಗಾಂಗಗಳನ್ನೆಲ್ಲ ವ್ಯಾಪಿಸಿ ಭೃಂಗದಂತೆ ಘೋಷವನ್ನು, ಮಂಗಳ ಘೋಷವನ್ನು ಗೆಯ್ಯುತ್ತಿದೆ; ಅದು ನಾದಮಾಧುರ್ಯವನ್ನು ನೀಡುತ್ತಿದೆ (ಮಂತ್ರವೇ ಲಿಂಗವೆನಿಸಿದುದರಿಂದ). ಇಲ್ಲಿ ಮನೋಹರವಾದ ಶ್ಲೇಷೆಯನ್ನೂ ಜೊತೆಗೆ ಅಂತರಂಗದಲ್ಲಿಯ ಶಕ್ತಿಯ ಕೇಂದ್ರಗಳನ್ನೂ ದಳಕುಳಗಳಿಂದೊಡ-ಗೂಡಿದ ಚಕ್ರಗಳನ್ನೂ ಅರಿಯಬಹುದಾಗಿದೆ.

ವೀರಶೈವರ ಷಟ್ಸ್ಥಲ ಅಷ್ಟಾವರಣಗಳ ಆಚರಣೆಯು ಶಿವಯೋಗದ ಹಿನ್ನೆಲೆಯಲ್ಲಿ ಸಾಗುತ್ತಿರುತ್ತದೆ. ಸಿದ್ಧಾಂತಗಳು ಸಿದ್ಧಾಂತಗಳಾಗಿಯೇ ಉಳಿಯದೆ ಅವು ಸಾಧಕನ ದಿನದಿನದ ನಡೆಯಲ್ಲಿ ವ್ಯಕ್ತವಾಗಬೇಕು; ಹಾಗೆ ವ್ಯಕ್ತವಾದಂತೆ ಅವುಗಳ ಅನುಭವವನ್ನು ಅಂತರಂಗದ ಅನುಸಂಧಾನದಲ್ಲಿ ಕಾಣಲೂ ಅದರಿಂದ ಸರಿದೊರೆಯಿಲ್ಲದ ಶಾಂತಿ, ಅಪಾರವಾದ ಆನಂದ ಇವನ್ನು ಪಡೆಯಲೂ ಅನುಕೂಲವಾಗುವದು. ವಿಶ್ವದ ನಾಟ್ಯರಂಗದಲ್ಲಿ ತಾನು ನಿರ್ವಹಿಸಬೇಕಾದ ಪಾತ್ರವನ್ನು ಸರಿಯಾಗಿ ಆಡಿ ತೋರಿಸಿ ಆತ್ಮ ಪರಮಾತ್ಮರ ದಿವ್ಯ ಲೀಲೆಯನ್ನು ಕಾಣಿಸಿಕೊಡುವದು ಶಿವಯೋಗಿಯ ಘನವಾದ ಉದ್ದೇಶವಾಗಿರುತ್ತದೆ. ಶಿವಯೋಗಿಯು ಕೇವಲ ಕಲ್ಪನೆಯ ಕನಸುಣಿಯಲ್ಲ, ಆತನು ಸತ್ಕಾರ್ಯದ ಕಲಿಯಾಗಿರುವನು. ಆದ್ದರಿಂದ ತತ್ವ-ಸಿದ್ಧಾಂತಗಳನ್ನು ಮೈಗೂಡಿಸಿಕೊಳ್ಳುವುದೇ ಅವನಿಗೆ ಪರಮಾದರ್ಶ. ಶಿವಯೋಗಿಯು ಪ್ರಗತಿಪರವಾದ ಅನುಭವದಲ್ಲಿ ತತ್ವ-ವ್ಯಕ್ತಿಗಳೊಳಗಿನ ಅಭ್ಯಂತರವಡಗಿ ಅನವರತವಾಗಿ ಈ ಶ್ರೇಷ್ಠ

ವಾದ ಆದರ್ಶವೇ ಕಣ್ಣೆದುರಿಗೆ ಬಂದು ನಿಲ್ಲುತ್ತಿದೆ. ಇಂತಹ ಆದರ್ಶವನ್ನು ಅಂಗೈಯ ನೆಲ್ಲಿಯಂತೆ ಸ್ಫುಟಗೊಳಿಸಿಕೊಂಡು ಅದನ್ನು ಅನ್ಯರಿಗೆ ಲೀಲಾಯ ಮಾನವಾಗಿ ಕಾಣಿಸಿಕೊಡಲು ಬಲ್ಲಿದರಾದ ವ್ಯಕ್ತಿಗಳು ಒಬ್ಬರೇ, ಇಬ್ಬರೇ, ಮೂವರೇ ? ಹಲವಾರು ಜನ ! ಆದುದರಿಂದಲೇ ಆದರಣೀಯರೂ ಸಂಸ್ಮರ ಣೀಯವರೂ ಆದ ಅಂತಹ ವ್ಯಕ್ತಿಗಳನ್ನು ಶಿವಯೋಗದ ಆತ್ಯಂತಿಕ ಧ್ಯೇಯ ವನ್ನು ವಿವರಿಸುವ ತಮ್ಮ ವಚನಗಳಲ್ಲಿ ವಚನಕಾರರಾದ ಅನೇಕ ಶಿವಯೋಗಿ ಗಳು ವಿಧವಿಧವಾಗಿ ಕೊಂಡಾಡಿದ್ದಾರೆ.

ಷಣ್ಮುಖ ಸ್ವಾಮಿಯು ಅಖಂಡೇಶ್ವರ ವಚನಗಳೆಂದು ಪ್ರಸಿದ್ಧವಾದ ತನ್ನ ಒಂದು ವಚನದಲ್ಲಿ: "ಎನ್ನ ಪೃಥ್ವೀ ತತ್ವದ ಆಧಾರ ಚಕ್ರವೇ ಭಕ್ತಸ್ಥಲ, ಅದನ್ನು ಬಸವಣ್ಣನೂ; ಎನ್ನ ಅಪ್ಪು ತತ್ವದ ಸ್ವಾಧಿಷ್ಠಾನ ಚಕ್ರವೇ ಮಹೇಶ್ವರ ಸ್ಥಲ, ಅದನ್ನು ಮಡಿವಾಳ ಮಾಚಯ್ಯನೂ; ಎನ್ನ ಅಗ್ನಿತತ್ವದ ಮಣಿಪೂರಕವೇ ಪ್ರಸಾದಿ ಸ್ಥಲ, ಅದನ್ನು ಚೆನ್ನಬಸವಣ್ಣನೂ; ಎನ್ನ ವಾಯುತತ್ವದ ಅನಾಹತ ಚಕ್ರವೇ ಪ್ರಾಣಲಿಂಗಿ ಸ್ಥಲ, ಅದನ್ನು ಸಿದ್ಧರಾಮೇಶ್ವರ ದೇವರೂ; ಎನ್ನ ಗಗನ ತತ್ವದ ವಿಶುದ್ಧಿ ಚಕ್ರವೇ ಶರಣಸ್ಥಲ, ಅದನ್ನು ಉರಿಲಿಂಗಪೆದ್ದಿ ದೇವರೂ; ಎನ್ನ ಜೀವತತ್ವದ ಆಜ್ಞಾಚಕ್ರವೇ ಐಕ್ಯಸ್ಥಲ, ಅದನ್ನು ಅಜಗಣ್ಣ ತಂದೆಗಳೂ; ಎನ್ನ ಬ್ರಹ್ಮರಂಧ್ರವೇ ಪರಮ ಆರೂಢ ಸ್ಥಲ, ಆ ಸ್ಥಲದ ನಿಜಗುಣ ಯೋಗಿಗಳೂ; ಎನ್ನ ಶಿಖಾಚಕ್ರವೇ ನಿತ್ಯ ನಿರುಪಮಸ್ಥಲ, ಆ ಸ್ಥಲದ ಅಕ್ಕಮಹಾದೇವಿಯರೂ; ಎನ್ನ ಪಶ್ಚಿಮ ಚಕ್ರವೇ ಪರಮ ನಿರಂಜನ ಸ್ಥಲ, ಆ ಸ್ಥಲದ ಪ್ರಭುಸ್ವಾಮಿಗಳೂ ಹೀಗೆ ಎನ್ನ ಒಳಹೊರಗೆ ತೋರುವ ಎಲ್ಲ ಸ್ಥಲಕುಳಂಗಳನು ಸಕಲ ಗಣಂಗಳು ಇಂಬುಗೊಂಡರಾಗಿ ಎನಗೆ ಎಲ್ಲ ಸ್ಥಳಂಗಳೂ ಬಯಲಾದವು'— ಎಂದು ಹೇಳಿ ಕೊಂಡಿದ್ದಾನೆ. ನವಚಕ್ರದ ನಿರ್ಣಯವನ್ನೂ, ಆ ಚಕ್ರಗಳಲ್ಲಿ ಗೌಪ್ಯವಾದ ಶಕ್ತಿಯ ಅಭಿವ್ಯಕ್ತಿ, ಸಂಪಾದನೆಯ ರಹಸ್ಯವನ್ನೂ, ಅದನ್ನು ಅಂಗವಿಸಿಕೊಂಡಿದ್ದ ಶರಣ ಶರಣೆಯರನ್ನೂ ಅವರಿಂದಾಗಿ ಅವರಿಗೆ ನಿಲುಕಿದ ಸ್ಥಲ ನಿರ್ದೇಶವನ್ನೂ ತನ್ಮೂಲಕವಾಗಿ ತನ್ನ ಮೇಲಾದ ಅವರ ವ್ಯಕ್ತಿತ್ವ ಅನುಭವಗಳ ಪ್ರಭಾವಮುದ್ರೆ ಯನ್ನೂ ಷಣ್ಮುಖಸ್ವಾಮಿಯು ಇಲ್ಲಿ ವಿವರಿಸಿದ್ದಾನೆ. ಆದರ್ಶವನ್ನು ಎದುರಿಗಿಟ್ಟು ಕೊಂಡ ಕಾಲಕ್ಕೆ ತತ್ವಗಳ ತಿಳಿವಳಿಕೆಯೊಡನೆ ಅವುಗಳ ಅಳವಡಿಕೆಯೂ ಮಹತ್ವ ವನ್ನು ಪಡೆಯುತ್ತದೆ. ಆ ತತ್ವಗಳನ್ನು ಅಳವಡಿಸಿಕೊಂಡಿದ್ದ ವ್ಯಕ್ತಿಗಳು ಜೀವನ ದಲ್ಲಿ ಸಾಧಿಸಿಕೊಂಡ ಆದರ್ಶವನ್ನು ನಿಚ್ಚ ಎಚ್ಚರಿಕೆಯೊಡನೆ ಪಾಲಿಸಿಕೊಂಡು ಬಂದು ಸಾಧನೆಯನ್ನು ಇನ್ನೂ ಸುಲಭಗೊಳಿಸಿಕೊಂಡರು ಆ ಶಿವಯೋಗಿಗಳು.

ಷಡ್ದರ್ಶನಗಳಲ್ಲಿ ಒಂದಾದ ಯೋಗವು ಒಂದು ಶಾಸ್ತ್ರವಾಗಿದೆ. ಎಲ್ಲ ಶಾಸ್ತ್ರಗಳೂ ಕಾಲಾನುಕ್ರಮದಲ್ಲಿ ಬೆಳವಣಿಗೆಯನ್ನು ಪಡೆಯುವಂತೆ ಯೋಗ ಶಾಸ್ತ್ರವೂ ಪ್ರಗತಿಪರವಾದ ಬೆಳವಣಿಗೆಯನ್ನು ಪಡೆದಿರುತ್ತದೆ. ಪ್ರಯೋಗಕ್ಕೆ ಒಳಪಟ್ಟ ಇದು ಅದ್ಭುತವಾದ ಪ್ರಭಾವವನ್ನು ಬೀರುತ್ತ ಬಂದಿರುತ್ತದೆ. ಇದನ್ನು ಗಮನಿಸಿದಾಗ ಯೋಗದೃಷ್ಟಿಯಿಂದ ಶಿವಯೋಗದ ಸ್ಥಾನಮಾನವು ಎಂಬ ಕ್ರಮಪ್ರಾಪ್ತವಾದ ಪ್ರಶ್ನೆ ಬಹು ಮಹತ್ವದ್ದಾಗಿ ಬಿಡುತ್ತದೆ. ಶಿವಯೋಗವೂ ಒಂದು ಯೋಗ ಎಂದು ತಿಳಿದು ಅದನ್ನು ತಮ್ಮ ದಿನದಿನದ ಆಚರಣೆಯಲ್ಲಿ ತಂದು ನಿಲ್ಲಿಸಿದ ಶಿವಯೋಗಿಗಳ ಪರಂಪರೆಗೆ ಅನುಭವದಲ್ಲಿ ಬಂದ ಸಂಗತಿಗಳು ಅನ್ಯಾದೃಶವಾಗಿರುತ್ತವೆ, ಅನುಪಮವಾಗಿರುತ್ತವೆ. ಶಿವಯೋಗಿಗಳು ಸ್ವಭಾವತಃ ಅಂತರ್ಮುಖಿಗಳು. ತಮ್ಮ ಅಂತರಂಗದಲ್ಲಿ ಅವರು ಕಂಡ ಯೋಗಿಕ ಮೌಲ್ಯಗಳು ಒಂದು ನಾವೀನ್ಯತೆಯಿಂದ ಮೆರುಗುತ್ತಿವೆ. ಸಹಸ್ರಾರದ ವರೆಗಿನ ಅನುಭವವನ್ನು ಸಾಮಾನ್ಯವಾಗಿ ಎಲ್ಲ ಯೋಗಿಗಳೂ ನಿರೂಪಿಸುತ್ತಿದ್ದಾರೆ. ಆದರೆ ಅದರ ಆಚೆಗಿನ ಪಶ್ಚಿಮ ಚಕ್ರದ ವರೆಗಿನ ಅನುಭವದ ಸಂಪಾದನೆಯು ಶಿವಯೋಗಿಗಳಲ್ಲಿ ಮಾತ್ರ ಸ್ಫುಟವಾಗಿ ವ್ಯಕ್ತವಾಗಿರುತ್ತದೆ. ಸರ್ಪಭೂಷಣ ಶಿವಯೋಗಿಗಳು ತಮ್ಮದೊಂದು ಪದ್ಯದಲ್ಲಿ ಶಿವಯೋಗದ ಅನುಭವವನ್ನು ಹೀಗೆ ತಿಳಿಸುತ್ತಾರೆ.

ಬೆರೆಯಬಾರದೆ । ತಿಳಿದು । ಬೆರೆಯಬಾರದೆ ॥
ಮರೆದು ಬಾಹ್ಯವನ್ನು ತನ್ನ । ಕರದಖಂಡ ತೇಜದೊಡನೆ ॥ ಪಲ್ಲ ॥

ತಿಳಿವೆನಿಸುವ ಸುರಭಿಗೂಡಿ । ನಳನಳಿಸುವ ವಿಕಚಹೃದಯ- ॥
ನಳಿನದಮಲ ಕರ್ಣಿಕೆಯೊಳು । ಬೆಳಗು**ವಿಷ್ಟಲಿಂಗ**ದೊಡನೆ ॥ ೧ ॥

ಪರಿವ ಗಂಗೆಯಮುನೆಯೆರಡು । ಬೆರೆವ ಸಂಗಮಸ್ಥಳದೊಳ- ॥
ಗಿರುವ ಗಗನಗಿರಿಯ ತುದಿಯೊ । ಳುರಿವ **ಪ್ರಾಣಲಿಂಗ**ದೊಡನೆ ॥ ೨ ॥

ಮಹಿತ ಶ್ರೀಗುರುಸಿದ್ಧನೊಲಿದು । ವಿಹರಿಸುವ ಸುಷುಮ್ನನಾಡಿ- ॥
ಕುಹರದಗ್ರದಚಲ ಸರಸಿ । ರುಹದ **ಭಾವಲಿಂಗ**ದೊಡನೆ ॥ ೩ ॥

ಸಾಧನೆಗಾಗಿ ಸರ್ಪಭೂಷಣರಾದಿಯಾಗಿ ಶಿವಯೋಗಿಗಳು ಸ್ವೀಕರಿಸಿದ್ದ ಇಷ್ಟ-ಪ್ರಾಣ-ಭಾವಲಿಂಗಗಳ ಅವಿರತವಾದ ಅನುಸಂಧಾನದಲ್ಲಿ ಅವರಿಗೆ ಬಗೆಬಗೆ-ಯಾದ ಹೊಸ ಹೊಸ ಅನುಭವಗಳು ಗೋಚರವಾಗಿರುತ್ತವೆ.

ಮಾನವನ ಹೃದಯ ಕಮಲವು ಹನ್ನೆರಡು ದಳಗಳುಳ್ಳದ್ದಾಗಿದೆ. ಈ ದಳಗಳಲ್ಲಿ ನಾಲ್ಕು ಮೇಲು ಮುಖವುಳ್ಳವುಗಳೂ, ಎಂಟು ಕೆಳಮುಖವುಳ್ಳವುಗಳೂ ಎಂದು ವರ್ಣಿತವಾಗಿರುತ್ತವೆ. ದುರುದುಂಬಿಯು ಪುಷ್ಪಗಳಲ್ಲಿ ವಿವರಿಸುವಂತೆ ಪ್ರಾಕೃತ ಜೀವಿಯು ಕೆಳಮುಖವಾದ ಎಂಟು ದಳಗಳಲ್ಲಿ ದಲದಿಂದ ದಲಕ್ಕೆ ಸಂಚರಿಸುತ್ತಿರುತ್ತಾನೆ. ಅಧೋಮುಖವಾದ ಅಷ್ಟದಲಗಳಲ್ಲಿ ಭ್ರಮಿಸುವ ಅವನಲ್ಲಿ ಅಧಃಪ್ರವೃತ್ತಿಗಾಗಿ ಜ ಗುಪ್ಸೆಯುಂಟಾದಾಗ ಪರಿವರ್ತನೆಗೆ ಮೊದಲಾಗುವದು, ಅಂದರೆ ಹೃದಯಕಮಲದ ಮೇಲು ಮುಖವಾದ ನಾಲ್ಕು ದಳಗಳಲ್ಲಿ ಅವನು ವಿವರಿಸಹತ್ತುವನು. ಯೋಗಶಾಸ್ತ್ರದಲ್ಲಿ ಸಾಮಾನ್ಯವಾಗಿ ಗುರುತಿಸಲಾದ ಶಕ್ತಿಯ ಏಳು ಕೇಂದ್ರಗಳಲ್ಲಿ ಅನಾಹತಚಕ್ರವು ಈ ಹೃದಯ ಕಮಲದಲ್ಲಿರು-ತ್ತದೆ. ಸಪ್ತಚಕ್ರಗಳಲ್ಲಿ ಮಧ್ಯಮ ಸ್ಥಾನದಲ್ಲಿದ್ದು ಯೋಗದ ಕೀಲದಂತಿರುವ ಈ ಅನಾಹುತ ಚಕ್ರಕ್ಕೆ ಶಿವಯೋಗದಲ್ಲಿ ತುಂಬಾ ಮಹತ್ವವನ್ನೀಯಲಾಗಿದೆ. ಅನಾಹತಚಕ್ರದ ಮೇಲು ಮಗ್ಗಲು ಕ್ರಮವಾಗಿ ವಿಶುದ್ಧಿ ಆಜ್ಞಾ ಹಾಗು ಬ್ರಹ್ಮರಂಧ್ರ ಇಲ್ಲವೆ ಸಹಸ್ರಾರ ಎಂಬ ಮೂರು ಚಕ್ರಗಳಿರುತ್ತವೆ; ಮತ್ತು ಇದರ ಕೆಳ ಮಗ್ಗಲು ಅನುಕ್ರಮದಿಂದ ಮಣಿಪೂರಕ ಸ್ವಾಧಿಷ್ಠಾನ ಹಾಗು ಕೊನೆಯದಾದ ಮೂಲಾಧಾರ ಎಂಬ ಮೂರು ಚಕ್ರಗಳುಂಟು. ಅಧೋಮುಖಿಯಾದ ಪ್ರಾಕೃತ ಜೀವಿಯು ಕೇವಲ ಅನ್ನಮಯ ಪ್ರಾಣಮಯ ಮನೋಮಯ ಕೋಶಗಳಲ್ಲಿ ಎಂದರೆ ಕೆಳಗಿನ ಮೂರು ಚಕ್ರಗಳಲ್ಲಿ ಏರಿಳಿಯುವದನ್ನು ಮಾಡುತ್ತಿರುವನು. ಅವನ ಇಡಿಯ ವ್ಯವಹಾರವೆಲ್ಲ ಇಂದ್ರಿಯ ತೃಪ್ತಿಗಾಗಿಯೇ ಸಾಗುತ್ತಿರುವದು. ಅಧಃಪ್ರವೃತ್ತಿಗಳ ಜಾಲದಲ್ಲಿ ನುಗ್ಗು ನುಸಿಯಾಗುತ್ತಿರುವ ಅವನು ಪ್ರವೃತ್ತಿಗಳ ದಂದುಗವನ್ನು ತಪ್ಪಿಸಿಕೊಂಡು ಅಂತರ್ಮುಖಿಯಾಗಿ ಆಧಾರ ಚಕ್ರದಿಂದ ಸ್ವಾಧಿಷ್ಠಾನಕ್ಕೆ ಏರಿದನೆಂದರೆ ಆ ಪ್ರಮಾಣಕ್ಕನುಸರಿಸಿ ಸಹಸ್ರಾರದಲ್ಲಿದ್ದ ಶಿವ-ಶಕ್ತಿಯು ಆಜ್ಞಾಚಕ್ರಕ್ಕೆ ಇಳಿದು ಬರುವದು. ಪ್ರಭುಕಾರುಣ್ಯಕ್ಕಾಗಿ ಹಂಬಲಿಸಿದ ಸಾಧಕನಲ್ಲಿ ಇಂದ್ರಿಯನಿಗ್ರಹ ತಾಳ್ಮೆ ಸಂಯಮನ ಆಚಾರಶುದ್ಧಿ ಇತ್ಯಾದಿಗಳು ಅಳವಟ್ಟು ಆತನು ಸ್ವಾಧಿಷ್ಠಾನ ಚಕ್ರದ ಅನುಭವದಿಂದ ಮಣಿಪೂರಕ ಚಕ್ರ-ವನ್ನು ಮುಟ್ಟಿದನೆಂದರೆ ಶಿವಶಕ್ತಿಯೂ ಆಜ್ಞಾಚಕ್ರದಿಂದ ವಿಶುದ್ಧಿ ಚಕ್ರಕ್ಕೆ

ಇಳಿದು ಬರುವುದು. ಹಾಗೆಯೇ ಮಣಿಪೂರಕ ಚಕ್ರದ ಅನುಭವದಲ್ಲಿದ್ದ ಅವನು ನಿರ್ಮಲಮತಿ ಪ್ರಸನ್ನದೃಷ್ಟಿ ಇತ್ಯಾದಿಗಳಿಂದೊಡಗೂಡಿ ಅನಾಹತ ಚಕ್ರಕ್ಕೆ ನಿಲುಕಿದನೆಂದರೆ ವಿಶುದ್ಧಿ ಚಕ್ರದಲ್ಲಿದ್ದ ಶಿವಶಕ್ತಿಯೂ ಅನಾಹತಕ್ಕೆ ಇಳಿದು ಬರುವದು. ಹೀಗೆ ಕೆಳಗಿನಿಂದ ಏರಿ ಹೋಗುವ ಸಾಧಕನ ಭಕ್ತಿಯೂ (Force) ಮೇಲಿನಿಂದ ಕೆಳಗೆ ಇಳಿದು ಬರುವ ಶಿವಶಕ್ತಿಯೂ (Grace) ಅನಾಹತ ಚಕ್ರದಲ್ಲಿ ಅರ್ಥಾತ್ ಹೃದಯ ಸ್ಥಾನದಲ್ಲಿ ಸಂಧಿಸುವವು. ಈ ಭಕ್ತಿ ಶಕ್ತಿಗಳ ಬೆಸುಗೆಯಿಂದ ಆಗುವದು ಮುಕ್ತಿಯು (Peace). ಇದುವೆ ನಿಜವಾದ ಬಿಡುಗಡೆ, ಅಧಃಪ್ರವೃತ್ತಿಗಳಿಂದ ಹೊಂದುವ ಬಿಡುಗಡೆ, ಮುಕ್ತಿ. ಈ ಬಿಡುಗಡೆಯಲ್ಲಿ ಜೀವನ ಸಂಪೂರ್ಣವಾದ ಪರಿವರ್ತನೆಯು ವ್ಯಕ್ತವಾಗುವದು.

ಕಂಠ ಸ್ಥಾನದಲ್ಲಿಹ ವಿಶುದ್ಧಿಯು ದೇಹ ನಿಯಂತ್ರಕ ಕೇಂದ್ರವಾಗಿರುತ್ತದೆ. ಕಂಠವು ಶರೀರ ಶಾಸ್ತ್ರದಲ್ಲಿ ವರ್ಣಿತವಾದ ಥೈರಾಯಿಡ್ (Thyroid) ಮತ್ತು ಪ್ಯಾರಾ-ಥೈರಾಯಿಡ್ (Para-Thyroid) ಗ್ರಂಥಿಗಳಿಗೆ ಆಶ್ರಯ ಸ್ಥಾನವಾಗಿದೆ. ಆಯುರ್ವರ್ಧನೆಗೆ ಅತ್ಯವಶ್ಯವಾದ ಜೀವರಸಗಳನ್ನು ಒಸರಿಸುವ, ಒದಗಿಸುವ ಗ್ರಂಥಿಗಳಿವು. ಇವನ್ನು ಕತ್ತರಿಸಿ ತೆಗೆದರೆ ಜೀವನವು ನಿರ್ವಿಣ್ಣವೂ ನಿಃಸಾರವೂ ಆಗುವದು. ಇವು ಅತಿ ದೊಡ್ಡವೂ ಇರಕೂಡದು, ಅತಿ ಸಣ್ಣವೂ ಇರಕೂಡದು, ಹಾಳತಾಗಿರಬೇಕು. ಇವು ಸುಸ್ಥಿತಿಯಲ್ಲಿರುವುದರಿಂದಲೇ ದೈಹಿಕ ಆರೋಗ್ಯವು ಲಭಿಸುವದು. ಯೋಗಸಾಧನೆಯಿಂದ ವಿಶುದ್ಧಿ ಚಕ್ರವನ್ನು ತೇಜಃಪುಂಜವಾಗಿಟ್ಟುಕೊಂಡವರು ಬಹು ದಿವಸ ಬಾಳಬಲ್ಲರು. ಬಸವಣ್ಣನು ಪ್ರಸಾದ ಕಾಯವನ್ನು ಪಡೆದಿದ್ದನು ಎಂದು ಹೇಳುವರು. ಅದು ಆತನ ವಿಶುದ್ಧಿ ಚಕ್ರದ ಸ್ವಾಸ್ಥ್ಯವನ್ನು ಸೂಚಿಸುವದು. ಜಾಗ್ರತವಾದ ಅವನ ವಿಶುದ್ಧಿಚಕ್ರದಿಂದ ಹೊರಚಿಮ್ಮುತ್ತಿದ್ದ ಅನುಭವದ ಚಿಲುಮೆಯಿಂದ ದೇಹದ ಸಮಸ್ತ ಚಲನಗಳನ್ನು ಅವನು ನಿಯಂತ್ರಿಸಬಲ್ಲವನಾಗಿದ್ದನೆಂದು ಹೇಳಬಹುದು. ಹಾಗೆಯೇ ಭ್ರೂಮಧ್ಯದಲ್ಲಿಹ ಆಜ್ಞಾ ಚಕ್ರವು ಜಾಗೃತವಾದರೆ ಪ್ರಾಣಸೃಷ್ಟಿಯ ಮೇಲೆ ಪ್ರಭುತ್ವವುಂಟಾಗಿ ಯೋಗಿಯಲ್ಲಿ ಕಲ್ಪಕವೃತ್ತಿ ಕರ್ತೃತ್ವಶಕ್ತಿಗಳು ಸ್ಫುರದ್ರೂಪವಾಗಿ ಬೆಳೆದು ಪ್ರಭಾವಶಾಲಿಯಾಗಿ ಕಂಗೊಳಿಸುವವು. ಬ್ರಹ್ಮರಂಧ್ರದಲ್ಲಿಯ ಸಹಸ್ರಾರ ಚಕ್ರವು ಜಾಗ್ರತವಾದರೆ ಯೋಗಿಯು ನಿತ್ಯ ನವೀನವಾಗಿ ಶೋಭಿಸುವ ಪರಮಾನಂದ ಪಯೋನಿಧಿಯಲ್ಲಿ ಓಡಾಡುವನು, ಪರಮಶಾಂತಿಯ ಸಾಮ್ರಾಜ್ಯದಲ್ಲಿ ಲೋಲಾಡುವನು.

ಶರೀರದಲ್ಲಿಯ ಶಕ್ತಿಯ ಏಳೂ ಕೇಂದ್ರಗಳನ್ನು ಸಪ್ತಲೋಕಗಳೆಂದು ಉಪಮಿಸುತ್ತಾರೆ. ಶಿರಸ್ಥಾನದ ಏಳನೆಯ ಕೇಂದ್ರವಾದ ಸಹಸ್ರಾರ ಚಕ್ರವು ಸತ್ಯ ಲೋಕವೆನಿಸಿದೆ. ಇಲ್ಲಿ ಶಕ್ತಿಯು ಸತ್‌ನ್ನು ಆಶ್ರಯಿಸಿ ಶುದ್ಧ ಜೀವನವನ್ನು ವ್ಯಕ್ತಗೊಳಿಸುತ್ತಿದೆ: ಭ್ರೂಮಧ್ಯ ಸ್ಥಾನದ ಆಜ್ಞಾ ಚಕ್ರವು ಆರನೆಯ ಕೇಂದ್ರವಾಗಿ ತಪೋಲೋಕವೆನಿಸಿದೆ. ಇಲ್ಲಿ ಶಕ್ತಿಯು ಚಿತ್‌ನ್ನು ಆಶ್ರಯಿಸಿಕೊಂಡು ಸ್ವಾನುಭಾವ ವನ್ನು ವ್ಯಕ್ತಗೊಳಿಸುವದು. ಐದನೆಯ ಕೇಂದ್ರವಾದ ಗಂಟಲಿನಲ್ಲಿಯ ವಿಶುದ್ಧಿ ಚಕ್ರಕ್ಕೆ ಜ್ಞಾನಲೋಕವೆಂದು ಹೆಸರು. ಇದು ಕ್ರಿಯಾಸಿದ್ಧಿಯಿಂದುಂಟಾಗುವ ಆನಂದಕ್ಕೆ ಆಗರವಾಗಿದೆ. ಇಲ್ಲಿ ಶಕ್ತಿಯು ಸಕ್ರಿಯವಾದ ಆನಂದವನ್ನು ಆಧರಿಸಿರು ತ್ತದೆ. ಹೃದಯಸ್ಥಾನದ ಅನಾಹತ ಚಕ್ರವು ನಾಲ್ಕನೆಯ ಕೇಂದ್ರವು. ವಿಶಾಲವಾದ ಅರಿವಿನ ಸೃಷ್ಟಿಯೆನಿಸಿದ ಮಹರ್ (ಮಹಾ) ಲೋಕವೆಂದು ಇದನ್ನು ಹೆಸರಿಸು ತ್ತಾರೆ. ಇಲ್ಲಿ ಶುದ್ಧ ವಿಚಾರವನ್ನು ಆಶ್ರಯಿಸಿಕೊಂಡು ಶಕ್ತಿಯು ಆವಾಸ ಗೊಂಡಿರುತ್ತದೆ. ನಾಭಿ ಸ್ಥಾನದಲ್ಲಿಯ ಮಣಿಪೂರಕ ಚಕ್ರವು ಮೂರನೆಯ ಕೇಂದ್ರವಾಗಿದ್ದು, ಇದು ಸ್ವರ್ಲೋಕಕ್ಕೆ ಸಮವಾಗಿರುತ್ತದೆ. ಇದು ಶುದ್ಧ ಮನವನ್ನಾಶ್ರಯಿಸಿದ ಶಕ್ತಿಗೆ ಸ್ಥಾನವಾಗಿರುತ್ತದೆ. (ಲಿಂಗ) ಪ್ಲೀಹದ ಸ್ಥಾನದ ಸ್ವಾಧಿಷ್ಠಾನ ಚಕ್ರವು ಎರಡನೆಯ ಕೇಂದ್ರವು, ಭುವರ್ಲೋಕವೆಂದು ಇದನ್ನು ಬಣ್ಣಿಸಲಾಗಿದೆ. ಇಲ್ಲಿ ಶಕ್ತಿಯು ಜೀವವನ್ನಾಶ್ರಯಿಸಿಕೊಂಡಿರುತ್ತದೆ. ಬೆನ್ನು ಹುರಿಯ ಕೆಳಗಿನ ತುದಿಯ ಆಧಾರಚಕ್ರವು ಮೊದಲನೆಯ ಕೇಂದ್ರವಾಗಿದೆ. ಭೂಲೋಕವೆನಿಸಿದ ಭೌತಿಕ ಸೃಷ್ಟಿಗೆ ಇದನ್ನು ಹೋಲಿಸುತ್ತಾರೆ. ಶಕ್ತಿಯು ಇಲ್ಲಿ ಪ್ರಾಕೃತಿಕ ಸೃಷ್ಟಿಯನ್ನು ಆಶ್ರಯಿಸಿಕೊಂಡಿರುತ್ತದೆ. ಸತ್ಯಲೋಕದಿಂದ ಭೂಲೋಕದ ವರೆಗಿನ ಎಲ್ಲ ಲೋಕಗಳೂ ಅರಿವಿನ ಒಂದೊಂದು ನಿಲವನ್ನು ಅಧಿಕರಿಸುತ್ತಿವೆ. ಅನುಸಂಧಾನದಿಂದ ಆಯಾಸ್ಥಾನದ ಅರಿವು ಜಾಗ್ರುತವಾಗಿ ವಿಕಾಸವನ್ನು ಪಡೆದಾಗ ಶುದ್ಧ ರೂಪದಲ್ಲಿ ಶಕ್ತಿಯು ಇಳಿದು ಬರುವುದೆಂಬ ಮಾತಿಗೆ ಅರ್ಥವಾಗುತ್ತದೆ.

ಆತ್ಮನು ಪರವಸ್ತುವಿನೊಡನೆ ಐಕ್ಯವನ್ನು ಪಡೆಯುವುದಕ್ಕಾಗಿ, ಸಮರಸ ವನ್ನು ಹೊಂದಲೋಸುಗ ಅಂತರಂಗದಲ್ಲಿ ಊರ್ಧ್ವಗತಿಯನ್ನು ಪಡೆಯಬೇಕಾ ಗುತ್ತದೆ. ಅಧ್ಯಾತ್ಮಪಥದಲ್ಲಿ ಆತ್ಮನ ಈ ಊರ್ಧ್ವಗತಿಯು, ಈ ಮೇಲೆ ಏರುವಿ ಕೆಯು ಅನಿವಾರ್ಯವಾಗಿರುವುದರಿಂದ ಭೂಲೋಕದಿಂದ ಸತ್ಯಲೋಕದ ವರೆಗಿನ ಅವನ ಊರ್ಧ್ವಗಮನದಲ್ಲಿ ಪ್ರಗತಿ ಸೂಚಕವಾದ ಬೇರೆ ಬೇರೆ ಹೆಸ

ರನ್ನು ಅವನು ತಳೆಯುತ್ತಾನೆ. ಭೂಲೋಕದಲ್ಲಿದ್ದು ಪಾಂಚಭೌತಿಕ ಅರಿವಿನಲ್ಲಿದ್ದ ಅವನನ್ನು ವಾಯು ಪ್ರಾಣಿಯೆಂದೂ, ಸ್ವರ್ಲೋಕದಲ್ಲಿಯ ಮನೋವ್ಯಾಪಾರದ ಅರಿವಿನಲ್ಲಿದ್ದ ಅವನನ್ನು ಮನೋಮಯ ಪ್ರಾಣಿಯೆಂದೂ, ಮಹರ್ಲೋಕದಲ್ಲಿಯ ಬುದ್ಧಿಯ ಆಚೆಗಿನ ಅರಿವಿನಲ್ಲಿದ್ದ ಅವನನ್ನು ಅದರ್ಶ ಪ್ರಾಣಿಯೆಂದೂ, ಜ್ಞಾನಲೋಕದಲ್ಲಿಯ ಭಾವದ ಆನಂದದ ಅರಿವಿನಲ್ಲಿದ್ದ ಅವನನ್ನು ಆನಂದಮಯ ಪ್ರಾಣಿಯೆಂದೂ, ತಪೋಲೋಕದಲ್ಲಿಯ ಸ್ವ ವಿಮರ್ಶೆಯ ಅರಿವಿನಲ್ಲಿದ್ದ ಅವನನ್ನು ಅರಿವಿನ ಪ್ರಾಣಿಯೆಂದೂ ಕೊನೆಗೆ ಸತ್ಯಲೋಕದಲ್ಲಿಯ ಶುದ್ಧ ಜೀವನದ ಅರಿವಿನಲ್ಲಿದ್ದ ಅವನನ್ನು ಪರಿಶುದ್ಧ ಪ್ರಕಾಶಮಯ ಪ್ರಾಣಿಯೆಂದೂ ಸಂಬೋಧಿಸಲಾಗುತ್ತದೆ. ಆತ್ಮನು ಆಧಾರದಿಂದ ಸಹಸ್ರಾರದ ವರೆಗಿನ ಯಾವದೇ ಶಕ್ತಿಯ ಕೇಂದ್ರವನ್ನು ಸೇರಲಿ, ಅರಿವಿನ ಸ್ಥಾನವನ್ನು ಮುಟ್ಟಲಿ, ಅಲ್ಲಿ ತನ್ನ ನಿಲವಿಗನುಗುಣವಾಗಿ ಅವನು ಪರಮಾತ್ಮನ ನಿಲವನ್ನು ಕಾಣುತ್ತಾನೆ. ಪರಮಾತ್ಮನು ಎಲ್ಲೆಡೆಯನ್ನು ವ್ಯಾಪಿಸಿ ವಿಶ್ವಗತನೆಂದೂ, ಅದನ್ನು ಮೀರಿ ಆಚೆಗಿರುವುದರಿಂದ ವಿಶ್ವೋತ್ತೀರ್ಣನೆಂದೂ ಆತ್ಮನ ಅರಿವಿಗೆ ಗೋಚರನಾಗುವುದರಿಂದ ಆಯಾ ನಿಲವಿನಲ್ಲಿ ಆಯಾ ಕೇಂದ್ರದಲ್ಲಿ ಐಕ್ಯವನ್ನು ಸಾಧಿಸಲು, ಸಮರಸವನ್ನು ಪಡೆಯಲು ಅವಕಾಶದೊರೆಯುತ್ತದೆ. ತನ್ನ ಉಚ್ಚ ಮಟ್ಟದ ಸಂಕಲ್ಪ ಶಕ್ತಿಯಿಂದ, ಕರ್ತೃತ್ವ ಸಾಮರ್ಥ್ಯದಿಂದ ಆತ್ಮನು ಭೂತ-ಪ್ರಾಣಿಯ ಅವಸ್ಥೆಯಿಂದ ಪರಿಶುದ್ಧವಾದ ಪ್ರಕಾಶಮಯ ನಿಲವಿನ ವರೆಗೆ ಔನ್ನತ್ಯವನ್ನು ಪಡೆಯಬಲ್ಲನು. ಶಿವಯೋಗದಲ್ಲಿ ಆತ್ಮ ಪರಮಾತ್ಮರ ಸಮರಸ ಜೀವನದಲ್ಲಿ ಇಂಥದೊಂದು ನಿಲವಿಗೆ ಅನುವುಂಟು.

ಯೋಗಸಾಧಕನಿಗೆ ಮಾನವ ಶರೀರವು ಒಂದು ಅನಿವಾರ್ಯವಾದ ಉಪಕರಣವಾಗಿರುತ್ತವೆ. 'ಶರೀರಮಾದ್ಯಂ ಖಲು ಯೋಗಸಾಧನಂ'. ಶರೀರದಲ್ಲಿಯ ನಾಡಿಗಳ ಶುದ್ಧಿಯು ಯೋಗಸಾಧನೆಗೆ ಅವಶ್ಯವಾಗಿರುತ್ತದೆ. ಯೋಗೋಪನಿಷತ್ತುಗಳಲ್ಲಿ ಈ ನಾಡಿಗಳ ಬಹು ಸುಂದರವಾದ ವರ್ಣನೆಯು ಬಂದಿರುತ್ತದೆ. ಈ ಉಪನಿಷತ್ತುಗಳನ್ನು ಆಶ್ರಯಿಸಿಯೇ ಶ್ರೀ ಚನ್ನಬಸವಣ್ಣ-ನವರು ಬರೆದ ಕರಣಹಸಿಗೆಯಲ್ಲಿ "ಪಂಚವಿಂಶತಿ ತತ್ವಾತ್ಮಕ ದೇಹದಲ್ಲಿ ಜೀರ್ಣ-ವಾದ ಅರಳಿಯ ಪರ್ಣದೋಪಾದಿಯಲ್ಲಿ (ಅಶ್ವತ್ಥ ಜೀರ್ಣ ಪರ್ಣವತ್) ನಾಡಿಗಳು ಪರಿಪೂರ್ಣವಾಗಿರುತಿಹವು. ಅದರೊಳಗೆ ೭೨೦೦೦ ನಾಡಿಗಳೇ ಪ್ರಧಾನನಾಡಿಗಳಾಗಿರುತಿಹವು. ಅದರೊಳಗೆ ೧೫೦೦ ನಾಡಿಗಳೇ ಕಾರಣ

ನಾಡಿಗಳಾಗಿರುತಿಹವು. ಅದರೊಳಗೆ ೭೦೦ ನಾಡಿಗಳೇ ಮುಖ್ಯ ನಾಡಿಗಳಾಗಿರುತಿಹವು. ಅದರೊಳಗೆ ೧೦೦ ನಾಡಿಗಳೇ ಮುಖ್ಯ ನಾಡಿಗಳಾಗಿರುತಿಹವು. ಅದರೊಳಗೆ ೫೦ ನಾಡಿಗಳೇ ಪ್ರಧಾನ ನಾಡಿಗಳಾಗಿರುತಿಹವು. ಅದರೊಳಗೆ ೨೮ ನಾಡಿಗಳೇ ಪ್ರಯೋಜನ ನಾಡಿಗಳಾಗಿರುತಿಹವು. ಅದರೊಳಗೆ ದಶವಿಧ ಭೇದವಾದ ನಾಡಿಗಳೇ ಅತ್ಯಧಿಕ ನಾಡಿಗಳಾಗಿರುತಿಹವು. ಇಡಾ ಪಿಂಗಳಾ ಸುಷುಮ್ನಾ ಎಂಬ ನಾಡಿಗಳು ಈ ದಶವಿಧ ಭೇದವಾದ ನಾಳಂಗಳೊಳಗೆ. ಈ ತ್ರಿವಿಧ ನಾಡಿಗಳು ಅತ್ಯಂತ ಬೀಜನಾಡಿಗಳಾಗಿರುತಿಹವು"— ಎಂದು ಈ ನಾಡಿಗಳ ವಿವರಣೆಯನ್ನು ಕೊಡಲಾಗಿದೆ. ಯೋಗಚೂಡಾಮಣ್ಯುಪನಿಷತ್ತಿನಲ್ಲಿ ದಶವಿಧ ನಾಡಿಗಳನ್ನು ತಿಳಿಸುತ್ತ ಯೋಗಿಗಳಿಗೆ ಇವುಗಳ ಪರಿಚಯವಿರಬೇಕೆಂದು ನಿರೂಪಿಸಲಾಗಿದೆ.

ಪ್ರಧಾನಾಃ ಪ್ರಾಣವಾಹಿನ್ಯೋ ಭೂಯಸ್ತಾಸು ದಶ ಸ್ಮೃತಾಃ ।
ಇಡಾ ಚ ಪಿಂಗಲಾ ಚೈವ ಸುಷುಮ್ನಾ ಚ ತೃತೀಯಗಾ ॥
ಗಾಂಧಾರೀ ಹಸ್ತಿಜಿಹ್ವಾ ಚ ಪೂಷಾ ಚೈವ ಯಶಸ್ವಿನೀ ।
ಅಲಂಬುಸಾ ಕುಹುಶ್ಚೈವ ಶಂಖಿನೀ ದಶಮೀ ಸ್ಮೃತಾ ।
ಏತನ್ನಾಡೀಮಹಾಚಕ್ರಂ ಜ್ಞಾತವ್ಯಂ ಯೋಗಿಭಿಃ ಸದಾ ।

ತರುವಾಯ ಯಾವ ನಾಡಿಯು ಯಾವ ದ್ವಾರದಲ್ಲಿ ಆಶ್ರಯಪಡೆದಿದೆ ಎಂಬುದನ್ನು ವಿವರಿಸುತ್ತ, 'ಇಡಾ ಪಿಂಗಲಾ ಸುಷುಮ್ನಾಃ ಪ್ರಾಣಮಾರ್ಗೇ ಚ ಸಂಸ್ಥಿತಾಃ। ಇಡಾ ಪಿಂಗಲಾ ಸುಷುಮ್ನಾ ಈ ಬೀಜ ನಾಡಿಗಳು ಪ್ರಾಣದ ಮಾರ್ಗದಲ್ಲಿ ಇರುತ್ತವೆ– ಎಂಬುದನ್ನು ತಿಳಿಸುತ್ತದೆ.

ಈ ನಾಡಿಗಳು ಅತ್ಯಂತ ಸೂಕ್ಷ್ಮವಾದ ಪಾರದರ್ಶಕವಾದ ದ್ರವ್ಯಗಳಿಂದ ನಿರ್ಮಾಣವಾಗಿದ್ದು ಆತ್ಮಶಕ್ತಿಯ ಸೂಕ್ಷ್ಮ ಪ್ರವಾಹಗಳನ್ನು ಒಯ್ಯುವ ಕಾಲಿವೆಗಳಾಗಿರುತ್ತವೆ. ಇಡಾ ನಾಡಿಯು ಬಲಭಾಗದ ಅಂಡದಿಂದಲೂ ಪಿಂಗಲಾ ನಾಡಿಯು ಎಡಭಾಗದ ಅಂಡದಿಂದಲೂ ಪ್ರಾರಂಭವಾಗಿ ಮೂಲಾಧಾರದಲ್ಲಿ ಅಥವಾ ಆಧಾರ ಚಕ್ರದಲ್ಲಿ ಸುಷುಮ್ನಾ ನಾಡಿಯೊಡನೆ ಕೂಡಿಕೊಳ್ಳುತ್ತವೆ. ಈ ಮೂರು ನಾಡಿಗಳ ಸಂಗಮಕ್ಕೆ ತ್ರಿವೇಣಿ ಎಂದು ಕರೆಯುತ್ತಾರೆ. ಈ ಸಂಗಮವು ಹೃದಯ ಸ್ಥಾನದ ಅನಾಹತ ಚಕ್ರದಲ್ಲಿ ಮತ್ತೊಮ್ಮೆ, ಭ್ರೂಮಧ್ಯದ ಆಜ್ಞಾ ಚಕ್ರದಲ್ಲಿ ಇನ್ನೊಮ್ಮೆ ಉಂಟಾಗುತ್ತದೆ. ಮೂಲಾಧಾರದ ಪ್ರಥಮ ಸಂಗಮವು

ಅರಿವಿನ ತೀರ ಸುಷುಪ್ತಾವಸ್ಥೆಯನ್ನು ಸೂಚಿಸುತ್ತದೆ; ಅಲ್ಲಿ ಕುಂಡಲಿನಿ ಶಕ್ತಿಯು ವೃತ್ತಿತ್ರಯದಿಂದ ಆವೃತವಾಗಿ ಅವಿತುಕೊಂಡಿರುತ್ತದೆ. ಅನಾಹತದಲ್ಲಿಯ ಎರಡನೆಯ ಸಂಗಮವು ಜಾಗ್ರತ ಅರಿವಿನ ಅವಸ್ಥೆಯನ್ನು ವ್ಯಕ್ತಗೊಳಿಸುತ್ತದೆ; ಅಲ್ಲಿ ತ್ರಿಗುಣಗಳಾದ ಸತ್ವ–ರಜ–ತಮಗಳು ಸಂತತವಾಗಿ ಮಾರ್ಪಾಟವನ್ನು ಪಡೆಯುತ್ತಿರುತ್ತವೆ. ಆಜ್ಞೆಯವಲ್ಲಿಯ ಮೂರನೆಯ ಸಂಗಮವು ಅರಿವಿನ ತೀರ ಮೇಲಿನ ಉನ್ನತವಾದ ಅವಸ್ಥೆಯ ಪ್ರತೀಕವಾಗಿರುತ್ತದೆ; ಅಲ್ಲಿ ನಾದ–ಬಿಂದು-ಕಳೆಗಳು ಆತ್ಮಸಾಕ್ಷಾತ್ಕಾರದ ಹೆಬ್ಬಾಗಿಲಿಗೆ ಮಾರ್ಗದರ್ಶಕವಾಗಿರುತ್ತವೆ. ಯೋಗಶಾಸ್ತ್ರದಲ್ಲಿ ಮೊದಲಿನ ಎರಡು ಸಂಗಮಗಳಿಗಿಂತ ಮೂರನೆಯ ಸಂಗ-ಮಕ್ಕೆ ಅಗ್ರ ಸ್ಥಾನವುಂಟು ದೈವೀ ಪ್ರಕೃತಿಯ ಆಳದಲ್ಲಿ ನಿರಂತರವಾಗಿ ನುಡಿವ ಪ್ರಣವದ ಧ್ವನಿಗೆ ಯೋಗಶಾಸ್ತ್ರದಲ್ಲಿ 'ನಾದ' ಎಂದು ಹೆಸರು. ಚಿಮ್ಮಟಿಗೆ ಯನ್ನು ಬಾರಿಸಿ ಅದನ್ನು ನಿಲ್ಲಿಸಿದಾಗ ಹೊರಡುವ ಧ್ವನಿಯ ತರಂಗವು ನಾದ ವಲ್ಲ; ಹಾಗೆಯೇ ಕಿವಿಗಳನ್ನು ಮುಚ್ಚಿದಾಗ ಕೇಳಿಸುವ ಅಂತರಂಗದ ದನಿಯೂ ನಾದವಲ್ಲ. ಆತ್ಮನ ಅವಿರತವಾದ ಗತಿಯಲ್ಲಿ ಹೊರಹೊಮ್ಮುವ ತರಂಗಕ್ಕೆ, ಸ್ಪಂದನಕ್ಕೆ ನಾದವೆಂದು ಹೆಸರು.

ಮೂಗಿನ ಹೊರಳಿಗಳ ಮುಖಾಂತರವಾಗಿ ಸಿಧಾನವಾಗಿ ನಿರರ್ಗಳವಾಗಿ ನಿಚ್ಚಳವಾಗಿ ಉಸಿರಾಡಿಸುವಾಗ ಒಂದು ಸ್ವಾಭಾವಿಕವಾದ ದನಿಯು ಕೇಳಿ ಬರುತ್ತದೆ. ಇದು 'ಸೋಽಹಂ' ಧ್ವನಿಯು. ಇದರಲ್ಲಿಯ ನಾಮ ರೂಪಗಳನ್ನು ವ್ಯಕ್ತಗೊಳಿಸುವ 'ಸ'ಕಾರ 'ಹ'ಕಾರಗಳನ್ನು ಕಳೆದು ಗುರುತಿಸಿದಾಗ ಶುದ್ಧವಾದ ಸ್ವಯಂ ಪೂರ್ಣವಾದ ಸ್ವರವೊಂದು ಉಳಿಯುತ್ತದೆ. ಇದುವೇ 'ಓಂ'ಕಾರ. ನಾಮರೂಪ ರಹಿತವಾದ ಪರವಸ್ತುವನ್ನು ಸೂಚಿಸುವ ವರ್ಣವಾಗಿದೆ ಈ 'ಓಂ'ಕಾರವು. ಶಿವಯೋಗ ಪ್ರದೀಪಿಕೆಯಲ್ಲಿ 'ಓಂ' ಕಾರವನ್ನು ಕುರಿತಾದ ವರ್ಣನೆ ಇಂತಿದೆ:

ಸೋಽಹಂ ಕೃತ್ವಾತ್ಮಮಂತ್ರಂ ಸ್ವಪದ ಪರಪದಂ
ವ್ಯಕ್ತ ವರ್ಣದ್ವಯಂ ತತ್ ।
ವ್ಯಾಲುಂಪೇತ್ ವ್ಯಂಜನೆ ದ್ವೆ ಪುನರಪಿ ರಚಯೇತ್
ದಿವ್ಯಮೋಂಕಾರ ಮಂತ್ರಮ್ ॥

ಈ ಓಂಕಾರದ ನಿನಾದಕ್ಕೆ ಪ್ರಣವಧ್ವನಿ ಎಂದು ಕರೆಯುತ್ತಾರೆ. ಇದರ ಸ್ಥಾನವು ಆಜ್ಞಾಚಕ್ರದಲ್ಲಿರುವುದೆಂಬುದನ್ನು ಯೋಗಿಯು ಕಾಣುತ್ತಾನೆ. ಈ

ದೆಸೆಯಿಂದಲೇ ಯೋಗಿಯು ಭ್ರೂಮಧ್ಯದಲ್ಲಿ ತನ್ನ ಲಕ್ಷ್ಯವನ್ನು ನಿಲ್ಲಿಸಿ ಧ್ಯಾನ ವನ್ನು ಬೆಳಸಿಕೊಳ್ಳುವನು. ಅದರಿಂದಾಗಿ ವಿದ್ಯುತ್ ಸಾಮರ್ಥ್ಯವನ್ನು ಹೊಂದಿ ದಿವ್ಯ ದೃಷ್ಟಿಯನ್ನು ಜಾಗ್ರತಗೊಳಿಸಿಕೊಳ್ಳುವನು. ಈ ದಿವ್ಯ ದೃಷ್ಟಿಗೆ ಶಿವಯೋಗ ಶಾಸ್ತ್ರದಲ್ಲಿ ತೃತೀಯ ನೇತ್ರ, ಮೂರನೆಯ ಕಣ್ಣು, ಮೀನ್‌ಕಣ್, ಅನಿಮಿಷ ದೃಷ್ಟಿ, ಅಧ್ಯಾತ್ಮಪ್ರಕಾಶ ಎಂದು ಬಗೆಬಗೆಯಾಗಿ ಹೆಸರನ್ನು ಕೊಡ ಲಾಗಿದೆ ಎಂಬುದನ್ನು ಹಿಂದೆಯೇ ತಿಳಿಸಿದೆ.

ಮೀನಕಣ್ ಪರವಸ್ತುವಿನ ನಿಚ್ಚ ಎಚ್ಚರಿಕೆಯಿಂದ ಕೂಡಿದ ಅರಿವಿನ ದೃಷ್ಟಿಯ ಪ್ರತೀಕವಾಗಿದೆ. ಯೋಗಶಾಸ್ತ್ರದಲ್ಲಿ ಈ ಕಣ್ಣಿಗೆ 'ಬಿಂದು' ಎಂದು ಹೆಸರು; ಇದು ಪ್ರಕಾಶರೂಪವಾಗಿರುತ್ತದೆ. ಇದು ಖಗೋಲದಲ್ಲಿರುವ ತೇಜಃ-ಪುಂಜವಾದ ಗ್ರಹ ನಕ್ಷತ್ರ ತಾರೆಗಳ ಪ್ರಾಕೃತಿಕ ಪ್ರಕಾಶವಲ್ಲ; ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಾಗ ಕಾಣುವ ಅಂತರಂಗದ ಪ್ರಕಾಶವೂ ಇದಲ್ಲ; ಇದು ಅರಿವಿನ ಪ್ರಕಾಶ ಅಥವಾ ಸಂವಿತ್‌ಪ್ರಕಾಶವಾಗಿರುತ್ತದೆ. ಇದು ಪರಾಪರ ವಸ್ತುವಿನ ಸ್ವ-ವಿಮರ್ಶೆಯ ಪ್ರಕಾಶವಾಗಿದೆ. ಇದು ವಿಶ್ವದ ಮುಖಾಂತರವಾಗಿ ತನ್ನ ಪ್ರಭೆಯನ್ನು ಎಡೆವಿಡದೆ ಹೊರಚಿಮ್ಮುತ್ತಿರುವ, ಇಂದ್ರಿಯಗಳಿಗೆ ನಿಲುಕದ ಆದರೂ ಅತೀಂದ್ರಿಯ ಅವಸ್ಥೆಗೆ ಅವಗತವಾಗದೆ ಇರದ ದಿವ್ಯಪ್ರಕಾಶವಾಗಿರು ತ್ತದೆ. ಆದುದರಿಂದ ಜೀವನದ ಉಸಿರು ಎಂದೆನಿಸಿದ ಪ್ರಣವವು ಸಾಧಿಸಿಕೊಡುವ ಈ ತೇಜಃಪುಂಜವಾದ ಪ್ರಭೆಯು ಅನಂತವೂ ನಿತ್ಯವೂ ಸತ್ಯವೂ ಆಗಿದೆ, ಅಪಾರವಾದ ಸಂವಿತ್‌ಸ್ವರೂಪವೂ ಆಗಿದೆ. ಶಿವಯೋಗಸಿದ್ಧನಾದ ಅಲ್ಲಮ ಪ್ರಭುದೇವನು ಸಿದ್ಧರಾಮ ಶಿವಯೋಗಿಗೆ ಬೋಧಿಸಿದ ತನ್ನ ಮಂತ್ರಗೋಪ್ಯದಲ್ಲಿ ಈ ಪ್ರಕಾಶದ ಅಚ್ಚುಕಟ್ಟಾದ, ಅರ್ಥಪೂರ್ಣವಾದ ವಿವರಣೆಯನ್ನು ಕೊಡುತ್ತಾನೆ:

ನಿಟ್ಟಿಲ ಭ್ರೂಮಧ್ಯದ ಸ್ಫಟಿಕವರ್ಣದ ಜ್ಯೋತಿ
ಘಟದೊಳಗೆ ತಾನಾಗಿ ತೊಳಗಿ ಬೆಳಗಿ ।
ವಟವೃಕ್ಷದಾ ಕೆಳಗೆ ಲೋಕಾದಿ ಲೋಕಗಳು
ಘಟಿಕೆಯಂತಡಗಿದ ಪರಾತ್ಪರವಿದು ॥

ನಾದವು ಪರವಸ್ತುವಿನ ಉಸಿರು, ಇದು ಅವನ ಸತ್‌ಸ್ವರೂಪವನ್ನೂ ಬಿಂದುವು ಅವನ ಪ್ರಕಾಶ, ಇದು ಅವನ ಚಿತ್‌ಸ್ವರೂಪವನ್ನೂ; ಮತ್ತು ಕಲೆಯು ಅವನ ಆನಂದ, ಇದು ಅವನ ಆನಂದ ಸ್ವರೂಪವನ್ನೂ ವ್ಯಕ್ತಗೊಳಿಸುತ್ತದೆ.

ಯೋಗಶಾಸ್ತ್ರದಲ್ಲಿ ಕಲೆಯನ್ನು ಸ್ವಾತಂತ್ರ್ಯಶಕ್ತಿ ಎಂದು ಬಣ್ಣಿಸಲಾಗಿದೆ. ಆನಂದ ಸ್ವರೂಪವಾದ ಚಿತ್‌ಶಕ್ತಿಯ ಪರವಾಗಿಯೇ ಈ ವರ್ಣನೆಯಿರುತ್ತದೆ. ಇದರಿಂದ ನಾದ–ಬಿಂದು–ಕಳೆಗಳು ಪರವಸ್ತುವಿನ 'ಅಸ್ಮಿ ಪ್ರಕಾಶೆ ಸಂದಾಮಿ' ಎಂಬ ಸ್ವ-ವಿಮರ್ಶೆಯಲ್ಲಿ ವ್ಯಕ್ತವಾಗುವ ಸಚ್ಚಿದಾನಂದ ಸ್ವರೂಪವನ್ನು ನಿರೂಪಿಸುತ್ತವೆ ಎಂಬುದು ಸ್ಪಷ್ಟವಾಗುತ್ತದೆ. ತೋರಿಕೆಗೆ ಇವು ಮೂರೂ ಭಿನ್ನ ಪದಗಳಾಗಿ ಕಂಡರೂ ಅರಿವಿಗೆ ಆಧಾರವಾಗಿ ಇರುವುದು ಒಂದೇ ಒಂದು ವಸ್ತು. ಶಿವಯೋಗದಲ್ಲಿ ಇದನ್ನು 'ಲಿಂಗ' ಎಂಬ ಪದದಿಂದ ವಚನಿಸಿದ್ದಾರೆ. ಶಿವಶರಣರ ಅನುಭವದ ವಚನಗಳಲ್ಲಿ ಲಿಂಗವನ್ನು ನಾದ ಬಿಂದು ಕಲಾಸ್ವರೂಪವೆಂದು ವರ್ಣಿಸಿದ್ದಾಗಿದೆ. ಅನಿರ್ವಾಚ್ಯವಾದ ಲಿಂಗವು ನಾದ ಬಿಂದು ಕಲಾತೀತವಾಗಿದೆ ಯೆಂದೂ ಬಣ್ಣಿಸಿದ್ದಾಗಿದೆ. ಅಲ್ಲಮ ಪ್ರಭುದೇವರು ಸಹಸ್ರಾರದಲ್ಲಿ ಈ ಲಿಂಗದ ಸ್ಥಾನವನ್ನು ಗುರುತಿಸಿರುವರು:

ಉನ್ಮನಿಯ ಜ್ಯೋತಿ ಬ್ರಹ್ಮರಂಧ್ರದ ಮೇಲೆ ಸಹಸ್ರದಳ ಪದ್ಮ,
ಅಲ್ಲಿ ಅಮೃತವಿಹುದು.
ಅಲ್ಲಿ ಓಂಕಾರ ಸ್ವರೂಪನಾಗಿ ಗುಹೇಶ್ವರಲಿಂಗವು ನದಾ ಸನ್ನಿಹಿತನು.

ಬ್ರಹ್ಮರಂಧ್ರದ ಕೊನೆಯ ಮರ್ಮಾದಿ ಮರ್ಮವನು
ನಿರ್ಮಲನು ನಿರ್ದೇಹಿ ತಾಂ ಬಲ್ಲನು ।
ಮರ್ಮವರಿದಾ ನಿತ್ಯ ನಿರ್ಮಲಂಗಲ್ಲದೆ
ಕರ್ಮಿ ಭೂಭಾರಿಗಳಿಗಿದು ಸಲ್ಲದು ॥

ಶಿವಯೋಗಸಾಧನೆಯಿಂದ ಮಲವನ್ನು ಪರಿಹರಿಸಿಕೊಂಡು ನಿರ್ಮಲ ತನುವನ್ನು ಪಡೆದ, ಮಾಂಸ ಪಿಂಡವಳಿದು ಮಂತ್ರಪಿಂಡವನ್ನು ಗಳಿಸಿದ ಶಿವಯೋಗಿಯು ಹೀಗೆ ಸಹಸ್ರಾರದಲ್ಲಿ ಅಡಗಿರುವ ಸಾಮರ್ಥ್ಯವನ್ನು ಕಾಣಬಲ್ಲನು.

ನವಚಕ್ರಗಳಲ್ಲಿ ಮಿದುಳಿನಲ್ಲಿ ಮೂರು ಮತ್ತು ಶರೀರದ ಉಳಿದ ಭಾಗ-ಗಳಲ್ಲಿ ಆರು ಚಕ್ರಗಳಿರುತ್ತವೆ. ಇವುಗಳಲ್ಲಿ ಮಿದುಳಿನ ಮಧ್ಯಭಾಗದಲ್ಲಿ ಎಂದರೆ ನಡು ನೆತ್ತಿಯಲ್ಲಿ ಬ್ರಹ್ಮ ಇಲ್ಲವೆ ಸಹಸ್ರಾರ ಚಕ್ರವೂ ಇದರ ತರುವಾಯ ಮಸ್ತಕಾಗ್ರದಲ್ಲಿ ಶಿಖಾಚಕ್ರವೂ, ಇದಕ್ಕೂ ಮುಂದೆ ತಲೆಯ ಹಿಂಭಾಗದಲ್ಲಿ ಪಶ್ಚಿಮ ಚಕ್ರವೂ ಇದೆ ಎಂದು ತಿಳಿಸಲಾಗಿದೆಯಷ್ಟೆ! ಶರೀರ ಶಾಸ್ತ್ರ ದೃಷ್ಟಿಯಿಂದ ಇವು ಮೂರೂ ನಿಯಂತ್ರಕ ಕೇಂದ್ರಗಳಾಗಿರುತ್ತವೆ. ಅಧ್ಯಾತ್ಮಶಾಸ್ತ್ರ ದೃಷ್ಟಿಯಿಂದಲೂ

ಅಷ್ಟೆ! ಸಹಸ್ರಾರವು ಆಧಾರ ಸ್ವಾಧಿಷ್ಠಾನ ಚಕ್ರಗಳಿಗೂ, ಶಿಖೆಯು ಮಣಿ-ಪೂರಕ ಅನಾಹತ್ ಚಕ್ರಗಳಿಗೂ ಮತ್ತು ಪಶ್ಚಿಮ ಚಕ್ರವು ವಿಶುದ್ಧಿ ಆಜ್ಞಾ ಚಕ್ರಗಳಿಗೂ ಸಂಬಂಧಿತವಾಗಿ ಅವನ್ನು ನಿಯಂತ್ರಿಸುತ್ತವೆಯೆಂದು ಕೆಲವರು ತಿಳಿಸುತ್ತಾರೆ. ಇದರಿಂದ ಆಯಾ ಸ್ಥಾನವಲ್ಲಿ ಪಡೆದ ಅನುಭವದ ಮೂಲಕ್ಕೆ ಈ ಮೂರು ಚಕ್ರಗಳು, ಶಕ್ತಿಯ ಕೇಂದ್ರಗಳು ಆಧಾರಸ್ತಂಭವಾಗಿರುತ್ತವೆ ಎಂದು ಗೊತ್ತಾಗುವದು.

ಶಿವಯೋಗದಾಚರಣೆಯಿಂದ ಸಹಸ್ರಾರವು ಜಾಗ್ರತವಾದಾಗ ಶಕ್ತಿಯ ಎಲ್ಲ ಕೇಂದ್ರಗಳಲ್ಲಿ ಇದು ಅತ್ಯಧಿಕವಾದ ಪ್ರಕಾಶದಿಂದ ಕೂಡಿಕೊಂಡು ಥಳಥಳಿಸುತ್ತದೆ ಎಂಬ ಅನುಭವವನ್ನು ಶಿವಯೋಗಿಯು ಪಡೆಯುವನು. ಸಾಧನೆಯ ಪ್ರಖರತೆಯನ್ನು ಅವಲಂಬಿಸಿ ಈ ಪ್ರಕಾಶವು ವಿವಿಧ ಸ್ವರೂಪದಲ್ಲಿ ತೋರುವುದೆಂದು ಶಿವಯೋಗಿಗಳು ಬಣ್ಣಿಸುತ್ತಾರೆ. ಈ ಪ್ರಕಾಶಕ್ಕೆ ಷಣ್ಮುಖಸ್ವಾಮಿಯು ತನ್ನ (ಅಖಂಡೇಶ್ವರ) ವಚನದಲ್ಲಿ, ಪ್ರಾಣಲಿಂಗದ ಕಳೆಯೆಂದು ಕರೆಯುತ್ತಾನೆ. ಇದು ಆಧಾರದಲ್ಲಿ ಎಳೆಯ ಸೂರ್ಯನಂತೆ, ಸ್ವಾಧಿಷ್ಠಾನದಲ್ಲಿ ಪೌರ್ಣಿಮೆಯ ಚಂದ್ರನಂತೆ, ಮಣಿಪೂರಕದಲ್ಲಿ ಮಿಂಚಿನ ಲತೆಯಂತೆ, ಅನಾಹತದಲ್ಲಿ ಸ್ಫಟಿಕದ ಶಲಾಕೆಯಂತೆ, ವಿಶುದ್ಧಿಯಲ್ಲಿ ಮೌಕ್ತಿಕದ ಗೊಂಚಲಂತೆ, ಆಜ್ಞೆಯದಲ್ಲಿ ರತ್ನ ದೀಪ್ತಿಯಂತೆ, ಬ್ರಹ್ಮರಂಧ್ರದಲ್ಲಿ ಸ್ವಯಂಜ್ಯೋತಿಯಂತೆ, ಶಿಖೆಯಲ್ಲಿ ಶುದ್ಧ ತಾರೆಯಂತೆ, ಪಶ್ಚಿಮದಲ್ಲಿ ಉಳುಕ ನಕ್ಷತ್ರ (ಬಾಲಚಿಕ್ಕೆ)ಯಂತೆ ತಳತಳ ಹೊಳೆಯುತ್ತಿರುವುದೆಂದು ಆತನು ತಿಳಿಸುತ್ತಾನೆ. ಅವರ್ಣನೀಯವಾದ ಬಣ್ಣ ಬಣ್ಣದ ಪರಿಣಾಮದಿಂದ ಪ್ರಭಾವಿಯಾಗಿ ತೋರುವ ಈ ಪ್ರಕಾಶವು ಅತ್ಯಂತ ತ್ವರಿತ ಗತಿಯ ಸ್ಫುರಣಜ್ಞಾನದ ಕಣಿಯಾಗಿ ಕಂಗೊಳಿಸುವದು. ಆದ್ದರಿಂದ, ಸಹಸ್ರಾರ ಚಕ್ರದಲ್ಲಿ ನಿಂತು ಕೈಕೊಳ್ಳುವ ಅನುಸಂಧಾನದಿಂದ ಅಳವಡುವ ಅನುಭವವನ್ನು 'ಸತ್ಯಂ ಋತಂ ಬೃಹತ್' ಎಂದು ಬಗೆಬಗೆಯಾಗಿ ವರ್ಣಿಸಿರುವರು. ಉನ್ಮನಿಯ ನಿಲವಿನಲ್ಲಿ ಅಂಕುರಗೊಂಡು ವಿಶಾಲವಾದ ವೈಭವದಿಂದ ಕೂಡಿಕೊಂಡಿರುವ ಶಿವಯೋಗಿಯ ಈ ಅರಿವು ಶಿವಲಿಂಗದ ನಿರ್ನಿಮೇಷದೃಷ್ಟಿಯ ನೋಟದಿಂದ ಕರಿಗೊಳ್ಳುವದು. ಇದರಿಂದ ಯೋಗಶಾಸ್ತ್ರವು ಒಂದು ಮಾಟವಲ್ಲ, ಮರಡಿಯೂ ಅಲ್ಲ, ಇದು ಮೋಡಿಕಾರರ ವಿದ್ಯೆಯೂ ಅಲ್ಲ; ಆದರೆ ಸ್ವಾನುಭಾವದ ಸಾಧನೆಗಾಗಿ ಅವಿರತವಾದ ಅನುಪಮವಾದ ಪ್ರಯತ್ನವನ್ನೂ ಫಲವನ್ನೂ ವ್ಯಕ್ತಗೊಳಿಸುವ ಒಂದು ವಿದ್ಯೆಯಾಗಿದೆ. ಇದು ಸಹಸ್ರಾರ ಚಕ್ರದಲ್ಲಿ, ಆ ಚಕ್ರದ

ಮುಖಾಂತರವಾಗಿ ಅಳವಡಿಸಿಕೊಳ್ಳುವ ಸ್ವಾನುಭವ ಸಂಪಾದನೆಯ ರೀತಿಯನ್ನು ಬೋಧಿಸುವ ವಿದ್ಯೆಯಾಗಿದೆ. ಈ ವಿದ್ಯೆಯು ಅತ್ಯದ್ಭುತವಾದ ಶಕ್ತಿ ಸಿದ್ಧಿಗಳನ್ನು ಕರಗತ ಮಾಡಿಕೊಡುವ ದಿವ್ಯ ಮಾನದಂಡವಾಗಿದೆ. ಇಂತಹ ವಿದ್ಯೆಯನ್ನು ಇಂತಹ ಅನುಭವವನ್ನು ಇಂತಹ ಸಿದ್ಧಿ ಸಾಮರ್ಥ್ಯವನ್ನು ಪಡೆದುಕೊಂಡಿರು-ವಾತನೇ ದಿವ್ಯಾತ್ಮನು, ಶಿವಯೋಗಿಯು.

ಶಿರಸ್ಥಾನದಲ್ಲಿ ಸಹಸ್ರಾರ ಚಕ್ರದಿಂದಾಚೆಗೆ ಶಿಖಾಚಕ್ರ ಪಶ್ಚಿಮಚಕ್ರ-ಗಳೆಂಬ ಇನ್ನೆರಡು ಶಕ್ತಿಯ ಕೇಂದ್ರಗಳನ್ನು ಶಿವಯೋಗ ಸಿದ್ಧರು ಕಂಡರೆಂಬು ದನ್ನೂ, ಸಹಸ್ರಾರ ಶಿಖಾ ಪಶ್ಚಿಮ ಚಕ್ರಗಳಲ್ಲಿ ನಿಗೂಢವಾದ ಶಕ್ತಿಯನ್ನು ಜಾಗ್ರತಮಾಡಿಕೊಳ್ಳಲು ನಿಷ್ಕಲ ಲಿಂಗ, ನಿಃಶೂನ್ಯ ಇಲ್ಲವೆ ಶೂನ್ಯ ಲಿಂಗ, ನಿರಂಜನ ಲಿಂಗ ಇವನ್ನು ಗುರುತಿಸಿ ಸಾಧನೆಗೆ ಅನುಕೂಲ ಮಾಡಿಕೊಂಡರೆಂಬು ದನ್ನೂ ಮತ್ತು ಈ ಸಾಧನೆಯಿಂದ ಅವರು ಸಿದ್ಧಿಸಿಕೊಂಡುದು ನಿರವಯಲ ಸ್ಥಲವೆಂಬುದನ್ನೂ ಈ ಪೂರ್ವದಲ್ಲಿಯೇ ತಿಳಿಸಲಾಗಿದೆ. ಯೋಗದ ಪರಿಭಾಷೆ ಯಲ್ಲಿ ಈ ಕೇಂದ್ರಗಳ ಮಹತಿಯನ್ನು ತಿಳಿದುಕೊಳ್ಳುವದು ಅವಶ್ಯವಿದೆ. ಶಿಖಾ-ಚಕ್ರವು ಉನ್ಮನಿಸ್ಥಾನವೆಂದು ಹಲವೆಡೆಗೆ ಉಲ್ಲೇಖಿಸಿರುವುದುಂಟು. ಮನವು ಸಾಧನೆಯಿಂದ ಔನ್ನತ್ಯವನ್ನು ಪಡೆದು ಘನಮನ ( Super-mind ) ಆಗ ಬೇಕು. ಯಾವ ಸ್ಥಾನದಲ್ಲಿ ನಿಂತು ಈ ವಿಶ್ವದ ಆಗು-ಹೋಗುಗಳನ್ನು ಅರಿತು ಅವನ್ನು ನಿಯಂತ್ರಿಸುವ ಸಾಮರ್ಥ್ಯವುಂಟಾಗುವದೋ, ಯಾವ ಸ್ಥಾನದಲ್ಲಿ ಭೂತ ಭವಿಷ್ಯತ್ತುಗಳು ನಿತ್ಯ ನವೀನವಾದ ವರ್ತಮಾನದಲ್ಲಿ ಪಡೆಮೂಡುವವೋ ಯಾವ ಸ್ಥಾನದಿಂದ ಹೊರಹೊಮ್ಮಿದ ಸತ್ಸಂಕಲ್ಪವು (Will) ವಿಶ್ವದ ಭವಿಷ್ಯ-ತ್ತನ್ನು ನಿರ್ಮಿಸಬಲ್ಲದೊ ಅದುವೆ ಉನ್ಮನಿಸ್ಥಾನವು. ಸಹಸ್ರಾರದ ತುರೀಯದ ತೊಟ್ಟಿಲಲ್ಲಿ ತೂಗುಯ್ಯಾಲೆಯಾಡುವ ಶಿವಯೋಗಿಯು ಈ ಶಕ್ತಿಯ ಕೇಂದ್ರದಲ್ಲಿ ಸ್ಫುರಿಸುವ ಪ್ರಭಾಸಾಮರ್ಥ್ಯವನ್ನು ಆಕುಲನ ಮಾಡಿಕೊಂಡು ತನ್ನ ಸತ್ಸಂಕ-ಲ್ಪವೇ ಸತ್ಕ್ರಿಯೆಯಾಗಿ ಮಾರ್ಪಡುವಂತೆ ಅನುಭವಗೊಳ್ಳುವನು.

ಪಶ್ಚಿಮ ಚಕ್ರದ ಅನುಸಂಧಾನದ ಮಹಿಮಾತಿಶಯವನ್ನು ಕುರಿತು ಶಿವ-ಶರಣರೂ ಶಿವಯೋಗಿಗಳೂ ಅನೇಕ ಬಗೆಯಾಗಿ ಕೊಂಡಾಡಿರುವರು. ಸರ್ಪ-ಭೂಷಣ ಶಿವಯೋಗಿಗಳು–'ಕಡು ಸಣ್ಣ ದ್ವಾರದಿಂದೆಸವ ಪಡುವಣ ದಿಕ್ಕಿನ ಗುಡಿ' 'ಜವದಿ ಪಶ್ಚಿಮ ದಿಕ್ಕಿನವನಿಯೊಳಿರುತಿರ್ಪ ತವೆ ಮೋಕ್ಷ ಸತಿಯನು ಭವದಿ' ವೆಂದುಮರೆ; 'ಆರು ಬೆಟ್ಟವ ದಾಂಟಿ ನಡೆದು ಮೂರು ಕೊಳ್ಳಕಿಳಿದು ಏರಿದೆನು

ಕೈಲಾಸ ದ್ವಾರವ, ಓಂ ಶ್ರೀ ಗುರುಸಿದ್ಧ, ನಾರಿ ಬಡಗಲು ಗುಡಿಯುಕಂಡೆನು.'
'ಕಡೆಗಂಗ ದೇಶದಿಂದೆ ಒಬ್ಬ ಮುನಿ ನಡೆದು ಕುಂತಳ ದೇಶಕೆ, ಪಡುವಲಿಹ ಗುಡಿಯು ಹೊಕ್ಕು ಅಲ್ಲಿರ್ದ ಮೃಡನೊಳಡಗಿದುದೆ ಕುರುಹು' ಎಂಬ ಮಾತು ಗಳಲ್ಲಿ ಪಶ್ಚಿಮ ಚಕ್ರವನ್ನು 'ಪಡುವಣ ಗುಡಿ' ಎಂದು ಕರೆದಿದ್ದಾರೆ. ಬಸವಣ್ಣನ

ಪಶ್ಚಿಮ ಪದ್ಮಾಸನದಲ್ಲಿ ಕುಳಿತು ನಿಟ್ಟೆಲುವ ಮುರಿದು
ತುಟಿ ಮಿಡುಕದೆ ಅಟ್ಟೆ ಆಡಿತ್ತಲ್ಲಾ.
ಬಿಟ್ಟ ಕಣ್ಣು ಬಿಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಕಟ್ಟಿ ಗುಡಿಯ
ಕೂಡಲ ಸಂಗಮದೇವ ಹಿಡಿವಡೆದ.

ಎಂಬ ವಚನವೂ, ಅಲ್ಲಮ ಪ್ರಭುದೇವರ

ಸ್ವಸ್ಥಾನ ಸುಸ್ಥಿರ ಸುಮನ ಮಂಟಪದೊಳಗೆ
ನಿತ್ಯ ನಿರಂಜನದ ಪ್ರಭೆಯು ಬೆಳಗು.
ಶಿವಯೋಗದನುಭಾವ ಏಕಾರ್ಥವಾಗೆ
ಗುಹೇಶ್ವರಾ, ನಿಮ್ಮ ಶರಣನು ಅನುಪಮ ಸುಖಿಯಾಗಿರ್ದನು.

ಎಂಬ ವಚನವೂ ಈ ಪಶ್ಚಿಮ ಚಕ್ರದ ಅನುಭವವನ್ನು ಕಂಡು ಹಾಡಿದವು ಗಳಾಗಿರುತ್ತವೆ.

ಅಕ್ಕಮಹಾದೇವಿಯು ಕಂಗಳ ನೋಟವನ್ನು ಕಾಯದ ಕರದ(ಲಿಂಗದ) ಲ್ಲಿರಿಸಿ ಅನುಸಂಧಾನಂಗೆಯ್ದು ಇಷ್ಟ–ಪ್ರಾಣ–ಭಾವಲಿಂಗ ಸಮರಸಿಯಾದಂದು ತಾನು ಕಂಡ ಪಶ್ಚಿಮದ ನಿಲವನ್ನು ಬಣ್ಣಿಸಿದ ರೀತಿಯಿದು:

ಪೆಚ್ಚಿ ಒಲಿದು ಮನವಗಲದೆ ಭಾವವು ।
ಬಿಚ್ಚದೆ ಬೇರೊಂದೆನಿಸದೆ ಪ್ರಾಣವು ।
ಬೆಚ್ಚಂತಿರ್ದುದು ಚಜ್ಜ್ಯೋತಿದ ಮಹಾಘನ ತಾನೆ ನೆಲೆಗೊಂಡು ॥
ಪಶ್ಚಿಮ ಮುಖದಲಿ ಬೆಳಗು ಪ್ರಕಾಶವು ।
ನಿಚ್ಚ ನಿರಂಜನ ಚನ್ನ ಮಲ್ಲಿಕಾರ್ಜುನಂ ।
ಗೆಚ್ಚರದೆತ್ತುವೆನಾರತಿಯಿಂ ಮನ ಛಲಿದಾರತಿಯ ॥

ಮನ ಪ್ರಾಣ ಭಾವಗಳು ಪರವಸ್ತುವಿನಲ್ಲಿ ಅಜ್ಜ್ಯೋತಿದಂತೆ ಬೆರೆತುಕೊಂಡಾಗ ಪಶ್ಚಿಮ ಚಕ್ರದಲ್ಲಿಯ ಸಾಮರ್ಥ್ಯವು ಹೊರಹೊಮ್ಮಿ ಸುತ್ತೆಲ್ಲ ಪರಮ ಪ್ರಕಾಶವೇ ತೋರುವದೆಂಬ ಆಕೆಯ ಅನುಭವವು ಭಕ್ತಿಯಿಂದ ಬೆಳಗುತ್ತಿದೆ.

ಅಖಂಡೇಶ್ವರ ವಚನ ಕರ್ತೃವಾದ ಷಣ್ಮುಖಸ್ವಾಮಿಯು ಬಹು ದೊಡ್ಡ ಶಿವಯೋಗಸಾಧಕನೂ ಅನುಭವಸಿದ್ಧನೂ ಆಗಿದ್ದನು. ಆತನ ವಚನಗಳಲ್ಲಿ ಕಂಡು ಬರುವ ಯೋಗ ಶಿವಯೋಗಗಳ ಬಗೆಗಿದ್ದ ಆವನ ಜ್ಞಾನ ಬರಿಯ ಜ್ಞಾನವಲ್ಲ, ಅದು ಅನುಭವಜ್ಞಾನ. ಶಿವಯೋಗ ದೃಷ್ಟಿಯಲ್ಲಿ ಆತನು ಪಡೆದ ಅನುಭವವನ್ನು ಅಚ್ಚೊತ್ತಿದಂತಹ ಶಬ್ದಗಳಲ್ಲಿ ಬಣ್ಣಿಸಿದ್ದಾನೆ. ಪಶ್ಚಿಮ ಚಕ್ರದಲ್ಲಿ ತಾನು ನಿಂತು ಆತ ಕಂಡ ಅನುಭವದ ಬೆಡಗು ಹೀಗೆ ಹೊರಹೊಮ್ಮುತ್ತದೆ:

ಪಶ್ಚಿಮದ ಗಿರಿಯಲ್ಲಿ ಚಿತ್ಸೂರ್ಯನುದಯವಾದುದ ಕಂಡೆ.
ಸುತ್ತ ಮುತ್ತಿದ ಕತ್ತಲೆಯೆಲ್ಲ ಅತ್ತಿತ್ತ ಹರಿದು ಹೋದುದ ಕಂಡೆ.
ಹತ್ತು ದಿಕ್ಕಿನ ಒಳಹೊರಗೆಲ್ಲ ಬೆಳಗಿನ ಮೊತ್ತವೇ ತುಂಬಿದುದ ಕಂಡೆ.
ಮುಚ್ಚಿದ ಕಮಲಂಗಳೆಲ್ಲ ಬಿಚ್ಚಿ ಅರಳಾಗೆ
ಹೊಚ್ಚ ಹೊಸ ಗಂಧ ದೆಸೆದೆಸೆಗೆ ಎಸೆದುದ ಕಂಡೆ.
ಇಂತಿದರ ಕುಶಲವ ಕಂಡು ಬೆರಗಾದೆನಯ್ಯಾ ಅಖಂಡೇಶ್ವರಾ.

ಪಶ್ಚಿಮ ಚಕ್ರದಲ್ಲಿ ಕೇಂದ್ರಿತವಾದ ಶಕ್ತಿಯು ಜಾಗ್ರತವಾದೊಡನೆ ಕಂಗೊಳಿಸುವ ಅದ್ಭುತವಾದ ಪ್ರಕಾಶದ ಬೊಬ್ಬುಳಿಯೇ ಸುತ್ತೆಲ್ಲ ಪಸರಿಸಿ ಕತ್ತಲೆಯ, ಅಜ್ಞಾನದ, ಮಾಯೆಯ ಮೊತ್ತವನ್ನೆಲ್ಲ ನಿವಾರಿಸಿದ ಅನುಭವವಿಲ್ಲಿದೆ. ನವಚಕ್ರದ ಕಮಲ ಪುಷ್ಪಗಳೆಲ್ಲ ಅರಳಿ ಅಲ್ಲಿನ ಚೈತನ್ಯ ಶಕ್ತಿಯು ಜಾಗ್ರತವಾಗಿ ಒಳಹೊರಗೂ ಸುಗಂಧ ಸೌರಭವೇ ಪಸರಿಸಿದ ಅನುಭವವನ್ನೂ ಆತನು ಕಂಡಿದ್ದಾನೆ. ಶಿವ-ಯೋಗಿಗಳೂ ಶಿವಶರಣರೂ ತಿಳಿಸಿ ಕೊಟ್ಟಿರುವ ತಮ್ಮ ಶಿವಯೋಗದ ಅನುಭವ ದಲ್ಲಿ ಸಹಸ್ರಾರ ಶಿಖಾ ಪಶ್ಚಿಮ ಚಕ್ರಗಳಲ್ಲಿ ಇಂತಹ ಅನುಪಮಮಾದ ಗುಹ್ಯಾತ್ ಗುಹ್ಯತರವಾದ ಸಾಮರ್ಥ್ಯವಿದೆಯೆಂಬುದನ್ನು ಕಂಡಿರುವರು ಎಂಬುದು ಗೊತ್ತಾಗುತ್ತದೆ.

ಶಿವಶರಣರ ವಚನಗಳಲ್ಲಿ ಅಣುಚಕ್ರ, ಅಣುಲಿಂಗ ಎಂಬ ಪದಗಳು ಆಗಾಗ ಬರುವುದುಂಟು. ಷಣ್ಮುಖ ಸ್ವಾಮಿಯಂತೆಯೇ ಸಂಗನಬಸವೇಶ್ವರ ಎಂಬ ಶಿವಯೋಗಿಯು ತನ್ನ ವಚನಗಳಲ್ಲಿ ನವಚಕ್ರಂಗಳಲ್ಲಿ ಸ್ಥಾಪ್ಯನಾದ ನವಲಿಂಗಪೂಜೆಯ ಕ್ರಮವನ್ನು ವಿಶದವಾಗಿ ವಿವರಿಸುತ್ತ ಕೊನೆಯಲ್ಲಿ ಅಣು-ಲಿಂಗದ ಬಗೆಗೆ ತಿಳಿಸಿದ್ದಾನೆ. ಅದು 'ಅಣುಚಕ್ರವೆಂಬ ಪರಮ ಕೈಲಾಸ ಚಿದಾ-ಕಾಶ ಮಂಡಲದ ವರ ಚೌಕಮಂಟಪದ ನವರತ್ನಖಚಿತ ಶೂನ್ಯ ಸಿಂಹಾಸನ

ಪೀಠದಲ್ಲಿ ಮೂರ್ತಿಗೊಂಡಿರ್ಪ ಪರಾತ್ಪರ ನಿಜಜಂಗಮ ಪರಾತ್ಪರ ಸ್ವರೂಪ, ಸರ್ವ ಚೈತನ್ಯಾಧಾರ ಸ್ವರೂಪವಾದ ಅಣುಲಿಂಗ' ಎಂದು ಬಣ್ಣಿಸುತ್ತಾನೆ. ಇದರಿಂದ ಸಹಸ್ರಾರ ಶಿಖಾ ಪಶ್ಚಿಮ ಚಕ್ರಗಳಲ್ಲಿ ಪಡೆದ ಅನುಭವದ ನಿಲವಿಗೆ ಆಧಾರವಾದ ಬರಿಯ ಬಯಲು, ನಿರ್ಬಯಲು ಅಣುಚಕ್ರವೆಂದು ಸಂಕೇತ ಪಡೆದಿರುವುದೆನ್ನಬೇಕಾಗುವುದು. ಕೇವಲ ಶುದ್ಧ ಜ್ಞಾನಾಶ್ರಯವಾದ, ಅರಿವಿನ ಕೇಂದ್ರವಾದ ಇದು ಅನುಭವಗಮ್ಯವಾದುದೆಂದು ಶಿವಯೋಗಿಗಳು ಹೇಳುತ್ತಾರೆ. ನಿರಾಳ ಮಂತ್ರಗೌಪ್ಯವೆಂಬ ಹೆಸರಿನ ಅಪ್ರಕಟಿತವಾದ ಒಂದು ವಚನಗ್ರಂಥದಲ್ಲಿ ಈ ಅಣುಚಕ್ರದ ಮಹತಿಯ ಬಗೆಗೆ ಅಮೌಲ್ಯವಾದ ಮಾತುಗಳನ್ನು ಕಾಣಬಹುದು. ಈ ಚಕ್ರವನ್ನು ಉಲ್ಲೇಖಿಸುವ ಐದು ವಚನಗಳಲ್ಲಿ ನವಚಕ್ರಗಳ, ವಿಶೇಷವಾಗಿ ಆಜ್ಞೆಯಿಂದುಪರಿಯಾದ ಮೂರು ಚಕ್ರಗಳ, ನಿಲವಿನಲ್ಲಿ ಸಾಧಕನು ಸಿದ್ಧಾವಸ್ಥೆಗೇರುವ ಕ್ರಮದ ರಹಸ್ಯವೂ, ಅಲ್ಲಿ ಅನುಭವಗೋಚರವಾಗುವ ಜ್ಞಾನದ ಪರಿವಿಡಿಯೂ, ಮೂಡಿ ಬರುವ ದಿವ್ಯಪ್ರಭೆಯೂ ಬಿತ್ತರಿಸಲ್ಪಟ್ಟಿರುತ್ತವೆ.

ಹೃದಯದಲ್ಲಿಪ್ಪ ಪ್ರಾಣಲಿಂಗವನು ತ್ರಿಕೂಟದಲ್ಲಿ ತಂದು,
ಆ ತ್ರಿಕೂಟದಲ್ಲಿಪ್ಪ ಆತ್ಮಲಿಂಗವನು ಬ್ರಹ್ಮರಂಧ್ರದಲ್ಲಿ ತಂದು,
ಆ ಬ್ರಹ್ಮರಂಧ್ರದಲ್ಲಿಪ್ಪ ಮಹಾಜ್ಞಾನವನ್ನು ಶಿಖಾಚಕ್ರದಲ್ಲಿ ತಂದು,
ಆ ಶಿಖಾಚಕ್ರದಲ್ಲಿಪ್ಪ ಸ್ವಯಜ್ಞಾನವನು ಪಶ್ಚಿಮ ಚಕ್ರದಲ್ಲಿ ತಂದು,
ಆ ಪಶ್ಚಿಮ ಚಕ್ರದಲ್ಲಿಪ್ಪ ನಿರಂಜನವನೆ ಅಣುಚಕ್ರಕ್ಕೆ ತಂದು,
ಆ ಅಣುಚಕ್ರದಲ್ಲಿಪ್ಪ ಝೇಂಕಾರ ಲಿಂಗವನು
ನಿಶ್ಚಿತ ನಿರಾಕುಳದಲ್ಲಿ ತಂದು,
ತಾನು ತಾನಾಗಿಪ್ಪ ನೋಡಾ, ಝೇಂಕಾರ ನಿಜಲಿಂಗ ಪ್ರಭುವು.

'ಆಜ್ಞೆಯ ಚಕ್ರದಲ್ಲಿ ಪರಶಿವ ಜ್ಯೋತಿ, ಶಿಖಾಚಕ್ರದಲ್ಲಿ ಸ್ವಯಜ್ಞಾನ ಜ್ಯೋತಿ,
ಪಶ್ಚಿಮ ಚಕ್ರದಲ್ಲಿ ನಿರಂಜನ ಜ್ಯೋತಿ, ಅಣುಚಕ್ರದಲ್ಲಿ ಪರಬ್ರಹ್ಮಜ್ಯೋತಿ—
ಇಂತು ದಶ ಚಕ್ರಂಗಳನರಿತು ನಿಶ್ಚಿಂತ ನಿರಾಕುಳನಾಗಿರ್ದ ನೋಡಾ,
ಝೇಂಕಾರ ನಿಜಲಿಂಗ ಪ್ರಭುವು.'

ಷಣ್ಮುಖಸ್ವಾಮಿಯು ಒಂದು ವಚನದಲ್ಲಿ 'ಬ್ರಹ್ಮರಂಧ್ರವೆಂಬ ಸಹಸ್ರದಳ ಮಂಟಪದಲ್ಲಿ ಮೂರ್ತಿಗೊಂಡಿದ್ದ ನಿಷ್ಕಲಲಿಂಗ, ಶಿಖಾಚಕ್ರವೆಂಬ ತ್ರಿದಳ ಮಂಟಪದಲ್ಲಿ ಮೂರ್ತಿಗೊಂಡಿದ್ದ ಶೂನ್ಯಲಿಂಗ ಮತ್ತು ಪಶ್ಚಿಮ ಚಕ್ರವೆಂಬ

ಏಕದಳ ಮಂಟಪದಲ್ಲಿ ಮೂರ್ತಿಗೊಂಡಿದ್ದ 'ನಿರಂಜನ ಲಿಂಗ' ಇವಕ್ಕೆ ಅರ್ಪಿಸ ಬೇಕಾಗಿದ್ದ ಅಷ್ಟವಿಧಾರ್ಚನೆಯನ್ನು ವಿಶದವಾಗಿ ವಿವರಿಸಿ 'ಎರಡಳಿದು ಅಲ್ಲಿಂದ ಮುಂದೆ ನೋಡಲು ಬಚ್ಚ ಬರಿಯ ಬಯಲು' ತೋರುವುದೆಂಬುದನ್ನು ಬಿಂಬಿ-ಸುತ್ತಾನೆ. ಈ 'ಬಚ್ಚ ಬರಿಯ ಬಯಲು' ನಿರ್ಬಯಲು ನಿರವಯಲು ನಿರವಯ ನಿರವಯಸ್ಥಲ ಎಂದು ವಿವಿಧವಾಗಿ ನಿರ್ದೇಶಿಸಲ್ಪಟ್ಟಿರುತ್ತದೆ. ಇದೇ ಮಾತನ್ನು ಆತನು ಮತ್ತೊಂದು ವಚನದಲ್ಲಿ ಸ್ಪಷ್ಟಗೊಳಿಸುತ್ತಾನೆ. ಶಕ್ತಿಯ ಕೇಂದ್ರಗಳೆನಿಸಿದ ನವಚಕ್ರಗಳು ಒಂದರಿಂದೊಂದು ಮುಡಿಕೊಳ್ಳುವ ಕ್ರಮ, ಅವುಗಳಿಗೆ ಸಂಬಂಧಿಸಿದ ದಳ ಕುಳ ಬೀಜಾಕ್ಷರಾದಿಗಳನ್ನೂ, ಆಯಾ ಕೇಂದ್ರಗಳಲ್ಲಿ ನಿಂತು ಆಳವಾಗಿ ಅನುಭವವನ್ನು ಪಡೆಯುತ್ತ ನಾಗಿದಂತೆ ಅವು ಒಂದರೊಳಗೊಂದು ಹೇಗೆ ಅಡಗುವವೆಂಬುದನ್ನೂ ಬಹು ಮಾರ್ಮಿಕವಾಗಿ ತಿಳಿಸಿರುವನು :

ಬಚ್ಚ ಬರಿಯ ಬಯಲೊಳಗೊಂದು
ಅಚ್ಚ ಅಂಕುರ ಹುಟ್ಟಿ ಅಣುಚಕ್ರವೆನಿಸಿತ್ತು.
ಆ ಅಣುಚಕ್ರದಿಂದಾಯಿತು ಪಶ್ಚಿಮಚಕ್ರ.
ಆ ಪಶ್ಚಿಮ ಚಕ್ರದಿಂದಾಯಿತು ಶಿಖಾಚಕ್ರ.
ಆ ಶಿಖಾಚಕ್ರದಿಂದಾಯಿತು ಬ್ರಹ್ಮಚಕ್ರ.
ಆ ಬ್ರಹ್ಮಚಕ್ರದಿಂದಾಯಿತು ಆಜ್ಞಾಚಕ್ರ. ...




ಎಂಬ ಸಂಗತಿಗಳನ್ನು ತಿಳಿಸಿ, ಆ ತರುವಾಯ ಆ ಆಜ್ಞೆ ಬ್ರಹ್ಮಚಕ್ರದಲ್ಲಿ, ಆ ಬ್ರಹ್ಮಚಕ್ರ ಶಿಖಾಚಕ್ರದಲ್ಲಿ, ಆ ಶಿಖಾಚಕ್ರ ಪಶ್ಚಿಮಚಕ್ರದಲ್ಲಿ, ಆ ಪಶ್ಚಿಮಚಕ್ರ ಅಣುಚಕ್ರದಲ್ಲಿ, ಆ ಅಣುಚಕ್ರ ನಿರವಯಲಲ್ಲಿ ಲಯವಾಗುವವೆಂಬುದನ್ನು ವಿವರಿಸಿ ನಿರವಯಲು ನಿಜವ ಕೂಡಿದಲ್ಲಿ ಸಹಜವಾಗುವದು ಎಂದು ಹೇಳಿರುವನು. ಈ ನಿಜವ ಕೂಡಿ ಸಹಜವಾದಂದು ಶಬ್ದಮುಗ್ಧ ಸ್ಥಿತಿಯೊದಗುವದು. ಇಂತಹ ಅವಸ್ಥೆಯಲ್ಲಿ ಮಾತು ಮೌನವಾಗುವದು.

ಜೀವನದ ಇರುವಿಕೆಯಲ್ಲಿ ದೇಹ ಆತ್ಮರು ಬಿಚ್ಚಿ ಬೇರಿಡಲಾರದಂತೆ ತಾದಾತ್ಮ್ಯವನ್ನು ಪಡೆದ್ದಾರೆ. ದೇಹವೇ ಆತ್ಮ ಎಂಬ ಭಾವವು ಬಲಿತು ಆತ್ಮನೊಬ್ಬನಿದ್ದಾನೆಂಬ ತಿಳಿವಳಿಕೆಯಿಲ್ಲದಂತೆ ನಿತ್ಯ ವ್ಯವಹಾರವು ನಡೆಯು-ತ್ತಿರುತ್ತದೆ. ಉಸಿರು ದೇಹ-ಆತ್ಮಗಳನ್ನು ಸಂಯೋಜಿಸುವ ತತ್ವವಾಗಿದೆ.

ದೇಹದಲ್ಲಿ ಪ್ರಾಣದ ಸುಳಿದಾಟವಿರುವತನಕ ಆತ್ಮಕ್ಕೆ ಅಲ್ಲಿ ಆಶ್ರಯವುಂಟು. ಪ್ರಾಣ ಹಾರಿದೊಡನೆ ದೇಹದಿಂದ ಆತ್ಮವೂ ಅಗಲುವದು. ಯೋಗಶಾಸ್ತ್ರವು ಪ್ರಾಣವನ್ನು ಉಸಿರನ್ನು ಒಂದು ಉಪಕರಣ ಒಂದು ಸಾಧನ ಎಂದು ತಿಳಿದು, ದೇಹ ಆತ್ಮರ ಹೊಲಿಗೆಯನ್ನು ಬಿಡಿಸ ಹೇಳಿ ಈ ದೇಹದಲ್ಲಿದ್ದುಕೊಂಡೇ ಆತ್ಮನ ಸ್ವರೂಪವನ್ನು ಕಾಣಲು ಕಲಿಸುತ್ತದೆ. ರತ್ನಾಕರವರ್ಣಿಯು "ಉಸಿರೆಂಬ ಕರಗಸ ದಿಂದ ದೇಹಾತ್ಮರ ಬೆಸುಗೆಯ ಬಿಡಿಸಿ ನೋಡಿದರೆ ಮುಸುಳದೆ ತೋರ್ಪ ಮಹಾತ್ಮನೆ ಎನಗೊಳ್ಪನೆಸಗು ನಿರಂಜನಸಿದ್ಧಾ" ಎಂದು ದೇಹಾತ್ಮರು ಒಡವೆರೆದು ಕೂಡಿರುವುದನ್ನು ಉಸಿರಿನ ಮುಖಾಂತರ ಅಗಲಿಸಿ ಆತ್ಮನನ್ನು ಅರಿಯಬೇಕೆಂದು ಹೇಳಿರುವನು. ಸಾಮಾನ್ಯವಾಗಿ ಇಡಾ ಪಿಂಗಳಾ ದ್ವಾರದಿಂದ ಮೂಗಿನ ಎರಡೂ ಹೊರಳೆಗಳ ಮುಖಾಂತರವಾಗಿ ಎಡೆಯಾಡುವ ಉಸಿರು ಪುಪ್ಪುಸಗಳನ್ನು ಪ್ರವೇಶಿಸಿ ದೇಹದ ಸ್ವಾಸ್ಥ್ಯವನ್ನು ನೋಡಿಕೊಳ್ಳಲು ಅನುವಾಗುತ್ತದೆ. ಈ ಉಸಿರಿನ ಓಡಾಟವು ಕ್ರಮಬದ್ಧವಾಗಿರುವುದಿಲ್ಲ. ಆದ್ದರಿಂದ ದೇಹವು ರೋಗರುಜಿನಗಳಿಗೆ ತುತ್ತಾಗುವದು. ಇದನ್ನು ತಪ್ಪಿಸಿಕೊಳ್ಳಲು ಹಠಯೋಗವು ನಾಡಿಶುದ್ಧಿಯನ್ನೂ ತನ್ಮೂಲಕ ದೇಹಶುದ್ಧಿಯನ್ನೂ ಗುರಿಯಾಗಿಟ್ಟುಕೊಂಡಿರುತ್ತದೆ. ಗೋರಕ್ಷನು ಪಡೆದುಕೊಂಡಿದ್ದ ವಜ್ರಶರೀರವು ಹಠಯೋಗವು ಸಾಧಿಸಿ ಕೊಡುವ ಆತ್ಯಂತಿಕ ಗುರಿಯನ್ನು ವ್ಯಕ್ತಗೊಳಿಸುತ್ತದೆ.

ನಾಸಿಕ ದ್ವಾರದ ಹಿಂದಿನ ಮಗ್ಗಲು ಒಂದು ತೆಳುವಾದ ಪರದೆಯಿದ್ದು ಅದಕ್ಕೆ ಅತ್ಯಂತ ಸೂಕ್ಷ್ಮವಾದ ರಂಧ್ರವಿರುತ್ತದೆ ಎಂದು ಹೇಳುತ್ತಾರೆ. ಇದನ್ನು ಯೋಗಿಗಳು 'ಸುಷುಮ್ನಾ ರಂಧ್ರ' 'ಕಡುಸಣ್ಣ ದ್ವಾರ' ಎಂದು ಕರೆದಿರುವರು. ಪ್ರಾಣಾಯಾಮಾದಿ ಸಾಧನೆಯಿಂದ ಇಲ್ಲವೆ ಪೂರ್ವಜನ್ಮದ ಸಾಧನೆಯ ಸುಕೃತವಿಶೇಷದಿಂದ ಅಥವಾ ಇವೆರಡರಿಂದಲೂ ಒಮ್ಮೆ ಈ ರಂಧ್ರವು ಹಿಗ್ಗಿ ಹರವಾಯಿತೆಂದರೆ, ಈ ದ್ವಾರವು ತೆರೆಯಿತೆಂದರೆ ಮೂಗಿನಿಂದಾಡುವ ಉಸಿರು ಪುಪ್ಪುಸಗಳಿಗಿಳಿಯದೆ ನೇರವಾಗಿ ದಹರಾಕಾಶವೆಂದು ಕರೆಯಲಾದ ಮಿದುಳಿನ ಪೊಳ್ಳು ಭಾಗವನ್ನು ವ್ಯಾಪಿಸಿ ಅಲ್ಲಿಂದ ಅದು ಬೆನ್ನಹುರಿಯ ಮಣಿಗಳಲ್ಲಿ, ಮೇರುದಂಡದಲ್ಲಿ ಅಥವಾ ಸುಷುಮ್ನಾ ನಾಳದಲ್ಲಿ ಪ್ರವೇಶಿಸಿ ಅಲ್ಲಿ ಹರಿದಾಡಹತ್ತುವದು. ಆಗ ಚಕ್ಕನೆ ಬೆಳಕು ಬಿದ್ದು ಅಪೂರ್ವವಾದ ಒಂದು ಅನುಭವವು ಕಾಣಿಸಹತ್ತುವದು.

ಆಧಾರದ ನಿಚ್ಚಣಿಕೆಯನೇರಿ ನೋಡಲು,
ಮಂದಗಿರಿಯೆಂಬ ಮಹಾಪರ್ವತವ ಕಾಣಬಹುದು.
ಆ ಪರ್ವತದ ತುಟ್ಟತುದಿಯನೇರಿ ನೋಡಲು,
ಮಹದಾಕಾಶ ಮಂಟಪವುಂಟು.
ಆ ಮಂಟಪವ ಹೊಕ್ಕಿಹೆನೆಂದು ವಿಚಾರಿಸಿ ನೋಡಲು,
ಅಲ್ಲೊಂದು ಸೂಕ್ಷ್ಮ ದ್ವಾರವುಂಟು.
ಆ ಸೂಕ್ಷ್ಮ ದ್ವಾರ ಕವಾಟವ ತೆರೆದು ನೋಡಲು.
ಅಲ್ಲಿ ನಿರುಪಾಧಿಕ ಜ್ಯೋತಿ ಬೆಳಗುತ್ತಿಪ್ಪುದು.
ಆ ಬೆಳಗಿನೊಳಗೆ ಅಚಳವಾಗಿ ನಿಂದು ಪರಿಪೂರ್ಣ ಪೂಜೆಯಾಗಿ
ತನ್ನನೆ ನಿರಾಳಲಿಂಗಕ್ಕೆ ಪೂಜೆಯ ಮಾಡುವಾತನೆ
ಪರಮ ನಿರ್ವಾಣಿಯಯ್ಯಾ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

ಇಂತಹ ಅವಸ್ಥೆಯಲ್ಲಿ ಸಾಧನೆಯು ತೀವ್ರವಾದಂತೆ ಹಸಿವು ತೃಷೆಗಳು ಇಲ್ಲವಾಗಿ, ಆಹಾರ ನಿದ್ರಾದಿಗಳು ಅನವಶ್ಯಕವೆನಿಸಿ, ದೇಹಧರ್ಮವನ್ನು ಮೀರುವ ಪರಿಸ್ಥಿತಿಯೊದಗುವದು. ಇಂತಹ ಅನುಭವವನ್ನು ಪಡೆದ ಶಿವಯೋಗಿಯು ಸುಷುಮ್ನಾ ನಾಡಿಯ 'ಕುಹರದಗ್ರದಚಲ' ದಿಂದ 'ಸಾಲಿಟ್ಟು ಸುರಿತರ್ಪ' ಸುಷುಮ್ನೆಯ ಸುಧೆಯ ಸವಿದುಣ್ಣುವನಾದುದರಿಂದ ಆತನಿಗೆ ಆಹಾರದ ಅವಶ್ಯಕತೆಯೇ ಎನಿಸುವದಿಲ್ಲ. ಸುಷುಮ್ನೆಯ ಮುಖಾಂತರವಾಗಿ ಹರಿದಾಡುವ ಚಿದ್ರಸವು ದೇಹದ ನರನಾಡಿಗಳಿಗೆಲ್ಲ ಅಪ್ಯಾಯನವನ್ನು ನೀಡಿ ಅವನ್ನು ಸಬಲಗೊಳಿಸುವದು. ಹಾಗೆಯೇ ಸಂತತವಾಗಿ ಶಿವಯೋಗಸಮಾಧಿಯಲ್ಲಿ ಆತನು ಉಳಿದುಬಿಡುವುದರಿಂದ ಆತನಿಗೆ ನಿದ್ರೆ ನೀರಡಿಕೆಗಳೂ ಅವಶ್ಯವೆನಿಸುವದಿಲ್ಲ. ಬಗೆಬಗೆಯ ದೃಶ್ಯಗಳು, ನಾದ-ಪ್ರಕಾಶಗಳು, ಹಿಂದು ಮುಂದಿನ ಅರಿವುಗಳು ತೋರುವವು. ತ್ರಿಕಾಲಜ್ಞಾನಿಯ ನಿಲವು ಆ ಶಿವಯೋಗಿಯಲ್ಲಿ ನೆಲೆ ನಿಲ್ಲುವದು. ಆತನ ದೇಹವು ಕಾಂತಿಯುತವೂ, ಮುಖವು ಪ್ರಫುಲ್ಲಿತವೂ, ಕಣ್ಣುಗಳು ತೇಜಃಪುಂಜವೂ, ರೂಪವು ಆಕರ್ಷಕವೂ, ಧ್ವನಿಯು ಮಾಧುರ್ಯಯುಕ್ತವೂ, ಉಸಿರು ಸದ್ವಾಸನೆಯುಳ್ಳದೂ ಆಗಿ, ಒಂದು ಅನುಪಮವಾದ ಮೆರುಗು ಸುತ್ತಲೂ ಸೂಸುವದು. ನಯನಮನೋಹರವಾಗಿ ಸ್ಫುರದ್ರೂಪಿಯಾಗಿ ಶಿವಯೋಗಿಯ ವ್ಯಕ್ತಿತ್ವವು ಹೊರಹೊಮ್ಮುವದು.

ಕಾಲಲ್ಲಿ ಕಣ್ಣು ಮೂಡಿತ್ತ ಕಂಡೆ
ನೆತ್ತಿಯ ಕುಂಭವನೊಡೆದು ಸುಧೆ
ಸರ್ವಾಂಗದಲ್ಲಿ ಮೂಡಿತ್ತ ಕಂಡೆ.
ಕತ್ತಲೆ ಬೆಳಗಾಯಿತ್ತ ಕಂಡು ಬೆರಗಾದೆನಯ್ಯಾ, ಅಖಂಡೇಶ್ವರಾ.

ಎಂಬುದು ಅವನ ವ್ಯಕ್ತಿತ್ವದ ವೈಶಿಷ್ಟ್ಯವಾಗುವದು.

ಅಲ್ಲಮಪ್ರಭುವು ನಿರ್ವಯಲ ಸ್ಥಲವನ್ನು ಸಾಧಿಸಿ ನವಚಕ್ರದ ಕೀಲವನ್ನು ಬಲ್ಲವನಾದ ಬಯಲೊಡಲುಗನಾಗಿದ್ದನು, ವ್ಯೋಮಕಾಯಸಿದ್ಧನಾಗಿದ್ದನು. ಅವನು ಶಿವಯೋಗಿ ಅನಿಮಿಷಯ್ಯನ ಅಂಗೈಯ ಲಿಂಗವ ಪಡೆದು ಶಿವಯೋಗದ ಅನುಸಂಧಾನಕ್ಕೆ ನಿಲ್ಲುವ ಪೂರ್ವದಲ್ಲಿ ಮಂತ್ರ–ಲಯ–ಹಠ–ರಾಜಯೋಗಾದಿಗಳನ್ನೆಲ್ಲ ಆಚರಿಸಿದ್ದನು. ಅವನೊಬ್ಬ ಹಠಯೋಗ ಪರಂಪರೆಯ ಮಹಾಯೋಗಿಯೆಂದು ಹಠಯೋಗಪ್ರದೀಪಿಕೆಯು ನಿರೂಪಿಸುತ್ತಿದೆ:

ಅಲ್ಲಮ ಪ್ರಭುದೇವಶ್ಚ ಘೋಡಾ ಚೋಲೀ ಚ ಟಿಂಟಿಣಿಃ ।
ಭಾನುಕೀ ನಾರದೇವಶ್ಚ ಖಂಡಃ ಕಾಪಾಲಿಕಸ್ತಥಾ ॥
ಇತ್ಯಾದಯೋ ಮಹಾಸಿದ್ಧಾ ಹಠಯೋಗಪ್ರಭಾವತಃ ।
ಖಂಡಯಿತ್ವಾ ಕಾಲದಂಡಂ ಬ್ರಹ್ಮಾಂಡೆ ವಿಚರಂತಿ ತೆ ॥ (I–೮-೯)

ಶಿವಯೋಗವನ್ನು ಆಚರಿಸುವಾಗ ಪ್ರಾಣಾಯಾಮಾದಿಗಳಿಂದ ನಾಡಿಯ ಶುದ್ಧಿಯು ಅವಶ್ಯವಾಗಿರುವಂತೆ ಅಂತಃಕರಣ ಶುದ್ಧಿಯ ಅವಶ್ಯಕತೆಯ ಬಗೆಗೂ ಲಕ್ಷ್ಯವಿರಬೇಕು. “ಅರಿವುಳ್ಳುದೇ ಆಧಾರ, ಅನಾಹತ ಕೂಡಿಪ್ಪುದೇ ಸ್ವಾಧಿಷ್ಠಾನ, ಮಣಿಯ ಬೆಳಗಿನಲ್ಲಿಪ್ಪುದೇ ಮಣಿಪೂರಕ, ಆಶೆಯಿಲ್ಲದಿಹುದೇ ಅನಾಹತ, ಅಲ್ಲ ಅಹುದೆಂಬುದನತಿಗಳೆದುದೇ ವಿಶುದ್ಧಿ, ಸರ್ವ ಜೀವಂಗಳಲ್ಲಿ ದಯೆಯುಳ್ಳುದೇ ಆಜ್ಞೆ— ಇಂತಪ್ಪುದೀಗ ಶಿವಯೋಗ”— ಎಂಬ ಉಚ್ಚತಮವಾದ ಶಿವಯೋಗಪೂರ್ವಭಾವಿಯಾದ ಶುದ್ಧಾಂತಃಕರಣವನ್ನು ಅಲ್ಲಮ ಪ್ರಭುವು ಪಡೆದಿದ್ದನು. ಸಹಸ್ರಾರದ ನಿಲವಿನಲ್ಲಿ ನಿಂತು ಆಳವಾಗಿ ಅನುಭವದಲ್ಲಿ ಇಳಿಯುತ್ತ ಶಿಖಾಚಕ್ರ ಪಶ್ಚಿಮಚಕ್ರಗಳ ಸಾಮರ್ಥ್ಯವನ್ನೂ ಜಾಗ್ರತಗೊಳಿಸಿಕೊಂಡು ಅವುಗಳ ಮೂಲವಾದ ಅಣುಚಕ್ರದ ಮೂಲವನ್ನೂ ಆತನು ಅವಗತ ಮಾಡಿಕೊಂಡಿದ್ದನು, ಕರಗತವನ್ನೂ ಮಾಡಿಕೊಂಡಿದ್ದನು. ಆದುದರಿಂದ “ನಿಜವನರಿದ ನಿಶ್ಚಿಂತನೂ

ಮರಣವ ಗೆಲಿದ ಮಹಂತನೂ ಘನವ ಕಂಡ ಮಹಿಮನೂ, ಪರವನೊಳಕೊಂಡ ಪರಿಣಾಮಿಯೂ, ಬಯಲ ಒದಗಿದ ಭರಿತನೂ, ಗುಹೇಶ್ವರಲಿಂಗ ನಿರಾಳವ ನೊಳಕೊಂಡ ಸಹಜನೂ" ಅವನಾಗಿದ್ದನು. ಶಿವಯೋಗಸಾಧನೆಯಿಂದ ಶಿವಯೋಗಿ ಸಿದ್ಧರಾಮೇಶ್ವರನು ತೃತೀಯ ನೇತ್ರವನ್ನು ಪಡೆದು ಎರಡನೆಯ ಮುಕ್ಕಣ್ಣನೆಂದು ಹೆಸರುವಾಸಿಯಾಗಿದ್ದನು. ಈತನನ್ನು ಅಲ್ಲಮಪ್ರಭುವು ಸಂಧಿಸಿದಾಗ ಮಾತಿನ ಮಥನದಲ್ಲಿ ತನ್ನ ಹಣೆಗಣ್ಣಿನ ಜ್ವಾಲೆಯನ್ನು ಆತನ ಮೇಲೆ ಬಿಟ್ಟನೆಂದೂ, ಅದರ ಉಗ್ರತೆಯಿಂದ ಜನಜಂಗುಳಿ ತಳಮಳಿಸತೊಡಗಿ ತೆಂದೂ, ಈ ಉರಿಯಿಂದ ನಿರ್ಲಿಪ್ತನಾಗಿದ್ದ ಪ್ರಭುವು ಮಾತ್ರ ಪ್ರಶಾಂತವಾದ ಅಂತಃಕರಣವುಳ್ಳವನಾಗಿ ಕರುಣೆಯಿಂದ ಆ ಜ್ವಾಲೆಯನ್ನು ತನ್ನ ಅಂಗಾಲಲ್ಲಿ ಅಡಗಿಸಿಕೊಂಡು ನೀಲಕಂಠನಂತೆ ಲೋಕದ ಕ್ಷೇಮವನ್ನು ಒದೆವನೆಂದೂ ಒಂದು ಆಖ್ಯಾಯಿಕೆ ಇದೆಯಷ್ಟೆ! ಇದು ಅಲ್ಲಮ ಪ್ರಭುದೇವರ ಶಿವಯೋಗಸಾಧನೆಯ ಸಿದ್ಧಿಯ ಪರಿಣಾಮವಾಗಿದೆ. 'ಕಾಲಲ್ಲಿ ಕಣ್ಣ ಮೂಡಿತ್ತಕಂಡೆ' ಎಂಬ ಮಾತು ಇದಕ್ಕೆ ಬಲವಾದ ಸಾಕ್ಷ್ಯವಾಗಿರುತ್ತದೆ. ಶಿವಯೋಗ ಸಿದ್ಧಿಯಿಂದ ನಿರ್ವಯಲ ಶರೀರಿಯಾದ ಅವನು ತನ್ನ ಸನ್ನಿವೇಶ ಸಂಪರ್ಕಗಳಲ್ಲಿ ಬಂದ ಬಂದವರ ಅನುಭವದ ಆಳದಲ್ಲಿಯ ಲೋಪ-ದೋಷಗಳನ್ನು ನಿವಾರಿಸಿ ಅವರು ನಿರ್ವಯಲ ಸಮಾಧಿಯಲ್ಲಿ ನಿಲ್ಲುವ ರಹಸ್ಯವನ್ನು ನೀಡಲು ಬಲ್ಲಿದನಾಗಿದ್ದನು.

'ನಿಂದರೆ ನೆರಳಿಲ್ಲದ ನಡೆದರೆ ಹೆಜ್ಜೆಯಿಲ್ಲದ, ಪಾರದರ್ಶಕವಾದ ಯ್ಯೋಮ ಕಾಯವನ್ನು ಹೊತ್ತುಕೊಂಡು ವಜ್ರ ಶರೀರಿಯಾದ ಗೋರಕ್ಷನನ್ನು ಸಂಧಿಸಿ ದಾಗ ಕಾಯಕಲ್ಪವೇ ಮಾನದಂಡವಲ್ಲ; ದಿವ್ಯ ಬಯಲೊಡಲ ಸಂಪಾದನೆಯೇ ಶಿವಯೋಗದ ಚರಮ ಗುರಿ– ಎಂಬುದನ್ನು ಅವನಿಗೆ ಅರುಹಿದ ಅಲ್ಲಮಪ್ರಭುವು ಶ್ರೇಷ್ಠ ತರಗತಿಯ ಶಿವಯೋಗಿಯಾಗಿದ್ದನೆಂಬುದರಲ್ಲಿ ಸಂದೇಹವಿಲ್ಲ. ಆತನ ಅನುಭವದ ಉಕ್ತಿಗಳಿಂದ, ಬೆಡಗಿನ ನುಡಿಗಳಿಂದ ಮಮತೆ ವಾತ್ಸಲ್ಯಯುತ ಮಧುರ ಮಾತುಗಳಿಂದ ಹಾಗು ಸಮಕಾಲೀನರಾದ ಶಿವಶರಣ–ಶರಣೆಯರ ವಚನಗಳಿಂದ, ತರುವಾಯದವರ ಅಭಿಮತಗಳಿಂದ ಈ ಸಂಗತಿಯು ಅತಿ ಸ್ಪಷ್ಟ ವಾಗುವದು. ವೀರಶೈವ ಪರಂಪರೆಯಲ್ಲಿ ಶಿವಯೋಗದ ಉನ್ನತ ನಿಲವನ್ನು ಅನುಭವಿಸಿದ ಅನೇಕ ಶಿವಯೋಗಿಗಳನ್ನು ಕಾಣಬಹುದಾದರೂ ಕಾಲ ಕರ್ಮ ಗಳನ್ನು ಮೀರಿ, ಸಾಂಪ್ರದಾಯಿಕ ಆಚಾರಗಳನ್ನು ಕಿತ್ತೆಸೆದು, ಸರ್ವಾಚಾರ

ಸಂಪತ್ತಿನಿಂದ ಬೆಳಗುವ, ಮತ ಸಂಪ್ರದಾಯ ಜಾತಿ ಪಂಥಕ್ಕೆ ಹೊರಗಾದ ಮಾನವ ಕೋಟಿಗೇ ಸಂಬಂಧಪಟ್ಟ, ಮೀರಿದ ಕ್ರಿಯೆಯುಳ್ಳ ಅಲ್ಲಮ ಪ್ರಭುವಿನ ನಿಲವಿಗೆ ಸರಿದೊರೆಯಾದ ನಿಲವನ್ನು ಅನುಭವಿಸಿದವರು ಅತಿ ವಿರಳ, ಶಿವ-ಯೋಗದಿಂದ ಸಾಧಿಸಿದ ಅಲ್ಲಮ ಪ್ರಭುವಿನ ಸಂಪಾದನೆಯು, ವ್ಯೋಮ ಕಾಯ ಸಿದ್ಧಿಯು ಅಪೇಕ್ಷಣೀಯವೂ ಅನುಕರಣೀಯವೂ ಆಗಿರುವದು; ಮಾತ್ರವಲ್ಲ, ಶಿವಯೋಗದಲ್ಲಿ ಅನುಪಮವಾದ ಇಂತಹದೊಂದು ರಹಸ್ಯವಿದೆ ಎಂಬ ಮಾತನ್ನೂ ಸ್ಪಷ್ಟಗೊಳಿಸುವದು.

ಶ್ರೀಮದಮಲಜ್ಞಾನ ಭಕ್ತಿ
ಪ್ರೇಮ, ವೇದ ಪುರಾಣ ಶಾಸ್ತ್ರ-
ಸ್ತೋಮನುತ ನತ ಚಾರುಚರಣಾಂಭೋಜ ಘನಮಹಿಮ ।
ನಾಮ ರೂಪು ಕ್ರಿಯಾ ಕಲಾಪ ವಿ-
ರಾಮನನುಪಮ ದಿವ್ಯ ತೇಜೋ
ವ್ಯೋಮ ಮೂರುತಿ ಗುರುಗುಹೇಶ್ವರಲಿಂಗ ಶರಣಾರ್ಥಿ ॥

# ಮುಂಕಣ್

ಸುಮಾರು ಒಂದು ನೂರು ವರ್ಷಗಳಿಂದ ವಿಕಾಸವಾದವೆಂಬ ಹೊಸ-ದೊಂದು ದರ್ಶನವು ಪ್ರಚಾರದಲ್ಲಿ ಬಂದಿದೆ. ವಿಶ್ವದ ವ್ಯಾಪಾರದ ಗೂಢವನ್ನಾಗಲಿ, ವ್ಯಕ್ತಿಯ ವಿಚಾರಗಳ ಪ್ರೌಢಿಮೆಯನ್ನಾಗಲಿ ಐತಿಹಾಸಿಕ ದೃಷ್ಟಿಯಿಂದ ವಿವೇಚಿಸುವದೇ ಈ ವಿಕಾಸವಾದದ ಉದ್ದೇಶವಾಗಿದೆ. ಈ ಐತಿಹಾಸಿಕ ವಿವೇಚನೆಯು ಮತಸಿದ್ಧಾಂತಗಳಲ್ಲಿ, ನೀತಿಶಾಸ್ತ್ರ ಸಮಾಜಶಾಸ್ತ್ರ ರಾಜಕಾರಣ ಮುಂತಾದ ಶಾಸ್ತ್ರಗಳಲ್ಲಿ ಮಹತ್ತರವಾದ ಬದಲಾವಣೆಗಳನ್ನುಂಟು ಮಾಡಿದೆ. ಮನುಷ್ಯನು ಮೊದಲು ಕಾಡು ಸ್ಥಿತಿಯಲ್ಲಿದ್ದನೆಂದೂ ಬರಬರುತ್ತ ವಿಕಾಸಹೊಂದಿ ಅವನು ಈಗಿನ ಕಲಿತ ಸ್ಥಿತಿಗೆ ಬಂದು ಮುಟ್ಟಿದನೆಂದೂ ಐತಿಹಾಸಿಕ ದೃಷ್ಟಿಯು ತಿಳಿಸುತ್ತಿದ್ದರೆ, ದೇವರು ಮನುಷ್ಯನನ್ನು ಜ್ಞಾನವಿಶಿಷ್ಟನನ್ನಾಗಿಯೇ ಮೊದಲು ಹುಟ್ಟಿಸಿದನೆಂದೂ ಆದರೆ ಅವನು ತಿನ್ನಬಾರದ ಹಣ್ಣು ತಿಂದುದರಿಂದ ಅಜ್ಞಾನ-ವಾವರಿಸಿ ಈಗಿನ ಕೀಳು ಸ್ಥಿತಿಗೆ ಇಳಿದಿರುವನೆಂದೂ ಧಾರ್ಮಿಕ ದೃಷ್ಟಿಯು ಹೇಳುತ್ತದೆ. ಇಂದ್ರಿಯ ಗೋಚರವಾದ ವಿಷಯಗಳೇ ಮಾನವನ ಶ್ರದ್ಧೆಯ ವಿಷಯಗಳಾಗಿ ಪರಿಣಮಿಸುವವು ಎಂದರೆ ಮಾನವನು ಸಾಮಾನ್ಯವಾಗಿ ಪ್ರತ್ಯಕ್ಷವನ್ನೇ ನಂಬುವನು. ಅಪ್ರತ್ಯಕ್ಷವನ್ನು ನಂಬಲರಿಯನು— ಎಂಬುದು ಒಂದು; ಮತ್ತು ಮನುಷ್ಯನಿಗೆ ಮೊದಲು ದೃಶ್ಯ ಪದಾರ್ಥಗಳ ಜ್ಞಾನವಾದ ಬಳಿಕ ಅದೃಷ್ಟ ವಸ್ತುಗಳ ಜ್ಞಾನವಾಗುತ್ತದೆ, ಎಂದರೆ ಮಾನವನು ಬಾಲ್ಯ-ದಲ್ಲಿದ್ದಾಗ ಅವನ ಇಂದ್ರಿಯ ಹಾಗು ಮನಸ್ಸಿನ ಮೇಲೆ ಆದ ಸಂಸ್ಕಾರಗಳು ಕಾಲಾನುಕ್ರಮದಲ್ಲಿ ರೂಪುಗೊಂಡು ಮೊದಲು ಇಂದ್ರಿಯಜನ್ಯವಾದ ಪ್ರತ್ಯಕ್ಷ ಜ್ಞಾನವೇ ಕೊನೆಗೆ ಬುದ್ಧಿಗಮ್ಯವಾದ ಅನುಮಾನ ಜ್ಞಾನವಾಗಿ ಪರಿಣಮಿಸು-ವದು ಎಂಬುದು ಇನ್ನೊಂದು— ಹೀಗೆ ಇವೆರಡು ಐತಿಹಾಸಿಕ ದೃಷ್ಟಿಯ ಮೂಲ ಭೂತ ಸಿದ್ಧಾಂತಗಳಾಗಿರುತ್ತದೆ. ಇದರಿಂದ ಐತಿಹಾಸಿಕ ದೃಷ್ಟಿಯು ಪ್ರತ್ಯಕ್ಷ ಮತ್ತು ಅನುಮಾನ ಎಂಬ ಎರಡು ಪ್ರಮಾಣಗಳನ್ನು ಒಪ್ಪುತ್ತದೆಂದು ತಿಳಿವಳಿಕೆ ಯಾಗುತ್ತದೆ. ಇದು ಆಗಮ ಅಥವಾ ಆಪ್ತವಚನ ಮತ್ತು ಅಂತರ್‌ಜ್ಞಾನ ಎಂಬ ಪ್ರಮಾಣಗಳನ್ನು ಒಪ್ಪುವದಿಲ್ಲ. ಧಾರ್ಮಿಕ ದೃಷ್ಟಿಯು ಪ್ರಾಮುಖ್ಯವಾಗಿ ಇವೆರಡನ್ನೂ ಒಪ್ಪುತ್ತದೆ. ಪರ್ಯಾಲೋಚನೆ ಮಾಡಿ ನೋಡಿದರೆ ಇವೆರಡೂ

ದೃಷ್ಟಿಗಳು ಪರಸ್ಪರ ಪೂರಕವಾಗಿರುವವೆಂದು ಗೊತ್ತಾಗುವದು. ಯಾವುದೊಂದು ವಸ್ತುವನ್ನಾಗಲಿ ವಿಷಯವನ್ನಾಗಲಿ ಕುರಿತು ದೀರ್ಘವಾಗಿ ಆಲೋಚಿಸುವಾಗ ಇವೆರಡೂ ದೃಷ್ಟಿಗಳ ನೆರವು ಅನಿವಾರ್ಯವಾಗುವುದು. ಐತಿಹಾಸಿಕ ದೃಷ್ಟಿಯು ಆ ವಸ್ತುವಿನ ಇಲ್ಲವೆ ವಿಷಯದ ಬಾಹ್ಯ ಸ್ವರೂಪವನ್ನು ವಿಶ್ಲೇಷಿಸಿದರೆ ಧಾರ್ಮಿಕ ದೃಷ್ಟಿಯು ಆ ವಸ್ತು ಅಥವಾ ವಿಷಯದ ಅಂತರಂಗವನ್ನು ತೆರೆದು ತೋರಿಸು-ವದು. ಆದುದರಿಂದ ಇವೆರಡು ದೃಷ್ಟಿಗಳ ಸಮನ್ವಯವೇ ಯಾವುದೊಂದು ವಿವೇಚನೆಯ ಪದ್ಧತಿಯಾಗಿರಬೇಕು. ಮಾನವನಲ್ಲಿ ನೈಜವಾಗಿ ಕಂಡುಬರುವ ದೈವಿಕ ಭಾವನೆಯನ್ನು— ಅದು ಅರ್ಚನೆ ಪೂಜೆ, ಸ್ತೋತ್ರ ಭಜನೆ, ಜಪ ತಪ, ಧ್ಯಾನ ಮೌನ ಈ ಮುಂತಾದ ಸ್ವರೂಪಗಳಲ್ಲಿಯೇ ಕಾಣಿಸಿಕೊಳ್ಳಲೊಲ್ಲದೇಕೆ— ಈ ಸಮನ್ವಯ ದೃಷ್ಟಿಯಿಂದ ವಿಮರ್ಶಿಸುವುದೇ ನಮ್ಮ ಪ್ರಾಮುಖ್ಯವಾದ ಗುರಿಯಾಗಿರಬೇಕು.

ಕಣ್ಣಿಗೆ ಕಾಣುವ ಆದರೆ ಕೈಗೆ ನಿಲುಕದಿಹ ಹಾಗು ಅಪರಿಮಿತವಾದ ದೂರದ ಅಂತರದಲ್ಲಿರುವ ಸೂರ್ಯ ಚಂದ್ರ ಗ್ರಹ ನಕ್ಷತ್ರ ತಾರೆ ಈ ಮುಂತಾದ ಆಕಾಶದಲ್ಲಿಯ ಅದ್ಭುತ ಚಮತ್ಕೃತಿಗಳನ್ನು ಕಂಡು ಆದಿಮಾನವನು ಚಕಿತನಾದನು. ಹಾಗೆಯೇ ತನ್ನ ಸುತ್ತುಮುತ್ತಲಿನ ಜನರು ಹುಟ್ಟುಹೊಂದುಗಳಿಗೆ ತುತ್ತಾಗುತ್ತಿರುವುದನ್ನೂ ಕಂಡು ತಾನು ಮೊದಲಾಗಿ ಎಲ್ಲ ಪ್ರಾಣಿಗಳೂ ಸಾವುನೋವುಗಳಿಗೆ ಈಡಾಗುತ್ತಿರುವುದನ್ನು ಮನದಂದು ಭಯಭೀತನಾದನು. ಅವನ ಈ ಭಯಚಕಿತವೃತ್ತಿಯೇ ವಿಚಾರಪ್ರವೃತ್ತಿಗೆ ಚಾಲನೆಯನ್ನು ನೀಡಿತು, ಮತ್ತು ಅವನಲ್ಲಿ ದೈವಿಕಭಾವನೆಯನ್ನು ನಾಟಿಸಿತು. ಮೊದಮೊದಲು ಈ ಅಚ್ಚರಿಯು ಮುಗ್ಧಭಾವದಿಂದ ಮೊಳೆತರೂ ಕೊನೆಗೆ ಅದು ಸ್ನಿಗ್ಧಭಾವವಾಗಿ ಪರಿಣಮಿಸಿತು. 'ಅನಂತ ನಕ್ಷತ್ರಗಳಿಂದೊಪ್ಪುವ ಮೇಲಣ ಆಗಸ ಮತ್ತು ಒಳಗಿನಿಂದ ಸ್ಫುರಿಸುವ ಆತ್ಮನ ಕರ್ತವ್ಯಭಾವನೆ– ಇವೆರಡೂ ಮಾನವನ ಸೋಜಿಗವನ್ನು ಉದ್ದೀಪಿಸುವ ಶಾಶ್ವತವಾದ ವಸ್ತುಗಳೆ'ಂದು ಜರ್ಮನ್ ತತ್ವಜ್ಞಾನಿ ಕಾಂಟನ ಅಭಿಮತ. 'ಅಚ್ಚರಿಯೇ ತತ್ವಜ್ಞಾನದ ತವರು' ಎಂದು ಗ್ರೀಕ ತತ್ವಜ್ಞಾನಿ ಆರಿಸ್ಟಾಟಲನ ಅಭಿಪ್ರಾಯ. ವಿಚಾರಶೀಲನಾದ ಪ್ರತಿಯೊಬ್ಬನಿಗೂ, ಈ ಜಗತ್ತಿನ ಬಗೆಗೆ ತಿಳಿವಳಿಕೆ ಹೆಚ್ಚಾದಂತೆ ಇದು ಇನ್ನೂ ಆಶ್ಚರ್ಯಮಯ-ವಾಗಿಯೇ ಉಳಿಯುವದೆಂದು ಆಂಗ್ಲ ತತ್ವವೇತ್ತನಾದ ಕಾರ್ಲಾಯಿಲನು ಹೇಳಿರುವನು, ಭಿಜ. ಯಾಂತ್ರಿಕ ಉಪಕರಣಗಳಲ್ಲಿ ಸುಧಾರಣೆಯಾಗುತ್ತ ನಡೆದಂತೆ

ಖಗೋಲದ ಅದ್ಭುತರಮ್ಯವಾದ ಸಂಗತಿಗಳು ದಿನದಿನಕ್ಕೆ ಹೆಚ್ಚು ಹೆಚ್ಚಾಗಿ ಬೆಳಕಿಗೆ ಬರತೊಡಗಿರುತ್ತವೆ. ಜ್ಯೋತಿವತ್ಸರದ (Light-year) ದೂರದಾಚೆಗಿರುವ ನೀಹಾರಿಕೆಗಳಲ್ಲಿ (Galaxy) ಅಡಗಿರುವ ಅನೇಕ ನಕ್ಷತ್ರಗಳ ಗಾತ್ರವನ್ನು ಮನದಂದರೆ ಮನುಷ್ಯನು ಮೂಕವಿಸ್ಮಿತನಾಗಿ ನಿಲ್ಲುವನು. ವಿಶಾಲವಾದ ನಮ್ಮ ಈ ಜಗತ್ತು ಒಂದು ಸಾಸಿವೆಕಾಳಿನ ಸಹಸ್ರಪಾಲಿನಲ್ಲಿ ಒಂದು ಅಂಶಕ್ಕೂ ಸಾಟಿಯಾಗಲಾರದು. ಆದ್ದರಿಂದ ಖಗೋಲದ ಆದಿ–ಅಂತ್ಯಗಳನ್ನರಿಯುವದು ಅಸಾಧ್ಯವೆಂದು ಮಾನವನಿಗೆ ಇಂದು ಅನಿಸಹತ್ತಿರುತ್ತದೆ. 'ಓ ಮನವೆ ಬಾ ಮುಳುಗು ಶಾಂತಿಜಲನಿಧಿಯಲ್ಲಿ ನಾಕಿನ್ನು ಹೆಮ್ಮೆಯೇಕೆ ?' ಎಂಬೀ ಸ್ಥಿತಿಗೆ ಅವನು ಇಂದು ಬಂದು ನಿಲುಕಹತ್ತಿದ್ದಾನೆ. ಐನ್‌ಸ್ಟನ್ ಜೀನ ಮೊದಲಾದ ಪಾಶ್ಚಾತ್ಯ ವಿಜ್ಞಾನಿಗಳು ಅಪಾರವಾದ ಖಗೋಲದ ತಿಳಿವಳಿಕೆಯಿಂದ ಅಚ್ಚರಿಗೊಂಡು ಇದು ಒಂದು ಗೂಢವೆಂದೇ ಸಾರಿದ್ದಾರೆ.

ಖಗೋಲದ ಅಂತರಾಲದಲ್ಲಿ ಅನಂತ ಭೂಗೋಲಗಳು, ಜ್ಯೋತಿರ್ಗೋಲಗಳು ಅಡಗಿವೆ. ಯಾವ ಆಕಾಶದಲ್ಲಿ ಈ ಅದ್ಭುತ ಚಮತ್ಕಾರಗಳು ಚಲ್ಲವರಿದು ಕಂಗೊಳಿಸುತ್ತಿರುವವೋ ಆ ಆಕಾಶವು ಈ ಭೂಮಿಯನ್ನು ಒಂದು ಕೊಪ್ಪರಿಗೆಯಂತೆ ಆವರಿಸಿರುವುದನ್ನು ಕಂಡು, ಅದರ ಗೋಲಾಕೃತಿಯನ್ನು ನೋಡಿ ಗೋಳಕದ ಪ್ರತೀಕದಲ್ಲಿ ಆಕಾಶವನ್ನು ಪೂಜಿಸಲಿಕ್ಕೆ ಆರಂಭ ಮಾಡಿದನು. ಮಾನವನು. ಆಕಾಶದ ಪ್ರತೀಕವಾಗಿ ಮಾಡಿಕೊಂಡ ಚಿನ್ಹವೇ ಲಿಂಗವೆಂದು ಕೆಲವರು ವಾದಿಸುವರು. ಇದಲ್ಲದೆ ಸುಮಾರು ಐದುಸಾವಿರ ವರುಷಗಳ ಹಿಂದಿನ ಸಂಸ್ಕೃತಿಯನ್ನು ವಿಶದಪಡಿಸುವ ಮೊಹೆಂಜೋದಾರೊ ಮತ್ತು ಹರಪ್ಪಗಳ ಆಗೆತಗಳಲ್ಲಿ ದೊರೆತ ಲಿಂಗವು ಕೇವಲ ಗೋಲ ಆಕಾರವಾಗಿದೆ ಎಂದೂ ದೃಷ್ಟಾಂತ ಕೊಡುವರು. ಪೀಠಸ್ಥಲಿಂಗದ ಕಲ್ಪನೆಯು ಆಕಾಶದ ಉದಾಹರಣೆಯಿಂದ ಉದ್ಭವಿಸಿಲ್ಲ. ದೇವನ ಅಸ್ತಿತ್ವವನ್ನು ಹೇಳುವಾಗ ಅವನು ಮೇಲಿದ್ದಾನೆ ಎಂದು ತಿಳಿದು ಆಕಾಶದ ಕಡೆಗೆ ಕೈಮಾಡಿ ತೋರಿಸುವ ರೂಢಿಯು ಇಂದಿಗೂ ಇರುತ್ತದೆ; ಇದರಿಂದ ಮೊದಲು ಆಕಾಶದ ಅನಂತತೆಯ ವಿಸ್ತಾರವು ದೇವನ ಅಸ್ತಿತ್ವದ ಕಲ್ಪನೆಯನ್ನು ಉಂಟುಮಾಡಿರಲು ಸಾಕು. ಆಕಾಶವಿಲ್ಲದ ಸ್ಥಾನವೇ ಇಲ್ಲದಿರುವುದರಿಂದ ಅದನ್ನು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಜನಾಂಗದವರು ಬೇರೆ ಬೇರೆ ಹೆಸರಿನಿಂದ ಪೂಜಿಸಿರುವರು. ಇಜಿಪ್ತದಲ್ಲಿ ಆಕಾಶವು ಆಯ್‌ಸಿಸ್ (Isis) ಎಂಬ ಹೆಸರಿನಿಂದ ಪೂಜೆಗೊಂಡರೆ, ಅರಬಸ್ಥಾನದಲ್ಲಿ ಅದು ಸಂಗ–ಎ–

ಅಸ್ವದ್ ಎಂಬ ಹೆಸರಿನಿಂದ ಆದರಣೀಯವಾಗಿದೆ. ಸಂಗ–ಎ–ಅಸ್ವಾದ ಎಂದರೆ ಆಕಾಶದ ಪ್ರತೀಕವಾದ ಕಲ್ಲು ಎಂದು ಅರ್ಥವಾಗುವದು. ಕಾಅಬಾದಲ್ಲಿರುವ ಕರಿಯ ಕಲ್ಲು ಆಕಾಶದ ಪ್ರತೀಕವಾಗಿದೆ. (ಭಾರತೀಯರಲ್ಲಿ ಅದಕ್ಕೆ ಮಕ್ಕೇಶ್ವರ ಲಿಂಗ ಎಂದು ಹೆಸರು.) ಮುಸಲ್ಮಾನರ ಮಸೀದೆಗಳ ಮೇಲ್ಭಾಗವು ಗೋಲಾಕಾರ ವಾಗಿರುವದು; ಅದರ ಮೇಲೆ ಚಂದ್ರ ನಕ್ಷತ್ರಗಳ ಗುರುತುಗಳಿರುವವು. ಇದರಿಂದ ಅವರು ಆಕಾಶಪೂಜಕರೆಂದು ವಿದಿತವಾಗುವದಿಲ್ಲವೆ? ಪಾಲಿಸ್ತಾಯಿನದ ಪೂರ್ವಭಾಗದವರಾದ ಪುಲಸ್ತ್ಯರು ಗೋಲಾಕಾರವಾದ ನೂಲಿನ ಶಿರೋಭೂಷಣ ಗಳನ್ನು ಧರಿಸುತ್ತಿದ್ದರೆಂದೂ ಅಲ್ಲಿನ ಸ್ತ್ರೀಪುರುಷರು ತಮ್ಮ ತಲೆಗೂದಲುಗಳನ್ನು ಗೋಲಾಕಾರವಾಗಿ ಕಟ್ಟಿಕೊಳ್ಳುತ್ತಿದ್ದರೆಂದೂ ಸಂಶೋಧಕರು ಹೇಳುತ್ತಿದ್ದಾರೆ. ಪುರಾತನ ರೋಮಾಯರ ವ್ಹಿನಸ್ ದೇವತೆಯೂ ಒಂದು ನಕ್ಷತ್ರದ ಪ್ರತೀಕವೇ ಆಗಿದೆ.

ಆಕಾಶದ ಪ್ರತೀಕವಾದ ಗೋಳಕವು ಬಿಂದುವಾಗಿದೆಯೇ ವಿನಾ ಅದು ಪೀಠಸ್ಥ ಲಿಂಗವಲ್ಲ. ಅದು ಹೇಗೆ? ಯೋಗಶಾಸ್ತ್ರವು ಈ ಮಾತಿನ ಸತ್ಯ ವನ್ನು ಸ್ಪಷ್ಟಗೊಳಿಸುತ್ತದೆ. ಯೋಗಶಾಸ್ತ್ರದಲ್ಲಿ ಯಂತ್ರ ಮಂತ್ರ ತಂತ್ರ ಈ ಮೊದಲಾದವುಗಳಿಗೆ ಒಂದು ವಿಶಿಷ್ಟ ಸ್ಥಾನವುಂಟು. ಅಲ್ಲಿ ವಿವಿಧ ಆಕಾರದ ಯಂತ್ರಗಳಿಗೆ ಅತಿ ಮಹತ್ವವನ್ನು ಕೊಡಲಾಗಿದೆ. ಪಂಚಭೂತಗಳ ವಿವಿಧ ಆಕಾರಗಳನ್ನು ಯಂತ್ರಗಳಿಂದ ನಿರೂಪಿಸಲಾಗುತ್ತಿದೆ. ಆ ಯಂತ್ರಗಳು ಪಂಚ ಮಹಾಭೂತಗಳ ಸಾಮರ್ಥ್ಯವನ್ನು ಚಿತ್ರರೂಪವಾಗಿ ವ್ಯಕ್ತಗೊಳಿಸುತ್ತಿವೆ. ಅಲ್ಲಿ ಪೃಥ್ವಿಯು ಆಕಾರವು ಚೌಕೋನವೆಂದೂ, ಅಪ್ಪುವಿನ ಆಕಾರವು ಅರ್ಧ ಚಂದ್ರಾ ಕೃತಿಯೆಂದೂ, ಅಗ್ನಿಯ ಆಕಾರವು ತ್ರಿಕೋನವೆಂದೂ, ವಾಯುವಿನ ಆಕಾರವು ಎರಡು ತ್ರಿಕೋನಗಳನ್ನು ಒಂದರ ಮೇಲೊಂದು ಇರಿಸುವದರಿಂದುಂಟಾಗುವ ಷಟ್‌ಕೋನವೆಂದೂ, ಆಕಾಶದ ಆಕಾರವು ಬಿಂದು, ಶೂನ್ಯ ಅಥವಾ ವರ್ತುಲ ವೆಂದೂ ಯೋಗಶಾಸ್ತ್ರಜ್ಞರು ನಿರ್ಣಯಿಸಿದ್ದಾರೆ. ಶಬ್ದವು ಆಕಾಶ ತತ್ವದಿಂದ ಹುಟ್ಟುವದರಿಂದ ಮತ್ತು ಶಬ್ದದ ಅಲೆಗಳ ಪ್ರಸಾರವು ವರ್ತುಲಾಕಾರವಾಗಿರು-ವುದರಿಂದ ವರ್ತುಲ ಅಥವಾ ಗೋಲವು ಆಕಾಶ ತತ್ವದ ಆಕಾರವಾಯಿತೆಂದು ಹೇಳುವರು. ಈ ವರ್ತುಲ ಅಥವಾ ಗೋಲಕ್ಕೆ ಬಿಂದು, ಶೂನ್ಯ, ಬಯಲು ಎಂಬ ಪರ್ಯಾಯ ನಾಮಗಳುಂಟು. ವೀರಶೈವರಲ್ಲಿ ಶೂನ್ಯವು ಬಹಳ ಮಹತ್ವದ ಸ್ಥಾನ ವನ್ನು ಪಡೆದಿರುತ್ತದೆ. ವಚನ ವಾಙ್ಮಯದಲ್ಲಿ ಶೂನ್ಯ ಸ್ಥಲ, ಶೂನ್ಯ ಸಂಪಾದನೆ,

ಶೂನ್ಯ ಸಿದ್ಧಾಂತ, ಶೂನ್ಯ ಸಿಂಹಾಸನ ಇತ್ಯಾದಿ ಪದಗಳು ವಿಪುಲವಾಗಿ ದೊರೆಯುತ್ತವೆ. ಶೂನ್ಯ ಸಿಂಹಾಸನದ ಅಧಿಪತಿಯಾದ ಅಲ್ಲಮಪ್ರಭುದೇವರು ಕಲ್ಯಾಣದಲ್ಲಿ ಅನುಭವ ಮಂಟಪದ ಬಸವಾದಿ ಶಿವಶರಣರಿಗೆ ಶೂನ್ಯಸಿದ್ಧಾಂತ ಅಥವಾ ಗಗನಸಿದ್ಧಾಂತವನ್ನು ಬೋಧಿಸಿದರೆಂದು ತಿಳಿದುಬರುತ್ತದೆ. ಪ್ರಭುದೇವರು ಕೆಳಗೆ ಕೊಟ್ಟ ತಮ್ಮದೊಂದು ವಚನದಲ್ಲಿ,

ಆಯತವಾಯಿತು ಅನುಭಾವ, ಸ್ವಾಯತವಾಯಿತು ಶಿವಜ್ಞಾನ,
 ಸನ್ನಿಹಿತವಾಯಿತು ಸದಾಚಾರ—

ಇಂತೀ ತ್ರಿವಿಧವು ಏಕಾರ್ಥವಾಗಿ ಅರುಹಿನ ಹೃದಯ ಕಣ್ದೆರೆಯಲು,
 ಅನಂತ ಲೋಕಾಲೋಕದ ಅಸಂಖ್ಯ ಮಹಾ ಗಣಂಗಳೆಲ್ಲರು
 ಲಿಂಗಭಾವದಲ್ಲಿ ಭರಿತರಾಗಿ **ಗಗನಸಿದ್ಧಾಂತದಿಂದ** ಉಪದೇಶಕ್ಕೆ ಬಂದು,
 ಭಕ್ತಿ ರಾಜ್ಯವನೆ ಹೊಕ್ಕು ನಿಜಲಿಂಗ ಸುಕ್ಷೇತ್ರವನೆ ಕಂಡು,
 ಅಮೃತ ಸರೋವರದೊಳಗಣ ವಿವೇಕ ವೃಕ್ಷವು ಪಲ್ಲವಿಸಲು,
 ವಿರಕ್ತಿಯೆಂಬ ಪುಷ್ಪ ವಿಕಸಿತವಾಗಲು ಪರಮಾನಂದ ಮಠದೊಳಗೆ
 ಪರಿಣಾಮ ಪಶ್ಚಿಮ ಜ್ಯೋತಿಯ ಬೆಳಗಿನಲ್ಲಿ ಪರುಷ ಸಿಂಹಾಸನವನಿಕ್ಕಿ
 ಪ್ರಾಣಲಿಂಗ ಮೂರ್ತಿಗೊಂಡಿರಲು,
 ದಕ್ಷಿಣವ ದಾಂಟಿ ಉತ್ತರಾಬ್ಧಿಯಲ್ಲಿ ನಿಂದು,
 ಅಖಂಡ ಪೂಜೆಯ ಮಾಡುವವರಿಗೆ 'ನಮೋ ನಮಃ' ಎಂಬೆ ಗುಹೇಶ್ವರಾ.

ಈ ಗಗನಸಿದ್ಧಾಂತದ ಉಲ್ಲೇಖವನ್ನು ಮಾಡಿ ಅದರಿಂದುಂಟಾದ ಪರಿಣಾಮವನ್ನು ತಿಳಿಸಿರುವರು. ಬಸವಾದಿ ಪ್ರಮಥರು ಭಕ್ತಿಪಂಥದವರು. ಆದುದರಿಂದ ಸ್ವಾಭಾವಿಕವಾಗಿ ಅವರ ದೃಷ್ಟಿ ತಮ್ಮಿಂದ ಇತರವೆಂದೆನಿಸಿದ ಪರವಸ್ತುವಿನಲ್ಲಿ ಇದ್ದಿತು. ಆದರೆ ಪ್ರಭುದೇವರು ಬಂದ ಬಳಿಕ ಅವರ ಶೂನ್ಯ ಅಥವಾ ಗಗನ-ಸಿದ್ಧಾಂತದ, ಶೂನ್ಯಸಂಪಾದನೆಯ ಬೋಧದಿಂದ ಅವರು ಅಂತರ್ಮುಖಿಗಳಾದರೆಂದು ತಿಳಿಯಬಹುದಾಗಿದೆ. ಶಿವಶರಣರಿಗೆ ಬಾಹ್ಯದಲ್ಲಿದ್ದುದು ಬಿಂದುವಿನೊಳಗಿದೆ ಎಂಬ ಅರುಹು ಅನುಭವವೇದ್ಯವಾಯಿತು ಗಗನಸಿದ್ಧಾಂತದ ಬೋಧೆಯಿಂದ.

ಈ ಶೂನ್ಯ ಅಥವಾ ಬಿಂದುವು ಅನುಭವಮಾರ್ಗದಲ್ಲಿಯಷ್ಟೇ ಮಹತಿಯನ್ನು ಪಡೆದಿವೆ ಎಂದಲ್ಲ. ಗಣಿತಶಾಸ್ತ್ರದಲ್ಲಿಯೂ ವ್ಯವಹಾರದಲ್ಲಿಯೂ ಇದು

ಅನಿವಾರ್ಯವಾದ ಅಗತ್ಯವನ್ನು ಪಡೆದಿದೆ. ಈ ವಿಷಯದಲ್ಲಿ ಕೆಜೋರಿ ಎಂಬ ಪಾಶ್ಚಾತ್ಯ ಪಂಡಿತನು ಹೀಗೆ ಹೇಳುತ್ತಾನೆ: "ಪ್ರಪಂಚಕ್ಕೆ ಶೂನ್ಯವನ್ನು ದಾನ ಮಾಡಿದ ಕೀರ್ತಿ ಭಾರತೀಯರಿಗೆ ಸಲ್ಲತಕ್ಕದ್ದು. ಶೂನ್ಯದ ಕಲ್ಪನೆಯು ಮೊದಲು ಹೊಳೆದುದು ಯೋಗಿಗಳಿಗೆ. ಆರ್ಯ ಪೂರ್ವನಾಗರಿಕತೆಯನ್ನು ಎತ್ತಿ ಹೇಳುವ ಪುರಾತನ ಸೈಂಧವ ಸಂಸ್ಕೃತಿಯಲ್ಲಿ ಧ್ಯಾನಸ್ಥರಾದ ಯೋಗಿಗಳ ಚಿತ್ರಗಳು ದೊರೆಯುತ್ತವೆ. ಅಂತಹ ಯೋಗಿಗಳ ಯೋಗದೃಷ್ಟಿಗೆ ನಿಲುಕಿದ ವಿಷಯ-ವಿದು. ಆದುದರಿಂದ ಶೂನ್ಯದ ದಾನಕ್ಕಿಂತ ಮಿಗಿಲಾದ ದಾನ ಮತ್ತೊಂದು ಇಲ್ಲ." ಶೂನ್ಯದ ಸಹಾಯವಿಲ್ಲದೆ ದಶಕ ಶತಕ ಸಹಸ್ರಕ ಮುಂತಾದ ಸ್ಥಾನ-ಗಳು ಹುಟ್ಟಲಾರವು, ಹಾಗು ಎಣಿಕೆ ಸುಗಮವಾಗಿ ಸಾಗಲಾರದು. ಶೂನ್ಯದ ಅಸ್ತಿತ್ವವಿಲ್ಲದಿದ್ದರೆ ಗಣಿತ ಶಾಸ್ತ್ರವು ಆರಂಭದಲ್ಲಿಯೇ ನಿಂತುಹೋಗುತ್ತಿದ್ದಿತು.

ವಿಜ್ಞಾನದ ಪ್ರಗತಿಗೂ ಶೂನ್ಯವೇ ಆಧಾರವಾಗಿದೆ. ವ್ಯವಹಾರದಲ್ಲಿಯೂ ಸ್ಥಾನ ಭೇದದಿಂದ ಒಂದು ಮಹತ್ತರವಾದ ಪರಿಣಾಮವುಂಟಾಗುತ್ತಿದೆಯೆಂಬು ದನ್ನು ಅರಿಯಬೇಕು. ಚಿತೆ ಮತ್ತು ಚಿಂತೆ ಎಂಬ ಎರಡು ಪದಗಳನ್ನು ತೆಗೆದು ಕೊಂಡರೆ ಅವುಗಳ ರೂಪದಿಂದ ಅರ್ಥದೃಷ್ಟಿಯ ಮಹತಿಯನ್ನು ಗಣಿಸಬಹುದು. ಚಿತೆಯೆಂದರೂ ಬೆಂಕಿ, ಚಿಂತೆಯೆಂದರೂ ಬೆಂಕಿ. ಒಂದು ಹೊರಗಿನದಾದರೆ ಇನ್ನೊಂದು ಒಳಗಿನದು. 'ಚಿತಾಯಾಶ್ಚ ಚಿಂತಾಯಾಶ್ಚ ಬಿಂದು ಮಾತ್ರ ವಿಶೇಷತಃ'. ಹೊರಗಿನ ಬೆಂಕಿಯು ದೇಹವನ್ನು ನಿರ್ಜೀವವಾದ ವಸ್ತುವನ್ನು ಸುಡುತ್ತಿದ್ದರೆ ಒಳಗಿನ ಬೆಂಕಿಯು ಮನವನ್ನೂ ಆತ್ಮವನ್ನೂ ಸುಡುತ್ತದೆ. ಹೀಗೆ ಬಿಂದುವಿನ ಸ್ಥಾನ ಭೇದದಿಂದ ಅಪರಿಮಿತವಾದ ಅರ್ಥವೈಭವವೇ ಹೊರ-ಹೊಮ್ಮುವದು. 'ತನುವಿನ ಕೋಪ ತನ್ನ ಹಿರಿಯತನದ ಕೇಡು ಮನದ ಕೋಪ ತನ್ನ ಅರುಹಿನ ಕೇಡು', ಎಂದು ಅಣ್ಣ ಬಸವಣ್ಣನ ಅನುಭವದ ವಾಣಿ ಯಿದೆ. ಚಿಂತೆಯು ಬಹಿರಂಗದಲ್ಲಿ ವ್ಯಕ್ತವಾಗಿ ಕೋಪವಾಗಿಯೂ ಅಂತರಂಗ ದಲ್ಲಿ ನಿಗೂಹನವನ್ನೂ ಹೊಂದಿ ತಾಪವಾಗಿಯೂ ಪರಿಣಮಿಸುತ್ತದೆ. ಮನದ ಕೋಪವೇ ತಾಪ; ಇದುವೆ ಚಿಂತೆ. ಈ ಚಿಂತೆಯು ಸೇಂದ್ರಿಯ ಪ್ರಾಣಿಗಳನ್ನಷ್ಟೆ (Organic) ಬಾಧಿಸುತ್ತಿದೆಯೆಂದಲ್ಲ ನಿರಿಂದ್ರಿಯ (Inorganic) ವಸ್ತು ಗಳನ್ನೂ ಪರಿತಪಿಸುತ್ತಿದೆ ಎಂಬ ಭಾವವನ್ನು ಸಮುದ್ರದ ಬಗೆಗೆ ಷಡಕ್ಷರ ದೇವನು ರಚಿಸಿದ ಒಂದು ಪದ್ಯದಲ್ಲಿ ಕಾಣಬಹುದು :

ಮಗನೊರ್ವಂ ಪುಟ್ಟಿ ದೋಷಾಕರನೆನಿಸಿದನೆನ್ನೊಕ್ಕ್ರಗ್ರಕನ್ಯಾರುಮಾಪ್ತ್ರೆಳ್ ।
ಮಿಗೆ ನಿಚ್ಚಂ ಪಂಕಜಾತಾಶ್ರಿತೆಯೆನಿಸಿ ಕುಭೃದ್ವರ್ಗದೊಳ್ ಕ್ರೀಡಿಪಳ್ನಾ- ॥
ಕಿಗಣಂ ಸರ್ವಸ್ವಮಂ ಮೇಣ್ ಕವರ್ದುದಕಟ ಭಂಗಕ್ಕೆ ಪಕ್ಕಾದೆನೆಂದಾ- ।
ತ್ಮಗತೌರ್ವಾಗ್ನಿಚ್ಛಲಂಚೆತ್ತಳಲುರಿಯೊಳ್ಕೊಂಡಂತೆ ತೋರ್ಕುಂ ಸಮುದ್ರಂ ॥

ಸಮುದ್ರದಲ್ಲಿ ನೀರನ್ನು ಹೀರುವ ಬೆಂಕಿಯ ಕುದುರೆಗೆ ವಡವಾಗ್ನಿ ಬಡ-ವಾಗ್ನಿಯೆಂದು ಕರೆಯುವರಷ್ಟೆ! ಅದನ್ನು ಕವಿಯು ದುಃಖಾಗ್ನಿಯೆಂದು ಇಲ್ಲಿ ಉತ್ಪ್ರೇಕ್ಷಿಸಿದ್ದಾನೆ. ಕಡಲಿಗೆ ಅಷ್ಟೊಂದು ದುಃಖವುಂಟಾಗಲು ಕಾರಣವೇನು? ಚಂದ್ರ ಲಕ್ಷ್ಮಿ ಇವರೀರ್ವರೂ ಸಮುದ್ರದಲ್ಲಿ ಹುಟ್ಟಿದರೆಂಬ ಪೌರಾಣಿಕ ಕಲ್ಪನೆಯನ್ನು ಆಧಾರವಾಗಿಟ್ಟುಕೊಂಡು ಒಳ್ಳೆಯ ಮಕ್ಕಳಿರದ ಸಂಸಾರಿಗಳು ಪರಿ-ತಪಿಸುವಂತೆ ಸಮುದ್ರವು ದುಃಖಕ್ಕೆ ಒಳಗಾಗಿದೆ ಎಂದು ಕವಿಯು ಬಣ್ಣಿಸುತ್ತಾನೆ. ಚಂದ್ರನು ರಾತ್ರಿಯಲ್ಲಿ ಉದಿಸುವನು, ಆದ್ದರಿಂದ ಅವನು ದೋಷಾಕರನು. (ಅಪಕೀರ್ತಿಯನ್ನುಂಟುಮಾಡುವವನು). ಕಲಂಕವನ್ನು ತಂದೊಡ್ಡಿದವನೆಂಬ ಚಿಂತೆಯೊಂದು; ಮಗಳಾದ ಲಕ್ಷ್ಮಿ ಚಂಚಲೆ, ಪಾಪಿಷ್ಠರನ್ನು ಆಶ್ರಯಿಸಿದವಳು, ನೀಚರೊಡನೆ ವ್ಯವಹರಿಸಿ ನಾಶವಾಗುವಳೆಂಬ ಚಿಂತೆ ಇನ್ನೊಂದು; ಮಥನ ಕಾಲದಲ್ಲಿ ತನ್ನ ಸರ್ವಸ್ವವನ್ನೇ ಸೂರೆಗೊಂಡರಲ್ಲ ದೇವತೆಗಳು ಎಂಬ ಚಿಂತೆ ಮತ್ತೊಂದು; ತಾನು ಅಪಮಾನಕ್ಕೆ ಗುರಿಯಾದೆನಲ್ಲ (ಭಂಗಕ್ಕೆ ಪಕ್ಕಾಗು—ತೆರೆಗಳಿಗೆ ಆಶ್ರಯವಾಗು) ಎಂಬ ಚಿಂತೆ ಮಗದೊಂದು— ಹೀಗೆ ಸಮುದ್ರದಲ್ಲಿ ಮೂಡಿದ ಬಗೆಬಗೆಯ ಚಿಂತೆಗಳ ಒಬ್ಬುಳಿಯೇ ವಡವಾಗ್ನಿಯೆನಿಸಿ ಅದರ ಗರ್ಭವನ್ನು ಅಲ್ಲೋಲ ಕಲ್ಲೋಲಗೊಳಿಸುತ್ತಿದೆ. ಕವಿಯ ಕಲ್ಪನೆಯಿಲ್ಲಿ ಬಹಳ ಕಮನೀಯವಾಗಿದೆ. ಇದೇನೋ ಶ್ಲೇಷೆಯಿಂದೊಡಗೂಡಿದ ಹೇತೂತ್ಪ್ರೇಕ್ಷಾ-ಲಂಕಾರವೆಂದು ನಾವು ಕಡೆಗಣಿಸಿದರೂ ಈ ಕಲ್ಪನೆಯ ಮರೆಯಲ್ಲಿದ್ದ ಕಂಡಿತವನ್ನು ಮರೆಯಲಾಗದು. ಚಿಂತೆಯು ಎಂತಹ ಅನಾಹುತವನ್ನು ಮಾಡಬಲ್ಲದೆಂಬುದನ್ನು ಕವಿಯು ಬಹಳ ಮಾರ್ಮಿಕವಾಗಿ ಬಣ್ಣಿಸಿದ್ದಾನೆ. ಶೂನ್ಯದ ಸ್ಥಾನಭೇದ ಮಹತ್ವವನ್ನರಿತ ಬಳಿಕ ಮಗ–ಮಂಗ, ಸತಿ–ಸಂತಿ ಇತ್ಯಾದಿ ಪದಗಳಲ್ಲಿರುವ ಅರ್ಥದ ಮರ್ಮವನ್ನು ಗಮನಿಸಬೇಕು.

ಈ ವರೆಗೆ ಆಕಾಶದ ಐತಿಹಾಸಿಕ ದೃಷ್ಟಿಯನ್ನೊಳಗೊಂಡ ಭೌತಿಕ ವಿವೇಚನೆಯಾಯಿತು. ಬಿಂದು ಬಯಲು ಗಗನ ಶೂನ್ಯ ಮುಂತಾದ ಹೆಸರು

ಗಳಿಂದ ನಿರ್ದೇಶಿಸಲ್ಪಡುವ ಆಕಾಶವು ಭೌತಿಕ ದೃಷ್ಟಿಯಿಂದ ದಿಗಂಬರವಾದರೆ ಆಧ್ಯಾತ್ಮಿಕ ಇಲ್ಲವೆ ಅನುಭವ ದೃಷ್ಟಿಯಿಂದ ಅದು ಚಿದಂಬರವಾಗಿದೆ. ಈ ಚಿದಂಬರ ಅಥವಾ ಚಿದಾಕಾಶವನ್ನು "ನಾದಾಂತ ಕಾಂಚನ ಹರ್ಮ್ಯಾಂತರ ಭಾಸಮಾನ ಮಣಿದೀಪ" ಎಂದು ಯೋಗ ಶಾಸ್ತ್ರವು ವರ್ಣಿಸುತ್ತದೆ. ಬಂಗಾರದ ಮೇಲುಪ್ಪರಿಗೆಯಲ್ಲಿ ರತ್ನದೀಪವಿರುವಂತೆ ಪ್ರಣವಾದಿ ದಶವಿಧ ನಾದಗಳು ಲಯವಾಗುವ ಚಿದ್ಬಿಂದು ಸ್ಥಾನದ ಸುಷುಮ್ನಾಗ್ರದೊಳು ಜ್ಞಾನ ಜ್ಯೋತಿಯು ಬೆಳಗುತಿದೆ. ಎಂದರೆ ಮಾನವನ ದೇಹದಲ್ಲಿಯ ಬ್ರಹ್ಮರಂಧ್ರವನ್ನು ಸುತ್ತು-ವರೆದ ಸಹಸ್ರಾರ ಚಕ್ರವೇ ಚಿದಾಕಾಶ ಅಥವಾ ದಹರಾಕಾಶ. ಅದುವೆ ಜ್ಞಾನ ಜ್ಯೋತಿಯ ನಿಲಯ ಎಂಬ ಅರ್ಥಸೌಷ್ಠವವಡಗಿದೆ ಚಿದಂಬರ ಪದದಲ್ಲಿ.

ಬಾಹ್ಯಸೃಷ್ಟಿಯಲ್ಲಿ ಆಕಾಶದ ತರುವಾಯ ಮಾನವನ ಮನವನ್ನು ಸೆಳೆದ ದೃಶ್ಯವಸ್ತುವೆಂದರೆ ಹಿಮಾಲಯ ಪರ್ವತ. ಹಿಮಾಲಯವು ಬಹುಕಾಲದಿಂದಲೂ ಭಾರತೀಯರಿಗೆ ದಿವ್ಯವಾದ ಭವ್ಯವಾದ ಪೂಜ್ಯವಸ್ತುವಾಗಿದೆ, ಸ್ಫೂರ್ತಿಯ ಸೆಲೆಯಾಗಿದೆ. ಇಂದಿಗೂ ಅದರ ದರ್ಶನದಿಂದ ಮಾನವನ ಮೈ–ಮನಗಳೆರಡೂ ತೂಗಿ ತೊನೆದಾಡುವವು. ಕವಿಗೆ ಕಲ್ಪವೃಕ್ಷವಾಗಿ, ಗಾಯಕನಿಗೆ ಗಂಧರ್ವ ನಗರವಾಗಿ, ಯೋಗಿಗೆ ಧ್ಯಾನಮಂದಿರವಾಗಿ, ಶಿಲ್ಪಿಗೆ ಇಂದ್ರಚಾಪದ ಅಂದ ಚಂದವನ್ನು ಬೀರುವ ಆಗರವಾಗಿ, ಭಕ್ತನಿಗೆ ದಿವ್ಯದೇಗುಲವಾಗಿ, ರಸಿಕನಿಗೆ ಮನವನ್ನು ಆಕರ್ಷಿಸುವ ಲತಾವೃಕ್ಷಗಳಿಂದಲಂಕೃತವಾದ ಉಪವನವಾಗಿ, ಮುಮುಕ್ಷುವಿಗೆ ಮುಕ್ತಿಯ ಮುಕುರವಾಗಿ, ಲೌಕಿಕರಿಗೆ ಸ್ವರ್ಗಲೋಕವಾಗಿ ಹಿಮಾಲಯವು ಮಂಗಲಭೂಮಿಯಾಗಿ ಕಂಗೊಳಿಸುವದು. ಹಿಮಗಿರಿ ಕೈಲಾಸಗಿರಿ ಗಿರೀಶ ಎಂದು ಬಗೆಬಗೆಯ ಹೆಸರನ್ನು ತಳೆದ ಈ ಪರ್ವತದ ಶಿಖರಗಳು ಅತಿ ಉನ್ನತವಾಗಿರುವುದರಿಂದ ಇದರ ಪ್ರಸ್ಥ ಪ್ರದೇಶವು ಬಹು ವಿಶಾಲವಾಗಿ ಲಿಂಗಾಕೃತಿಯಂತೆ ತೋರುತ್ತದೆ. ಇದರ ಬಳಿಯಲ್ಲಿಯೇ ದೀರ್ಘವಾದ ಸುತ್ತಳತೆಯುಳ್ಳ ಮಾನಸಸರೋವರವು ಹೃದಯಾಹ್ಲಾದಕಾರಿಯಾಗಿ ಶೋಭಿಸುತ್ತಿದೆ. ಇದರ ನಡುವೆ ಗುಸಲ್‌ಗುಂಫಾ ಎಂಬ ಬೌದ್ಧ ವಿಹಾರವೊಂದುಂಟು. ಈ ಸರೋವರದಲ್ಲಿ ಬಗೆಬಗೆಯ ಹಂಸಪಕ್ಷಿಗಳು ಸ್ವಚ್ಛಂದವಾಗಿ ಜಲಕ್ರೀಡೆಯನ್ನಾಡುತ್ತಿವೆ. ಅದ್ದರಲ್ಲಿ ಅಲ್ಲಲ್ಲಿ ಬಿಸಿನೀರಿನ ಬುಗ್ಗೆಗಳಿವೆಯೆಂದೂ ಕಂಡುಹಿಡಿದಿದ್ದಾರೆ. ಇದರ ಶೀತಲ ಜಲವು ಸ್ಫಟಿಕದಂತೆ ಸ್ವಚ್ಛವಾಗಿಯೂ ಒಂದು ಬಗೆಯ ಸುವಾಸನೆಯುಳ್ಳ

ದ್ದಾಗಿಯೂ ಇದೆ. ಮಗ್ಗುಲಲ್ಲಿದ್ದ ಕೈಲಾಸಗಿರಿಯು ಇದರಲ್ಲಿ ಪ್ರತಿಬಿಂಬಿತವಾಗಿ ನೋಡಲಿಕ್ಕೆ ಶಿವಲಿಂಗದಂತೆಯೂ, ಮುಖಮಂಟಪದಿಂದ ಕೂಡಿದ ದಿವ್ಯವಾದ ಶಿವಾಲಯದಂತೆಯೂ ಕಾಣುವದೆಂದು ಭಾವಿಕರು ಹರ್ಷಭರಿತರಾಗುತ್ತಾರೆ.

ಪ್ರಾಚೀನ ಶಿಲ್ಪಶಾಸ್ತ್ರಪ್ರವೀಣರು ಇದನ್ನು ಕಂಡೇ ಶಿವಾಲಯ ಮತ್ತು ಪೀಠಸ್ಥಲಿಂಗಗಳ ನಿರ್ಮಾಣವನ್ನು ಪ್ರಾರಂಭಿಸಿದರೆಂದು ಪ್ರತೀತಿಯಿದೆ. ಕೈಲಾಸಗಿರಿಯು ಸೂರ್ಯಕಿರಣಗಳಿಂದ ಕವಿಯಲ್ಪಟ್ಟು ಬೆಳ್ಳಿಯಂತೆ ತಳತಳಿ ಸುತ್ತದೆ. ಈ ದೆಸೆಯಿಂದಲೇ ಅದಕ್ಕೆ ರಜತಾದ್ರಿ ಎಂದರೆ ಬೆಳ್ಳಿಬೆಟ್ಟ ಎಂಬ ಹೆಸರು ರೂಢವಾಗಿರಬೇಕು. ಪೀಠಸ್ಥಲಿಂಗದ ಕಲ್ಪನೆಯು ಆಕಾಶದಿಂದ ಮೂಡದೆ ಕೈಲಾಸಗಿರಿಯ ನೋಟದಿಂದ ಹುಟ್ಟಿರಬೇಕೆಂದು ಅನಿಸುತ್ತದೆ. ಶಿವಾಲಯ ನಿರ್ಮಾಣ, ಶಿವಲಿಂಗ ಸ್ಥಾಪನೆಯ ವಿಧಾನ ಇತ್ಯಾದಿಗಳು ಆಗಮದ ಮುಖ್ಯ ಭಾಗಗಳಾಗಿರುವುದರಿಂದ ಲಿಂಗದ ಕಲ್ಪನೆಯು ಪರ್ವತದಿಂದ ಹುಟ್ಟಿ ಅದು ಆಗಮ ಸಂಪ್ರದಾಯಕ್ಕೆ ಸಂಬಂಧಿಸಿದ್ದಾಗಿರಬೇಕು. ಶಿವಾಗಮ ಸೂತ್ರವಿಡಿದೇ ಕವಿಗಳು ಶ್ಲೇಷಾದಿ ಅಲಂಕಾರಗಳಿಂದ ಕೈಲಾಸಗಿರಿಯನ್ನು ಪರ್ವತಕ್ಕೂ ಶಿವನಿಗೂ ಅನ್ವಯಿಸುವಂತೆ ವರ್ಣಿಸಿದ್ದಾರೆ. ಕೈಲಾಸಗಿರಿಯು ಸಕಲರಿಗೂ ಮಂಗಳವನ್ನೂ ಸುಖವನ್ನೂ ಕೊಡುವುದರಿಂದ ಅದನ್ನು ಶಿವ ಶಂಕರ ಇತ್ಯಾದಿ ಯಾಗಿ ಬಣ್ಣಿಸಿದ್ದಾರೆ. ಷಡಕ್ಷರದೇವನು ಶ್ಲೇಷೆಯಿಂದ ಕೈಲಾಸಗಿರಿಯನ್ನು ಬಹು ಮನೋಜ್ಞವಾಗಿ ಬಣ್ಣಿಸಿದ್ದಾನೆ.

ಶ್ರೀಮತ್ಕಲ್ಯಾಣರೂಪಂ ಶರಭವನಗಜೋತ್ಸಂಗನಭ್ರಾಂತಯೋಗಾ- ।
ರಾಮಾಂಚತ್ಪಾದಪದ್ಮಂ ಸುರುಚಿ ಗಣಪ ವಿಭ್ರಾಜಿತಂ ಸಾರಸತ್ವ- ॥
ವ್ಯಾಮಿಶ್ರಾಹೀನ ಚಂಚತ್ ಕಟಕನಧಿಕದಿವ್ಯಾಗಮಂ ಸ್ವಸ್ಥಲೋಕ ।
ಸ್ತೋಮಂ ಭ್ರಾಜಿಷ್ಣುವೆಮ್ಮಂ ಪೊರೆಗೆ ವಿತತಭಾಸ್ವತ್ ಪ್ರಕಾಶಂ ಗಿರೀಶಂ ॥

ಭಾಗ್ಯ ಮಂಗಳಸ್ವರೂಪನಾಗಿ ಸೋಮ ಸ್ಕಂದ ಮೂರ್ತಿಯೆನಿಸಿ ಯೋಗಿ ಧ್ಯೇಯ ಚರಣನಾಗಿ ಪ್ರಮಥಸೇವಿತನಾಗಿ ನಾಗಾಭರಣನೆನಿಸಿ ಆಗಮ ಶಾಸ್ತ್ರಂಗಳನು ಪೇಳಿ ಕುಕ್ಷಿಸ್ಥ ಅಖಿಲಲೋಕನಾಗಿ ಸೂರ್ಯಾದಿಗಳ ಪ್ರಕಾಶಕನೆನಿಸಿ ಸ್ವಪ್ರಕಾಶಕನಾದ ಕೈಲಾಸಪತಿ ಶಂಕರನು ನಮ್ಮನ್ನೆಲ್ಲ ರಕ್ಷಿಸಲಿ ಎಂಬ ಶಿವನ ಪರವಾದ ಅರ್ಥವು ಇದರಲ್ಲಿ ಹುದುಗಿದೆ. ಹಾಗೆಯೇ ಮೇರುವು ಪೊಂಬೆಟ್ಟವಾದುದರಿಂದ ಕಲ್ಯಾಣ ರೂಪವಾಗಿದೆ. ಆ ಪರ್ವತದ ತಪ್ಪಲುಗಳಲ್ಲಿ ಶರಭಗಳೂ ಕಾಡಾನೆ

ಗಳೂ ಪ್ರಬಲವಾದ ಜಂತುಗಳೂ ಸರ್ಪಗಳೂ ಇರುತ್ತವೆ. ಅದರ ಪ್ರಾಂತ-ಪ್ರದೇಶಗಳಲ್ಲಿಯ ತೋಪುಗಳು ಮೇಘಮಂಡಲವನ್ನು ನೋಂಕುತ್ತವೆ. ಸಿಡಿಲು ಮಿಂಚುಗಳು ಹೊಳೆಹೊಳೆಯುತ್ತವೆ. ಅನೇಕಾನೇಕ ಕಲ್ಪವೃಕ್ಷಗಳು ಅಲ್ಲಿವೆ. ಭೂಮಿಗೆ ಆಧಾರವಾಗಿ ಇದು ಶೋಭಾಯಮಾನವಾಗಿದೆ. ಸೂರ್ಯನ ಬೆಳಕು ಈ ಬೆಟ್ಟವನ್ನು ಬಳಸಿರುತ್ತದೆ. ಬೆಟ್ಟಗಳಿಗೆಲ್ಲ ಇದು ಒಡೆಯನಂತಿದೆ. ಇಂತಹ ಮೇರುಪರ್ವತವು ನಮ್ಮನ್ನು ಕಾಪಾಡಲಿ ಎಂಬ ಪರ್ವತಪರವಾದ ಅರ್ಥವೂ ಇದರಲ್ಲಿ ಅಡಗಿದೆ.

ಕೈಲಾಸಗಿರಿಯ ಕಲ್ಪನೆಯಿಂದೊಗೆದ ಪೀಠಸ್ಥಲಿಂಗದ ಇಲ್ಲವೆ ಶಿವಲಿಂಗದ ಪೂಜೆಯಾದರೂ ಬಹು ಪುರಾತನದ್ದಾಗಿದೆ. ಯಾಕಂದರೆ ಹಿಮಾಲಯ ಪರ್ವತವು ಅನೇಕ ವರ್ಷಗಳಿಂದ ತಲೆಯೆತ್ತಿ ನಿಂತಿದೆ. ಶಿವಲಿಂಗ ಪೂಜೆಯು ಹಿಮಾಲಯದಾಚೆಗಿನ ಪ್ರದೇಶಗಳಲ್ಲಿಯೂ ಪಸರಿಸಿತ್ತೆಂದು ಅರಿಯಬಹುದಾಗಿದೆ. ಹನ್ನೆರಡು ವರ್ಷಗಳಿಗೊಮ್ಮೆ ಕೈಲಾಸಗಿರಿಯ ಜಾತ್ರೆ ನೆರೆಯುವದು. ಆಗ ತಿಬೇಟದಿಂದ ಸಾವಿರಾರು ಜನ ಶಿವಭಕ್ತರು ಯಾತ್ರಿಕರಾಗಿ ಬಂದು ನೇರುವರಂತೆ. ಹಿಂದಿನ ಕಾಲದಲ್ಲಿ ಯಾತ್ರೆ ಜಾತ್ರೆಗಳು ಇಂದು ವೃತ್ತಪತ್ರಗಳು ಮಾಡುತ್ತಿರುವ ಪ್ರಚಾರಕಾರ್ಯವನ್ನು ಮಾಡುತ್ತಿದ್ದುದರಿಂದ ಕೈಲಾಸಗಿರಿಯ ಪೂಜೆಯು ಶಿವಲಿಂಗದ ಆಕಾರದಲ್ಲಿ ಹೊರನಾಡುಗಳಲ್ಲಿ ಹರಡಿದ್ದರೆ ಹಾಗೆಯೇ, ಮೊಹೆಂಜೆದಾರೊ ಹರಪ್ಪಗಳ ಅಗೆತಗಳಲ್ಲಿ ಲಿಂಗದ ಕುರುಹುಗಳು ದೊರೆತಿದ್ದರೆ ನಾವು ಸೋಜಿಗಪಟ್ಟುಕೊಳ್ಳುವ ಕಾರಣವಿಲ್ಲ. ಹಿಂದಕ್ಕೆ ಇಂಗ್ಲಂಡದಲ್ಲಿದ್ದ ಡ್ರುಯಿಡುಗಳು (Druids) ಲಿಂಗಪೂಜಕರಾಗಿದ್ದರೆಂದು ಊಹಿಸಬಹುದಾಗಿದೆ. ಸುಮಾತ್ರಾ ಜಾವಾ ಇಂಡೋನೇಶಿಯ ಮೊದಲಾದ ನೆರೆಯ ರಾಷ್ಟ್ರಗಳಲ್ಲಿ ಹಿಂದಕ್ಕೆ ಶೈವ ಧರ್ಮವು ಪ್ರಸಾರವಾಗಿತ್ತೆಂಬುದನ್ನೂ ನೆನಿಸಿಕೊಳ್ಳಬೇಕು.

ಶಿವಲಿಂಗದ ಪ್ರಸಾರವೂ ಕೂಡ ಒಂದು ವಿಕಾಸಕ್ರಮವನ್ನೇ ಅನುಸರಿಸಿ ಆದಂತೆ ಕಂಡುಬರುತ್ತದೆ. ಮೊಟ್ಟ ಮೊದಲು ಮರಳಿನ ಲಿಂಗಗಳನ್ನು ಪೂಜಿಸುವ ಪರಿಪಾಠವಿದ್ದಿತು. ಆ ಬಳಿಕ ಅದು ಮಣ್ಣಿನ ಲಿಂಗಪೂಜೆಯಲ್ಲಿ ರೂಪಾಂತರ ಹೊಂದಿತು. ಆ ತರುವಾಯ ಮಳಲಲಿಂಗ ಮಣ್ಣಿನ ಲಿಂಗಗಳು ಬಹುದಿವಸಗಳವರೆಗೆ ಪೂಜೆಗೆ ಬಾರವೆಂದು ತಿಳಿದು ಕಲ್ಲಿನ ಲಿಂಗಗಳನ್ನು* ಪೂಜಿಸುವ ರೂಢಿಯುಂಟಾಗಿರಬೇಕು. ಹನ್ನೆರಡೇ ಜ್ಯೋತಿರ್ಲಿಂಗಗಳೆಂದು ಹೇಳುವುದರಿಂದ

* ಕೊನೆಗೆ ನೋಡಿರಿ.

ಮೊದಲು ಶಿಲೆಯಿಂದ ಮೂಡಿದ ಲಿಂಗಪೂಜೆಯಾದರೂ ಬಹುವಿರಳವಾಗಿರಬೇಕು. ಅವುಗಳ ದರ್ಶನಪೂಜೆಗಳು ಎಲ್ಲರಿಗೂ ಸುಲಭಸಾಧ್ಯವಿಲ್ಲೆಂದು ಬಗೆದು ಕ್ಷೇತ್ರ ಲಿಂಗ ಅಥವಾ ಪರ್ವತಲಿಂಗ ಪೂಜೆ ಬಳಕೆಯಲ್ಲಿ ಬಂದಿರಬೇಕು. ನದೀಜಲ ಗಳಲ್ಲಿರುವ ಬೆನಕಗಳನ್ನು ಲಿಂಗವೆಂದು ಪೂಜಿಸುವ ಕ್ರಮವನ್ನೂ ಕಾಣಬೇಕು. ಹಾಗೆಯೇ ಸೌಲಭ್ಯಕ್ಕಾಗಿ ಗ್ರಾಮಲಿಂಗಸ್ಥಾಪನೆ ಗೃಹಲಿಂಗಸ್ಥಾಪನೆಗಳು ಕ್ರಮವಾಗಿ ಪ್ರಚಾರದಲ್ಲಿ ಬಂದಿರಬೇಕು. ಗ್ರಾಮಲಿಂಗಪೂಜೆ ಗೃಹಲಿಂಗ ಪೂಜೆಗಳು ಕೊನೆಗೆ ಅಂಗದ ಮೇಲೆ ಲಿಂಗವನ್ನಿಟ್ಟು ಪೂಜಿಸುವ ಕ್ರಮಕ್ಕೆ ಅವ-ಕಾಶವನ್ನು ಮಾಡಿಕೊಟ್ಟಿರಬೇಕು. ಹೀಗೆ ಅಂಗದ ಮೇಲೆ ಲಿಂಗವನ್ನಿರಿಸಿ ಪೂಜಿಸುವವರೇ ಲಿಂಗಾಯತರು. ಇದನ್ನು ಪ್ರಸಾರಗೊಳಿಸಿದವರಲ್ಲಿ ಲಿಂಗವಂತ ಮತದೃಷ್ಟಿಯಿಂದ ಬಸಣ್ಣನವರು ಮೊದಲಿಗರಾದರೂ ಲಿಂಗಪೂಜೆಯ ವಿಕಾಸ ದೃಷ್ಟಿಯಿಂದ ಅವರೇ ಕೊನೆಯವರು.

ಅಂಗೈಯೊಳಗಣ ಲಿಂಗವ ನೋಡುತ್ತ
ಕಂಗಳು ಕಡೆಗೋಡಿವರಿಯುತ್ತ ಸುರಿಯುತ್ತ ಎಂದಿಪ್ಪೆನೋ!
ನೋಟವೇ ಪ್ರಾಣವಾಗಿ ಎಂದಿಪ್ಪೆನೋ!
ಕೂಟವೇ ಪ್ರಾಣವಾಗಿ ಎಂದಿಪ್ಪೆನೋ!
ಎನ್ನ ಅಂಗವಿಕಾರದ ಸಂಗವಳಿದು ಕೂಡಲ ಸಂಗಯ್ಯ,
'ಲಿಂಗ ಲಿಂಗ' ವೆನ್ನುತ್ತ!

ಬಸವಣ್ಣನವರ ಈ ವಚನವು ಅಂಗೈಯೊಳಗಣ ಲಿಂಗದ ಅಥವಾ ಇಷ್ಟಲಿಂಗದ ರಹಸ್ಯವನ್ನು ಸ್ಪಷ್ಟಪಡಿಸುತ್ತದೆ. ಸ್ಥಾವರಲಿಂಗಕ್ಕೆ ಅಂಗಳದಲ್ಲಿ ಪೀಠವಿದ್ದರೆ ಇಷ್ಟಲಿಂಗಕ್ಕೆ ಅಂಗೈಯೇ ಪೀಠವೆಂಬುದನ್ನು ಈ ವಚನವು ಸ್ಫುಟಗೊಳಿಸುತ್ತದೆ.

ಬಸವಣ್ಣನವರ ವಚನಗಳಲ್ಲಿ 'ಲಿಂಗವ ಮುಟ್ಟಿದ ಕೈ ಮೀಸಲು' ಎಂಬ ಮಾತು ಬರುವುದರಿಂದ ಲಿಂಗಪೂಜೆಯು ಸಹಜವಾದ ಕ್ರಮದಲ್ಲಿ ನೀತಿಯನ್ನು ಪೋಷಿಸಿದ ಮೇಲ್ಮೆಯು ಬಸವಣ್ಣನವರಿಗೆ ಸೇರಿರುವುದು. ಆಗಮಕಾರರಿಗೆ ಇಷ್ಟಲಿಂಗವೆಂದರೆ (ಇಷ್ಟಿ = ಯಜನ ಎಂಬುದರಿಂದ) ಪೂಜೆಗೆ ಅರ್ಹವಾದ ಲಿಂಗ ಎಂಬ ಅಭಿಪ್ರಾಯವಿದ್ದಿತು. ಆದರೆ ಅನಿಷ್ಟದೊಡನೆ ಹೋರಾಟವೇ ಇಷ್ಟ (ಲಿಂಗ)ದ ಪೂಜೆಯಾಗಿದ್ದಿತು ಬಸವಣ್ಣ ಮೊದಲಾದ ಶಿವಶರಣರಿಗೆ.

ದ್ವಂದ್ವದೊಡನೆ ಹೋರಾಟ, ಆ ಹೋರಾಟದಲ್ಲಿ ಹರುಷ ತಾಳುವದು ಇಷ್ಟಲಿಂಗ ಪೂಜೆಯ ರಹಸ್ಯ. ಕರ್ಮಭೂಮಿಯಲ್ಲಿ ಇಷ್ಟಾನಿಷ್ಟಗಳ ಹೋರಾಟವಿದೆ. ಆದುದರಿಂದ ಭಾವಪರಿವರ್ತನೆಗಾಗಿ ಅಹಿಂಸಾತ್ಮಕವಾಗಿ ಹೋರಾಡುವದು ಇಷ್ಟಲಿಂಗದ ಪೂಜೆಯ ದ್ಯೋತಕವಾಗಿದೆ.

ಪರ್ವತಕ್ಕೆ ಕ್ಷ್ಮಾಧರ ಭೂಭೃತ್, ಭೂಮಿಗೆ ಆಧಾರವಾದುದು ಎಂದು ಹೆಸರುಗಳಿವೆ. ಇದು ಭೌತಿಕ ದೃಷ್ಟಿಯಿಂದ ಪರ್ವತದ ಬಗೆಗೆ ಕಾಣುವ ಅರ್ಥವು. ಆಧ್ಯಾತ್ಮಿಕ ದೃಷ್ಟಿಯಿಂದ ಶುಭ ಮಂಗಳ ಸುಖ ಕಲ್ಯಾಣ ಇವನ್ನುಂಟುಮಾಡುವ ಹಾಗೆಯೇ ಸಮಾಜಕ್ಕೆ ಆಧಾರವಾದ ಸ್ತಂಭದೋಪಾದಿಯಲ್ಲಿ ಸತ್ಕ್ರಿಯೆ ಎಂಬ ಅರ್ಥವಾಗುವದು. ಈ ಸತ್ಕ್ರಿಯೆಯೇ 'ಶಿವ' ಎನಿಸುವದು. ಶಿವ ಎಂದರೆ The Good 'ಸತ್ಕ್ರಿಯೆಯೇ ಲಿಂಗ' 'ಸದಾಚಾರವೇ ಲಿಂಗ'ವೆಂಬ ಸಿದ್ಧಾಂತವನ್ನು ಶಿವಶರಣರು ಮಂಡಿಸಿ ಬಾಹ್ಯ ವಸ್ತುಗಳ, ಸ್ಥಾವರಗಳ ಪೂಜೆಯಿಂದ ಅಂತರಂಗ ನಿರೀಕ್ಷಣೆಗಾಗಿ ಅಂತರ್ಮುಖಿಗಳಾಗಲು ಇಷ್ಟಲಿಂಗ ಪೂಜೆಯನ್ನು ರೂಢಗೊಳಿಸಿದರು. ವೀರಶೈವ ತತ್ವಜ್ಞಾನಕ್ಕೆ ಶಕ್ತಿವಿಶಿಷ್ಟಾದ್ವೈತವೆಂದು ಹೆಸರು. ಅದ್ವೈತವು ವೇದಾಂತತತ್ವವನ್ನು ಪ್ರತಿಪಾದಿಸುತ್ತಿದೆ. ವೀರಶೈವರದು ನೆಲ ಹಿಡಿದ ನಿಷ್ಕ್ರಿಯೆಯ ವೇದಾಂತವಲ್ಲ. ಅದ್ವೈತದೊಡನೆ ಜೋಡಿಸಲ್ಪಟ್ಟ 'ಶಕ್ತಿವಿಶಿಷ್ಟ' ಎಂಬ ಪದವು ಅವರ ವೇದಾಂತವನ್ನು ಸತ್ಕ್ರಿಯೆಗೊಳಿಸುತ್ತಿದೆ. ಇದುವೆ ವೀರಶೈವದ ರಹಸ್ಯ. ವೀರಶೈವದಲ್ಲಿ ವೈರಾಗ್ಯಕ್ಕೆ ಅಗ್ರಸ್ಥಾನವಿದೆಯಾದರೂ ಅಲ್ಲಿ ಔದಾಸೀನ್ಯಕ್ಕೆ ಆಸ್ಪದವಿಲ್ಲ. ವೈರಾಗ್ಯ ಬೋಧಿಸಿ ಆದ ಮೇಲೆ ಉದಾಸೀನಕ್ಕೆ ತುತ್ತಾಗುವದು ಶಿವಶರಣರ ಇಷ್ಟಲಿಂಗಪೂಜೆಯ ಗೌಪ್ಯಕ್ಕೆ ಹೊರತಾದುದಾಗಿದೆ.

ಆಕಾಶ ಪರ್ವತಗಳ ತರುವಾಯ ಮಾನವನ ಮನವನ್ನು ಸೆಳೆದ ಇನ್ನೊಂದು ವಸ್ತು ಸಮುದ್ರವಾಗಿದೆ. ಸಮುದ್ರಕ್ಕೆ ಭೌತಿಕದೃಷ್ಟಿಯಿಂದ ನಾರಾಯಣ ಎಂದು ಹೆಸರು. 'ನಾರಾ ಆಯನಂ ಯಸ್ಯ ಸಃ ನಾರಾಯಣಃ' ನೀರನ್ನೇ ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡವ ಎಂದರೆ ಹೊಳೆ ಹಳ್ಳ ಮಳೆಗಳ ಎಲ್ಲ ನೀರಿಗೂ ವಾಸಸ್ಥಾನವಾದುದು ಸಮುದ್ರ. ಆಧ್ಯಾತ್ಮಿಕದೃಷ್ಟಿಯಿಂದ ಜೀವನಿಗೂ (ನರ) ನಾರಾ ಎಂದು ಹೆಸರು ಇರುವುದರಿಂದಲೂ ದೇವನೇ ಎಲ್ಲ ಜೀವರಿಗೂ ಆಶ್ರಯಸ್ಥಾನವಾಗಿರುವುದರಿಂದಲೂ ಅವನಿಗೆ ನಾರಾಯಣ ಎಂದು

ಹೆಸರುಂಟಾಯಿತು. ಮನುಸ್ಮೃತಿಯಲ್ಲಿ ಆಗಮಪ್ರಸಿದ್ಧ ನಾರಾಯಣ ಶಬ್ದ ನಿರ್ವಚನವನ್ನು ವಿಶದವಾಗಿ ಕೊಡಲಾಗಿದೆ.

ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ।
ತಾ ಯದಸ್ಯಾಯನಂ ಪೂರ್ವಂ ತೇನ ನಾರಾಯಣಃ ಸ್ಮೃತಃ॥ (೧-೧೦)

ಜೀವನ ಉತ್ಪತ್ತಿ ನೀರಿನಲ್ಲಿ ಎಂದು ಹೇಳುವರು. ಜಲಕ್ಕೂ ಜೀವನಿಗೂ ನಾರಾ ಎಂದು ಹೆಸರು. ದಾಳಿಂಬರ ಹಣ್ಣಿನಲ್ಲಿ ಬೀಜಗಳಿರುವಂತೆ ದೇವನ ಒಡಳಲ್ಲಿ ಜೀವರುಗಳಿಗೆ ಸ್ಥಾನವಿದೆ. ಆದ್ದರಿಂದ ನಾರಾಯಣ ಶಬ್ದದಿಂದ 'ಮುನ್ನಿರು' 'ಸಮುದ್ರ' 'ಮಹಾದೇವ' ಎಂಬ ಅರ್ಥದ ಅಭಿವ್ಯಕ್ತಿಯುಂಟಾಗುತ್ತದೆ.

ಗಂಗೆಗೆ 'ವಿಷ್ಣುಪದಿ' ಎಂದು ಹೆಸರಿದೆಯಷ್ಟೆ! ವಿಷ್ಣುವಿನ ಪಾದದಿಂದ ಹುಟ್ಟಿದ ಮೂಲಕ ಗಂಗೆಗೆ ವಿಷ್ಣುಪದಿ ಎಂಬ ಹೆಸರು ಬಂದಿದೆ. ಗಂಗೆ ಎಂದರೆ ಕೊಳ, ಮಳೆ, ಹೊಳೆಗಳ ನೀರು. ವಿಷ್ಣು ಎಂದರೆ ಸಮುದ್ರ.' ವಿಷಧಾತು ವ್ಯಾಪನೆ' ಎಂದರೆ ವ್ಯಾಪಿಸು ಎಂಬರ್ಥದಲ್ಲಿ ವಿಷ್ ಧಾತುವಿನ ಪ್ರಯೋಗವಾಗುತ್ತದೆ. ಆದ್ದರಿಂದ ವಿಷ್ಣು ಎಂದರೆ ವ್ಯಾಪ್ತಿಯನ್ನು ಪಡೆದವ, ವ್ಯಾಪಿಸಿದವ, ಬಹಳ ವ್ಯಾಪಕವಾದವ. ಸಮುದ್ರವು ಜಲರಾಶಿಯಿಂದ ಕೂಡಿ ಆಳವೂ ಅಪಾರವೂ ಆದುದರಿಂದ ಭೌತಿಕ ದೃಷ್ಟಿಯಿಂದ ಅದಕ್ಕೆ 'ವಿಷ್ಣು' ಎಂದು ಹೆಸರುಂಟಾಗಿದೆ. ಮಳೆಯು ಧಾರೆಯಾಗಿ ಸುರಿಯಬೇಕಾದರೆ ಸಮುದ್ರದ ನೀರು ಉಗಿಯಾಗಿ, ಅದಕ್ಕೆ ತಂಪು ತಗಲಿ, ಘನೀಭೂತವಾಗಿ ಮೋಡಗಳಾಗಬೇಕು; ಮೋಡಗಳಿಗೆ ತಂಪು ಹವೆ ತಾಕಿ ಮಳೆ ಸುರಿಯಬೇಕು; ಹೀಗೆ ಮಳೆ ಬರಲು ಸಮುದ್ರವೇ ಕಾರಣವಾಗುವದು. ಅದರಿಂದಾಗಿ ಗಂಗೆಗೆ 'ವಿಷ್ಣುಪದಿ' ಎಂಬ ಹೆಸರು ಬಂದುದು ಸಯುಕ್ತಿಕವಾಗಿದೆ. 'ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್'– ಮಹಾಭಾರತದ ಮೊದಲನೆಯ ಶ್ಲೋಕದ ಈ ಮೊದಲನೆಯ ಸಾಲಿನಲ್ಲಿ ಸಾಕ್ಷಾತ್ ಪರಮಾತ್ಮನೇ ನರ-ನಾರಾಯಣರೆಂಬ ಋಷಿಗಳ ರೂಪ ತಾಳಿದನೆಂದೂ, ಅವರೇ ಮುಂದೆ ಅರ್ಜುನ ಕೃಷ್ಣರಾದರೆಂದೂ ಭಾವಿಸಿ ಮಂಗಲಾಚರಣವನ್ನು ಸ್ಮರಿಸಲಾಗಿದೆ. ಈ ಪೌರಾಣಿಕ ವರ್ಣನೆಯು ಹೇಗೆಯೇ ಇರಲಿ. ನರ-ನಾರಾಯಣರೆಂದರೆ ಜೀವ–ದೇವ ಎಂಬ ಆಧ್ಯಾತ್ಮಿಕ ಅರ್ಥವನ್ನು ಮರೆಯಕೂಡದು. ದೇವನನ್ನು ಆಶ್ರಯಿಸಿದ ಜೀವನು ಭಕ್ತನು. ನರ–ನಾರಾಯಣರಿಗೆ ನಮಸ್ಕಾರವನ್ನು ಅರ್ಪಿಸಿ ಎಂದರೆ ದೇವ-ಭಕ್ತರನ್ನು ವಂದಿಸಿ ಎಂಬದು ಪ್ರಸಿದ್ಧ

ವಾದ ಅರ್ಥವಿದೆ. ದೇವ–ಜೀವರಲ್ಲಿ ಅನ್ಯೋನ್ಯವಾದ ಆಶ್ರಯವಿರುವುದರಿಂದ, ಪರಸ್ಪರ ಆಕರ್ಷಣವಿರುವುದರಿಂದ ಜೀವನ ಒಲವು ನಿಲವುಗಳನ್ನು ಅವಗ್ರಹಿಸಿ ದೇವನು ಅನುಗ್ರಹಿಸುವನು. ಇದು ಭಕ್ತಿಪಂಥದ ಸಿದ್ಧಾಂತ. ಈ ಭಕ್ತಿರಸವೇ, ಈ ನೀರೇ, ಈ ಅಮೃತವೇ ದೇವ-ಭಕ್ತರನ್ನು ಒಂದುಗೂಡಿಸುವ ಅಂದವಾದ ಬೆಸುಗೆಯಾಗಿದೆ. ದೇವ ಜೀವ ಮತ್ತು ದೇವ ಭಕ್ತ ಈ ಪದಗಳಲ್ಲಿ ದೇವನು ಎರಡರಲ್ಲಿಯೂ ಸಮಾನವಾಗಿದ್ದಾನೆ. ಜೀವನಿಗೂ ಭಕ್ತನಿಗೂ ಅಂತರವಿಲ್ಲವೆ? ಇದೆ. ಜೀವನು ಬಾಹ್ಯ ವಸ್ತುಗಳೇ ತನಗೆ ಆಧಾರವೆನ್ನುವನು. ಭಕ್ತನಿಗೆ ಮಾತ್ರ ದೇವನೇ ಆಧಾರವಾಗಿರುವನು. ಭಕ್ತ ಪದವು 'ಭಜ್–ವಿಂಗಡಿಸು, ಆಶ್ರಯಿಸು' ಎಂಬ ಅರ್ಥದರ್ಶಕವಾಗಿದೆ. ಭಕ್ತನಿಗೆ ಯಾವುದರಿಂದ ವಿಂಗಡಿಕೆಯುಂಟಾಗ ಬೇಕು; ಹಾಗು ಯಾವುದರಲ್ಲಿ ಅವನಿಗೆ ಆಶ್ರಯವಾಗಬೇಕು? ಬಾಹ್ಯವಸ್ತು ಗಳಲ್ಲಿರುವ ಇಂದ್ರಿಯವ್ಯಾಪ್ತಿಯು ಕಡಿಮೆಯಾಗುತ್ತ ದೇವನಲ್ಲಿ ಮನವು ಲೀನ ವಾಗುತ್ತ ನಡೆದಂತೆ ಜೀವನೇ ಭಕ್ತನಾಗಿ ಕಂಗೊಳಿಸುವನು. ಹಾಗೆ ಭಕ್ತಿಯು ಹೆಚ್ಚಾಗುತ್ತ ಸಾಗಿದಂತೆ ದೇವನ ಅನುಗ್ರಹ ಶಕ್ತಿಯು ಇಳಿದು ಬಂದು ಭಕ್ತನಲ್ಲಿ ಲೀನವಾಗುವದು; ಅನುಪಮ ಲೀಲೆಗೆ ಅವಕಾಶವನ್ನು ಪಡೆಯುವದು. ಭಕ್ತನು ಪ್ರಕೃತಿಯ ನಟನೆಗೆ ಬಾಗುವದಿಲ್ಲ, ಬೀಗಿ ನಿಲ್ಲುವನು. ಪ್ರಕೃತಿಗೆ ಬಾಗದಾತನೇ ಭಕ್ತನು. ಅವನೇ ಪರಮಪುರುಷ, ಪುರುಷೋತ್ತಮ. ಹೀಗೆ ಭೌತಿಕ ದೃಷ್ಟಿ ಯಿಂದ ಸಮುದ್ರವಾದುದು ಆಧ್ಯಾತ್ಮಿಕ ದೃಷ್ಟಿಯಿಂದ ನಾರಾಯಣನಾಗಿ ಭಕ್ತಿ ಪಂಥ ಅಥವಾ ಭಾಗವತ ಮತದ ಪ್ರಾದುರ್ಭಾವಕ್ಕೆ ಅವಕಾಶವನ್ನು ನೀಡಿತು.

ಐತಿಹಾಸಿಕ ಧಾರ್ಮಿಕ ದೃಷ್ಟಿಗಳ ಸಮನ್ವಯದಿಂದ ನೋಡಲಾಗಿ ಆಕಾಶ ಪರ್ವತ ಸಮುದ್ರಗಳ ಅರ್ಚನೆಯು ಅನುಕ್ರಮದಿಂದ ಜ್ಞಾನ ಕ್ರಿಯೆ ಭಕ್ತಿಗಳ ಅನುಭವವಾಗಿ ಆಧ್ಯಾತ್ಮದಲ್ಲಿ ಪರಿವರ್ತನೆ ಹೊಂದಿರುತ್ತದೆ. ಸುಜ್ಞಾನ–ಸತ್ಕ್ರಿಯೆ–ಸದ್ಭಕ್ತಿಗಳ ಸಂಮಿಲನವೇ ಸ್ವಾನುಭಾವ ಸಿದ್ಧಿ. ಇವು ಸ್ವಾನು-ಭಾವದ ತ್ರಿವಿಧ ಎಸಳುಗಳಿದ್ದಂತೆ. ಇವನ್ನು ತನ್ನಲ್ಲಿಯೇ ಅನುಭವದಿಂದ ಅರಿತುಕೊಳ್ಳಬೇಕು. ಇವನ್ನು ಸ್ವಾನುಭವದಿಂದ ಅಂಗಕ್ಕೆ ಅಳವಡಿಸಿಕೊಂಡವನೇ ಅರ್ಥಾತ್ ಸ್ವಾನುಭಾವ ಸಿದ್ಧನೇ ಮುಂಕಣ್ ಅಥವಾ ಮುಕ್ಕಣ್ಣನು. ಜ್ಞಾನ–ಕ್ರಿಯೆ–ಭಕ್ತಿ ಪಂಥಗಳ ಆರಾಧ್ಯ ದೇವತೆಗಳು ಬ್ರಹ್ಮನ್ ಶಿವ ವಿಷ್ಣು. ಬೃಹತ್ ಪದವು, ಬೃಹ್– ದೊಡ್ಡದಾಗು ಬೆಳೆ ಎಂಬದರಿಂದುಂಟಾಗಿರುತ್ತದೆ. ಬೃಹತ್

ಎಂದರೆ ಬೆಳೆಯುತ್ತಿರುವದು, ವಿಸ್ತಾರಗೊಳ್ಳುವದು. ಇದರಿಂದ 'ಬ್ರಹ್ಮ' ಪದ ನಿಷ್ಪತ್ತಿಯಾಗಿದೆ. ಆಕಾಶವು ಪ್ರತಿ ಹದಿನಾಲ್ಕು ಅಬ್ಜ ವರ್ಷಗಳಿಗೊಮ್ಮೆ ಇಮ್ಮಡಿಯಾಗುವದೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಆಕಾಶವು ಅಥವಾ ಬಯಲು ಬೆಳೆಯುತ್ತ ದೊಡ್ಡದಾಗುತ್ತ ವಿಸ್ತಾರವಾಗುತ್ತ ನಡೆದಿರುವುದರಿಂದ ಅದಕ್ಕೆ ಬ್ರಹ್ಮ ಎಂಬ ಹೆಸರುಂಟಾಯಿತು. ಹಾಗೆಯೇ ಜ್ಞಾನವೂ ಸ್ಫುರಣಾತ್ಮಕ ವಿದ್ದು ಯಾವಾಗಲೂ ವಿಸ್ತಾರವಾಗುತ್ತ ವಿಶಾಲವಾದ ಪ್ರವಾಹರೂಪದಲ್ಲಿರು ವದು. ಆದ್ದರಿಂದ ಜ್ಞಾನಪ್ರವಾಹವನ್ನು ತಡೆಯುವದು ಬಲು ಹಾನಿಕಾರಕ.

ಈ ವಿಶ್ವದ ಮೂಲ ತತ್ವವು ಸತ್ಯಂ ಶಿವಂ ಸುಂದರಂ ಎಂಬ ಶಬ್ದಗಳಿಂದ ವರ್ಣಿತವಾಗಿದೆ. ಸತ್ಯವಾಗಿದ್ದುದು ಸುಂದರವಾಗಿಯೂ ಇರುತ್ತದೆ. ಸತ್ಯ ಸೌಂದರ್ಯಗಳಿಂದ ಕೂಡಿಕೊಂಡಿರುವದು ಶಕ್ತಿ ಸಂಪನ್ನವಾಗಿರುವುದರಿಂದ. ಅದು ಶಿವನೊಡನೆ ಅವಿನಾಭಾವ ಸಂಬಂಧದಿಂದಿರುವ ಶಿವಶಕ್ತಿಪರವಾಗಿರುತ್ತದೆ. ಶಕ್ತಿಯನ್ನು ನಾದ ಬಿಂದು ಕಳೆಗಳಿಂದ ಕೂಡಿಕೊಂಡಿದೆಯೆಂದು ನಿರೂಪಿಸ-ಲಾಗಿದೆ. ಬರಿಯ ನಾದ ಬಿಂದು ಕಳೆಗಳು ಜಡವಾದವುಗಳು. ಚಿತ್ ಅಥವಾ ಅರಿವಿನಿಂದ ಬೆರೆತವುಗಳಲ್ಲ. ಬರಿಯ ಶಕ್ತಿಯು ಕುರುಡವಾಗಿರುತ್ತದೆ. ಶಿವಶಕ್ತಿಯು ಮಾತು ಹಾಗಲ್ಲ. ಅದು ಅರಿವಿನ ಪ್ರಕಾಶದಿಂದ ಒಡವೆರೆದುಕೊಂಡಿರುತ್ತದೆ. ಆದ್ದರಿಂದ ಅದನ್ನು 'ಚಿತ್' ಪದಯುಕ್ತವಾಗಿ ತಿಳಿಸುತ್ತಾರೆ. ಚಿತ್ ಶಕ್ತಿಯು ಚಿನ್ನಾದ ಚಿದ್ಬಿಂದು ಚಿತ್ಕಳೆಗಳಿಂದ ಕೂಡಿಕೊಂಡಿರುತ್ತದೆ. 'ನದ, ನಾದ' ಪದ ಗಳಲ್ಲಿ 'ಗತಿ ಸ್ಪಂದನ' ವಾಚಕ ಅರ್ಥವಡಗಿದೆ. ಸ್ಪಂದನವು ಸವನವ್ಯೋನ್ಮೇಷ ವಾದ ಶಕ್ತಿದ್ಯೋತಕವಾಗಿದೆ. 'ಬಿಂದು' ಪದವು ಪ್ರಕಾಶಪರವಾಗಿದೆ. ಆತ್ಮನ ಸ್ವವಿಮರ್ಶೆಯು ಪ್ರಕಾಶದಿಂದೊಡಗೂಡಿದೆ. ಇದರಂತೆಯೇ ಆಕುಂಚನ ವಿಸ್ತಾರ ಗುಣಧರ್ಮವುಳ್ಳ ನಿಗೂಹನ ಶಕ್ತಿಯು, ಸಾಕಾರ ನಿರಾಕಾರಗಳಿಗೆ ಸಗುಣ ನಿರ್ಗುಣಗಳಿಗೆ ಮೂಲಭೂತವಾಗಿ ಆನಂದದ್ಯೋತಕವಾದ ಕಲಾರೂಪ ದಿಂದ ನಿರರ್ಗಳವಾಗಿ ವ್ಯಕ್ತವಾಗುವದು. ಪರಶಿವನ ಗತಿ ಪ್ರಕಾಶ ಸ್ವರೂಪಗಳನ್ನು ಅರಿತು ಅಂಗವಿಸಿಕೊಳ್ಳುವದಕ್ಕೆ ಚಿನ್ನಾದ ಚಿದ್ಬಿಂದು ಚಿತ್ಕಲಾ ಸಾಕ್ಷಾತ್ಕಾರ ವೆಂದು ಹೆಸರು. ಇದು ಸತ್ ಚಿತ್ ಆನಂದ ಸ್ವರೂಪವಾಗಿರುವುದರಿಂದ ಪರಶಿವನು ಸಚ್ಚಿದಾನಂದರೂಪನಾಗಿದ್ದಾನೆಂದು ವರ್ಣಿಸಲಾಗಿದೆ. 'ರಸೋ ವೈ ಪುರುಷಃ' ಎಂದು ಪುರುಷನ ಲಕ್ಷಣವನ್ನು ಹೇಳಲಾಗಿದೆ. ಪುರುಷನು ರಸಮಯ

ವಾಗಿದ್ದಂತೆ ಪರಮಾತ್ಮನೂ ರಸರೂಪವಾಗಿದ್ದಾನೆ. ಪುರುಷ ಪರಮಾತ್ಮರ ಒಂದುಗೂಡುವಿಕೆಯು ರಸದಲ್ಲಿ ರಸವು, ಹಾಲಿನಲ್ಲಿ ಹಾಲು ಬೆರೆತಂತೆ. ಭಕ್ತಿರಸವು ಉಕ್ಕಿ ಹೊಚ್ಚ ಹೊನಲಾಗಿ ಹರಿದು, ಸಮುದ್ರದೋಪಾದಿಯಲ್ಲಿದ್ದ ಪರಮಾತ್ಮ ಶಕ್ತಿಯಲ್ಲಿ ಒಂದುಗೂಡಿ ಹೋಗಬೇಕು. ಅದೇಕೆ ಆ ಭಕ್ತಿಯೇ ಶಕ್ತಿಯಾಗಿ ಪರಿಣಮಿಸಬೇಕು. ಈ ತಾದಾತ್ಮ್ಯಭಾವದಲ್ಲಿ ನಾನು ನೀನು ಎಂಬುದಕೆ ತೆರಹಿಲ್ಲ. ತಾನೇ ತಾನಾದ ಅವಸ್ಥೆಯದು. ಇಂತು ಸ್ವಾನುಭಾವದ ತ್ರಿವಿಧ ಎಸಳುಗಳಂತಿರುವ ಸುಜ್ಞಾನ ಸತ್ಕ್ರಿಯೆ ಸದ್ಭಕ್ತಿಗಳ ಮೂರ್ತಿಗಳನ್ನು ತನ್ನಲ್ಲಿ ಕಂಡುಕೊಂಡವನೇ ಮುಂಕಣ್ಣ ಅಥವಾ ಮುಕ್ಕಣ್ಣ ಎಂದು ವಿದಿತವಾಗದಿರದು.

* ಬೃಹತ್‌ಸ್ತೋತ್ರ ರತ್ನಾಕರದಲ್ಲಿ– ಸೌರಾಷ್ಟ್ರದ ಸೋಮನಾಥ, ಶ್ರೀಶೈಲ ಮಲ್ಲಿಕಾರ್ಜುನ, ಉಜ್ಜಯಿನಿಯ ಮಹಾಕಾಲ, ಅಮಲೇಶ್ವರನೆನಿಸಿದ ಓಂಕಾರೇಶ್ವರ, ಪರಳಿಯ ವೈಜನಾಥ, ಡಾಕಿನಿಯ ಭೀಮಾಶಂಕರ, ಸೇತುಬಂಧವೆಂದು ಹೆಸರಾದ ದಕ್ಷಿಣಭಾರತದ ರಾಮೇಶ್ವರ, ದಾರುಕಾವನದ ನಾಗೇಶ್ವರ, ಕಾಶಿಯ ವಿಶ್ವನಾಥ, ಗೋದಾವರಿ ದಂಡೆಯ ಮೇಲಿನ ನಾಸಿಕದ ತ್ರ್ಯಂಬಕೇಶ್ವರ, ಹಿಮಾಲಯದಲ್ಲಿಯ ಕೇದಾರೇಶ್ವರ ಮತ್ತು ಪ್ರಸಿದ್ಧ ಶಿವಾಲಯವೆನಿಸಿದ ಘುಸ್ರುಣೇಶ್ವರ– ಇವು ಹನ್ನೆರಡು ಜ್ಯೋತಿರ್ಲಿಂಗಗಳೆಂದು ಸ್ತೋತ್ರಪದ್ಯಗಳನ್ನು ಕೊಡಲಾಗಿದೆ.

ಸೌರಾಷ್ಟ್ರೇ ಸೋಮನಾಥಂ ಚ ಶ್ರೀಶೈಲೇ ಮಲ್ಲಿಕಾರ್ಜುನಂ ।
ಉಜ್ಜಯಿನ್ಯಾಂ ಮಹಾಕಾಲಂ ಓಂಕಾರಮಮಲೇಶ್ವರಂ ॥

ಪರಲ್ಯಾಂ ವೈಜನಾಥಂ ಚ ಡಾಕಿನ್ಯಾಂ ಭೀಮಶಂಕರಂ ।
ಸೇತುಬಂಧೇ ತು ರಾಮೇಶಂ ನಾಗೇಶಂ ದಾರುಕಾವನೇ ॥

ವಾರಾಣಸ್ಯಾಂ ತು ವಿಶ್ವೇಶಂ ತ್ರ್ಯಂಬಕಂ ಗೌತಮೀತಟೇ ।
ಹಿಮಾಲಯೇ ತು ಕೇದಾರಂ ಘುಸ್ರುಣೇಶಂ ಶಿವಾಲಯೇ ॥

ಏತಾನಿ ಜ್ಯೋತಿರ್ಲಿಂಗಾನಿ.